| ಕ್ರಸಂ | ಡಿಸಿಸಿ ಬ್ಯಾಂಕಿನ ಹೆಸರು | ಜಿಲ್ಲೆಯ ಹೆಸರು | ಸಾಲ ಯೋಜನೆ ಶೀರ್ಷಿಕೆ (ಕೃಷಿ ಮತ್ತು ಕೃಷಿಯೇತರ ಒಳಗೊಂಡಂತೆ) | ಸಾಲ ನೀಡಲು ಬ್ಯಾಂಕ್ ನಿಗಧಿ ಪಡಿಸಿರುವ ಮಾನದಂಡ | 2017-18 | | 2018-19 | | 2019-20 | | 2020-21 ಡಿಸೆಂಬರ್ ಅಂತ್ಯದವರೆಗೆ | |
|---|---|---|---|---|---|---|---|---|---|---|---|---|
| | | | 6. ಎನ್. ಎಫ್. ಎಸ್. | ಆಸ್ತಿ ಭದ್ರತೆ ಆಧಾರದ ಮೇಲೆ ಹಾಗೂ ನಬಾರ್ಡ ನಿಗಧಿಪಡಿಸಿದ ಮಿತಿಯನುಸಾರ | 10 | 58.00 | 9 | 46.11 | 10 | 51.15 | 5 | 16.65 |
| | | | 7. ಓವ್ಹರಡ್ರಾಫ್ಟ ಸಾಲ | ಉದ್ಯೋಗ ಹಾಗೂ ವ್ಯವಹಾರನಕ್ಕೆನುಸರಿಸಿ ಆಸ್ತಿ ಭದ್ರತೆ ಆದಾರದ ಮೇಲೆ | 405 | 2014.37 | 512 | 2951.07 | 510 | 2960.61 | 425 | 2173.01 |
| | | | 8. ಸುಲಭ ಸಾಲ | ಉದ್ಯೋಗ ಹಾಗೂ ವ್ಯವಹಾರನಕ್ಕೆನುಸರಿಸಿ ಆಸ್ತಿ ಭದ್ರತೆ ಆದಾರದ ಮೇಲೆ | 235 | 1146.02 | 215 | 1119.45 | 401 | 1998.15 | 210 | 916.78 |
| | | | 9. ಕಛೇರಿ ಬಾಡಿಗೆ ಆಧಾರದ ಮೇಲೆ ಸಾಲ | ಬ್ಯಾಂಕಿಗೆ ನೀಡಿದ ಕಛೇರಿ ಬಾಡಿಗೆ ಆಧಾರದ ಮೇಲೆ | 3 | 2.77 | 0 | 0.00 | 4 | 38.48 | 4 | 39.00 |
| | | | 6 ಸರಕಾರದ ಯೋಜನೆಯಡಿಯಲ್ಲಿ | | | | | | | | | |

| ಕ್ರ.ಸಂ | ಡಿಸಿಸಿ ಬ್ಯಾಂಕಿನ ಹೆಸರು | ಜಿಲ್ಲೆಯ ಹೆಸರು | ಸಾಲ ಯೋಜನೆ ಶೀರ್ಷಿಕೆ (ಕೃಷಿ ಮತ್ತು ಕೃಷಿಯೇತರ ಒಳಗೊಂಡಂತೆ) | ಸಾಲ ನೀಡಲು ಬ್ಯಾಂಕ್ ನಿಗಧಿ ಪಡಿಸಿರುವ ಮಾನದಂಡ | 2017-18 | | 2018-19 | | 2019-20 | | 2020-21 ಡಿಸೆಂಬರ್ ಅಂತ್ಯದವರೆಗೆ | |
|---|---|---|---|---|---|---|---|---|---|---|---|---|
| 6 | | | 1]ಮುಡಿಯುವ ಬಂಡವಾಳಕ್ಕಾಗಿ ಹೈನುಗಾರಿಕೆ | ರೂ.3.00 ಲಕ್ಷದವರೆಗಿನ ಶೂನ್ಯ ಬಡ್ಡಿದರದ ರಾಜ್ಯ ಸರಕಾರ/ನಬಾರ್ಡ್‌ನ ಆದೇಶದಂತೆ ತಾಂತ್ರಿಕ ತಜ್ಞರ ಸಮಿತಿಯ ಸ್ಕೇಲ್ ಆಫ್ ಫೈನಾನ್ಸ್‌ಗೆ ಅನುಸರಿಸಿ ರೈತರಿಗೆ ಸಾಲ ನೀಡುವುದು. ಹೈನುಗಾರಿಕೆ ಸಾಲ ಒಳಗೊಂಡಂತೆ ಸಾಲದ ಪರಮಾವಧಿ 2.00 ಲಕ್ಷದವರೆಗೆ | 10 | 0.22 | 0 | 0.00 | 0 | 0.00 | 0 | 0.00 |
| 7 | | | 2 ಬಡವರ ಬಂಧು | ನೋಂದಾಯಿತ ಬೀದಿ ವ್ಯಾಪಾರಿ, ವ್ಯಾಪಾರ ಜರುಗಿಸುವ ಸ್ಥಳದ ಪೋಟ, ಆಧಾರ ಕಾರ್ಡ. | 0 | 0.00 | 120 | 9.95 | 225 | 18.00 | 66 | 5.25 |
| 8 | | | 3 ಕಾಯಕ ಯೋಜನೆ | ಸ್ವಸಹಾಯಕ ಗುಂಪುಗಳ ಪ್ರೋಜೆಕ್ಟ ರಿಪೋರ್ಟ ಆಧಾರ, ಅವರ ಉದ್ಯಮಮಶೀಲತೆಗೆ ಪಡೆದ ತರಬೇತಿ | 0 | 0.00 | 15 | 48.00 | 25 | 94.90 | 20 | 88.30 |

| ಕ್ರ.ಸಂ | ಡಿಸಿಸಿ ಬ್ಯಾಂಕಿನ ಹೆಸರು | ಜಿಲ್ಲೆಯ ಹೆಸರು | ಸಾಲ ಯೋಜನೆ ಶೀರ್ಷಿಕೆ (ಕೃಷಿ ಮತ್ತು ಕೃಷಿಯೇತರ ಒಳಗೊಂಡಂತೆ) | ಸಾಲ ನೀಡಲು ಬ್ಯಾಂಕ್ ನಿಗಧಿ ಪಡಿಸಿರುವ ಮಾನದಂಡ | 2017-18 | | 2018-19 | | 2019-20 | | 2020-21 ಡಿಸೆಂಬರ್ ಅಂತ್ಯದವರೆಗೆ | |
|---|---|---|---|---|---|---|---|---|---|---|---|---|
| 9 | | | 4. PACS as MSC | ನಬಾರ್ಡ್‌ನ ಮಾನದಂಡದನ್ವಯ ಪ್ಯಾಕ್ಸ್‌ಗಳಿಗೆ ಸಾಲ ಒದಗಿಸುವುದು, ಸಂಘವು 3 ವರ್ಷ ಸತತ ಲಾಭದಲ್ಲಿರಬೇಕು, ಖಾಲಿ ಜಾಗೆಯನ್ನು ಹೊಂದಿರಬೇಕು, ಸಾಲ ಮರುಪಾವತಿ ಸಾಮರ್ಥ್ಯಹೊಂದಿರ ಬೇಕು | 0 | 0.00 | 0 | 0.00 | 0 | 0.00 | 16 | 127.55 |
| | | | ಒಟ್ಟು | | **186029** | **160494.58** | **233313** | **184856.72** | **262824** | **205387.50** | **207365** | **184578.44** |
| 1 | ಕೆ.ಸಿ.ಸಿ ಬ್ಯಾಂಕ ಲಿ., ಧಾರವಾಡ | ಧಾರವಾಡ | ಅಲ್ಪಾವಧಿ ಸಾಲ | ಬೆಳೆವಾರು ಸ್ಕೇಲ್ ಫೈನಾನ್ಸ ಹಾಗೂ ಹಿಡುವಳಿ ಆದಾರದ ಮೇಲೆ ಗರಿಷ್ಠ 3.00 ಲಕ್ಷದವರೆಗೆ | 18551 | 7791.63 | 20545 | 8236.09 | 24302 | 9999.41 | 23114 | 11609.99 |
| 2 | | | ಮಧ್ಯಮಾವಧಿ ಸಾಲ | ಜಮೀನು ಆಧಾರದ ಮೇಲೆ ಯೋಜನಾವಾರು "ನಬಾರ್ಡ" ನಿಗಧಿಪಡಿಸಿದ ಯನಿಟ್ ಆಫ್ ಕಾಸ್ಟ ಆಧಾರದ ಮೇಲೆ ಗರಿಷ್ಠ 10.00 ಲಕ್ಷದವರೆಗೆ | 17 | 79.88 | 62 | 327.29 | 74 | 369.96 | 124 | 706.68 |

| ಕ್ರಸಂ | ಡಿಸಿಸಿ ಬ್ಯಾಂಕಿನ ಹೆಸರು | ಜಿಲ್ಲೆಯ ಹೆಸರು | ಸಾಲ ಯೋಜನೆ ಶೀರ್ಷಿಕೆ (ಕೃಷಿ ಮತ್ತು ಕೃಷಿಯೇತರ ಒಳಗೊಂಡಂತೆ) | ಸಾಲ ನೀಡಲು ಬ್ಯಾಂಕ್ ನಿಗಧಿ ಪಡಿಸಿರುವ ಮಾನದಂಡ | 2017-18 | | 2018-19 | | 2019-20 | | 2020-21 ಡಿಸೆಂಬರ್ ಅಂತ್ಯದವರೆಗೆ | |
|---|---|---|---|---|---|---|---|---|---|---|---|---|
| 3 | | | ಪಶುಸಂಗೋಪನೆ ಉದ್ದೇಶಕ್ಕೆ ದುಡಿಯುವ ಬಂಡವಾಳ ಸಾಲ | ರೂ.3.00 ಲಕ್ಷದವರೆಗಿನ ಶೂನ್ಯ ಬಡ್ಡಿದರದ ರಾಜ್ಯ ಸರಕಾರ/ನಬಾರ್ಡ್‌ನ ಆದೇಶದಂತೆ ತಾಂತ್ರಿಕ ತಜ್ಞರ ಸಮಿತಿಯ ಸ್ಕೇಲ್ ಆಫ್ ಫೈನಾನ್ಸ್‌ಗೆ ಅನುಸರಿಸಿ ರೈತರಿಗೆ ಸಾಲ ನೀಡುವುದು. ಹೈನುಗಾರಿಕೆ ಸಾಲ ಒಳಗೊಂಡಂತೆ ಸಾಲದ ಪರಮಾವಧಿ 2.00 ಲಕ್ಷದವರೆಗೆ | 0 | 0.00 | 0 | 0.00 | 0 | 0.00 | 221 | 101.00 |
| 4 | | | ವಾಹನ ಸಾಲ | ವಾಹನದ ಕಿಮ್ಮತ್ತಿನ ಪ್ರತಿಶತ 85% ರಷ್ಟು ಹಾಗೂ ಆಸ್ತಿ ಭದ್ರತೆ ಮತ್ತು ವಾಹನ ಹೈಪೋಥಿಕೇಶನ ಆಧಾರದ ಮೇಲೆ | 134 | 77.97 | 266 | 133.40 | 290 | 217.59 | 350 | 274.50 |
| 5 | | | ಪಗಾರ ಆಧಾರಿತ ಸಾಲ | ಒಟ್ಟು ಸಂಬಳದ 15 ಪಟ್ಟು, ಶೇ. 50 ರಷ್ಟು ಕಡಿತ ಒಳಪಟ್ಟು ವೇತನದ ಆಧಾರಿತ ಸಾಲ | 893 | 1285.06 | 905 | 1222.57 | 1200 | 1511.07 | 1506 | 1694.22 |
| 6 | | | ಬಂಗಾರ ದಾಗೀನುಗಳ ಸಾಲ | 2400/- ಒಂದಿ ಗ್ರಾಂಗೆ, ಬಂಗಾರ ಅಡವಿಟ್ಟ ಸಾಲ | 2146 | 1077.91 | 2487 | 1293.56 | 3394 | 1543.24 | 9031 | 2098.05 |

| ಕ್ರಸಂ | ಡಿಸಿಸಿ ಬ್ಯಾಂಕಿನ ಹೆಸರು | ಜಿಲ್ಲೆಯ ಹೆಸರು | ಸಾಲ ಯೋಜನೆ ಶೀರ್ಷಿಕೆ (ಕೃಷಿ ಮತ್ತು ಕೃಷಿಯೇತರ ಒಳಗೊಂಡಂತೆ) | ಸಾಲ ನೀಡಲು ಬ್ಯಾಂಕ್ ನಿಗಧಿ ಪಡಿಸಿರುವ ಮಾನದಂಡ | 2017-18 | | 2018-19 | | 2019-20 | | 2020-21 ಡಿಸೆಂಬರ್ ಅಂತ್ಯದವರೆಗೆ | |
|---|---|---|---|---|---|---|---|---|---|---|---|---|
| 7 | | | ಗೃಹ ಸಾಲ | ಅಂದಾಜುವೆಚ್ಚದ ಶೇ. 75 ರಷ್ಟು, ಹೈಪೋಥಿಕೇಶನ್ ಆಫ್ ಪ್ಲಾಟ ಹಾಗೂ ಬಿಲ್ಡಿಂಗ | 0 | 0.00 | 0 | 0.00 | 3 | 24.32 | 15 | 215.00 |
| 8 | | | ನಗದು ಪತ್ತಿನ ಸಾಲ | ವ್ಯಾಪಾರ ಮತ್ತು ಬ್ಯಾಂಕಿನ ವಹಿವಾಟಿನ ಆಧಾರದ ಮೇಲೆ ಸಾಲ ನೀಡುವುದು | 506 | 998.15 | 678 | 1255.85 | 714 | 1687.00 | 592 | 1421.05 |
| 9 | | | ಸ್ವಸಹಾಯ ಗುಂಪು ಸಾಲ | ಬ್ಯಾಂಕಿನಲ್ಲಿ ಹೊಂದಿದ ಉಳಿತಾಯ ಖಾತೆ ಆಧಾರದ ಮೇಲೆ ಹಾಗೂ ನಬಾರ್ಡ ಮಾರ್ಗಸೂಚಿನುಸಾರ ಶೇಕಡಾ 0/4ರ ಬಡ್ಡಿದರದಲ್ಲಿ | 242 | 441.23 | 172 | 298.95 | 170 | 329.20 | 164 | 469.45 |
| 10 | | | ಕಾಯಕ ಯೋಜನೆ | ಸ್ವಸಹಾಯಕ ಗುಂಪುಗಳ ಪ್ರೋಜೆಕ್ಟ ರಿಪೋರ್ಟ ಆಧಾರ, ಅವರ ಉದ್ಯಮಮಶೀಲತೆಗೆ ಪಡೆದ ತರಬೇತಿ | 0 | 0.00 | 3 | 15.00 | 15 | 56.00 | 16 | 68.00 |

| ಕ್ರ.ಸಂ | ಡಿಸಿಸಿ ಬ್ಯಾಂಕಿನ ಹೆಸರು | ಜಿಲ್ಲೆಯ ಹೆಸರು | ಸಾಲ ಯೋಜನೆ ಶೀರ್ಷಿಕೆ (ಕೃಷಿ ಮತ್ತು ಕೃಷಿಯೇತರ ಒಳಗೊಂಡಂತೆ) | ಸಾಲ ನೀಡಲು ಬ್ಯಾಂಕ್ ನಿಗಧಿ ಪಡಿಸಿರುವ ಮಾನದಂಡ | 2017-18 | | 2018-19 | | 2019-20 | | 2020-21 ಡಿಸೆಂಬರ್ ಅಂತ್ಯದವರೆಗೆ | |
|---|---|---|---|---|---|---|---|---|---|---|---|---|
| 11 | | | ಬಡವರ ಬಂಧು ಯೋಜನೆ | ನೋಂದಾಯಿತ ಬೀದಿ ವ್ಯಾಪಾರಿ, ವ್ಯಾಪಾರ ಜರುಗಿಸುವ ಸ್ಥಳದ ಫೋಟ, ಆಧಾರ ಕಾರ್ಡ. | 0 | 0.00 | 118 | 5.13 | 177 | 13.12 | 12 | 1.20 |
| 12 | | | ಜೆ.ಎಲ್.ಜಿ ಸಾಲ | ಉಳಿತಾಯ ಮತ್ತು ಭದ್ರತೆ ಆಧಾರಿಸಿ ಗರಿಷ್ಠ 10.00 ಲಕ್ಷದವರೆಗೆ, ಶೇ.14 ರ ಬಡ್ಡಿದರದಲ್ಲಿ | 74 | 103.00 | 28 | 31.23 | 27 | 51.60 | 8 | 15.30 |
| | | | ಜಿಲ್ಲಾ ಒಟ್ಟು:- | | **22563** | **11854.83** | **25264** | **12819.07** | **30366** | **15802.51** | **35153** | **18674.44** |
| 1 | ಕೆ.ಸಿ.ಸಿ ಬ್ಯಾಂಕ ಲಿ., ಧಾರವಾಡ | ಹಾವೇರಿ | ಅಲ್ಪಾವಧಿ ಸಾಲ | ಬೆಳೆವಾರು ಸ್ಕೇಲ್ ಫೈನಾನ್ಸ ಹಾಗೂ ಹಿಡುವಳಿ ಆದಾರದ ಮೇಲೆ ಗರಿಷ್ಠ 3.00 ಲಕ್ಷದವರೆಗೆ | 18561 | 6593.20 | 21890 | 7879.58 | 30059 | 10203.39 | 33147 | 13528.23 |
| 2 | | | ಮಧ್ಯಮಾವಧಿ ಸಾಲ | ಜಮೀನು ಆಧಾರದ ಮೇಲೆ ಯೋಜನಾವಾರು "ನಬಾರ್ಡ" ನಿಗಧಿಪಡಿಸಿದ ಯನಿಟ್ ಆಫ್ ಕಾಸ್ಟ ಆಧಾರದ ಮೇಲೆ ಗರಿಷ್ಠ 10.00 ಲಕ್ಷದವರೆಗೆ | 48 | 288.61 | 61 | 334.05 | 131 | 644.27 | 315 | 1474.41 |

| ಕ್ರಸಂ | ಡಿಸಿಸಿ ಬ್ಯಾಂಕಿನ ಹೆಸರು | ಜಿಲ್ಲೆಯ ಹೆಸರು | ಸಾಲ ಯೋಜನೆ ಶೀರ್ಷಿಕೆ (ಕೃಷಿ ಮತ್ತು ಕೃಷಿಯೇತರ ಒಳಗೊಂಡಂತೆ) | ಸಾಲ ನೀಡಲು ಬ್ಯಾಂಕ್ ನಿಗಧಿ ಪಡಿಸಿರುವ ಮಾನದಂಡ | 2017-18 | | 2018-19 | | 2019-20 | | 2020-21 ಡಿಸೆಂಬರ್ ಅಂತ್ಯದವರೆಗೆ | |
|---|---|---|---|---|---|---|---|---|---|---|---|---|
| 3 | | | ಪಶುಸಂಗೋಪನೆ ಉದ್ದೇಶಕ್ಕೆ ದುಡಿಯುವ ಬಂಡವಾಳ ಸಾಲ | ರೂ.3.00 ಲಕ್ಷದವರೆಗಿನ ಶೂನ್ಯ ಬಡ್ಡಿದರದ ರಾಜ್ಯ ಸರಕಾರ/ನಬಾರ್ಡ್‌ನ ಆದೇಶದಂತೆ ತಾಂತ್ರಿಕ ತಜ್ಞರ ಸಮಿತಿಯ ಸ್ಕೇಲ್ ಆಫ್ ಫೈನಾನ್ಸ್‌ಗೆ ಅನುಸರಿಸಿ ರೈತರಿಗೆ ಸಾಲ ನೀಡುವುದು. ಹೈನುಗಾರಿಕೆ ಸಾಲ ಒಳಗೊಂಡಂತೆ ಸಾಲದ ಪರಮಾವಧಿ 2.00 ಲಕ್ಷದವರೆಗೆ | 0 | 0.00 | 0 | 0.00 | 0 | 0.00 | 162 | 88.00 |
| 4 | | | ವಾಹನ ಸಾಲ | ವಾಹನದ ಕಿಮ್ಮತ್ತಿನ ಪ್ರತಿಶತ 85% ರಷ್ಟು ಹಾಗೂ ಆಸ್ತಿ ಭದ್ರತೆ ಮತ್ತು ವಾಹನ ಹೈಪೋಥಿಕೇಶನ ಆಧಾರದ ಮೇಲೆ | 142 | 98.60 | 150 | 103.35 | 193 | 187.35 | 196 | 206.41 |
| 5 | | | ಪಗಾರ ಆಧಾರಿತ ಸಾಲ | ಒಟ್ಟು ಸಂಬಳದ 15 ಪಟ್ಟು, ಶೇ. 50 ರಷ್ಟು ಕಡಿತ ಒಳಪಟ್ಟು ವೇತನದ ಆಧಾರಿತ ಸಾಲ | 390 | 570.76 | 496 | 701.49 | 586 | 960.22 | 689 | 1127.57 |
| 6 | | | ಬಂಗಾರ ದಾಗೀನುಗಳ ಸಾಲ | 2400/- ಒಂದಿ ಗ್ರಾಂಗೆ, ಬಂಗಾರ ಅಡವಿಟ್ಟ ಸಾಲ | 1254 | 709.62 | 2500 | 968.08 | 4500 | 1113.69 | 6073 | 1206.41 |

| ಕ್ರಸಂ | ಡಿಸಿಸಿ ಬ್ಯಾಂಕಿನ ಹೆಸರು | ಜಿಲ್ಲೆಯ ಹೆಸರು | ಸಾಲ ಯೋಜನೆ ಶೀರ್ಷಿಕೆ (ಕೃಷಿ ಮತ್ತು ಕೃಷಿಯೇತರ ಒಳಗೊಂಡಂತೆ) | ಸಾಲ ನೀಡಲು ಬ್ಯಾಂಕ್ ನಿಗಧಿ ಪಡಿಸಿರುವ ಮಾನದಂಡ | 2017-18 | | 2018-19 | | 2019-20 | | 2020-21 ಡಿಸೆಂಬರ್ ಅಂತ್ಯದವರೆಗೆ | |
|---|---|---|---|---|---|---|---|---|---|---|---|---|
| 7 | | | ಗೃಹ ಸಾಲ | ಅಂದಾಜುವೆಚ್ಚದ ಶೇ. 75 ರಷ್ಟು, ಹೈಪೋಥಿಕೇಶನ್ ಆಫ್ ಪ್ಲಾಟ ಹಾಗೂ ಬಿಲ್ಡಿಂಗ | 0 | 0.00 | 0 | 0.00 | 11 | 134.96 | 12 | 140.00 |
| 8 | | | ನಗದು ಪತ್ತಿನ ಸಾಲ | ವ್ಯಾಪಾರ ಮತ್ತು ಬ್ಯಾಂಕಿನ ವಹಿವಾಟಿನ ಆಧಾರದ ಮೇಲೆ ಸಾಲ ನೀಡುವುದು | 267 | 534.48 | 361 | 816.80 | 802 | 1663.24 | 705 | 1161.39 |
| 9 | | | ಸ್ವಸಹಾಯ ಗುಂಪು ಸಾಲ | ಬ್ಯಾಂಕಿನಲ್ಲಿ ಹೊಂದಿದ ಉಳಿತಾಯ ಖಾತೆ ಆಧಾರದ ಮೇಲೆ ಹಾಗೂ ನಬಾರ್ಡ ಮಾರ್ಗಸೂಚಿನುಸಾರ ಶೇಕಡಾ 0/4ರ ಬಡ್ಡಿದರದಲ್ಲಿ | 97 | 177.40 | 77 | 161.47 | 85 | 241.32 | 91 | 275.89 |
| 10 | | | ಕಾಯಕ ಯೋಜನೆ | ಸ್ವಸಹಾಯಕ ಗುಂಪುಗಳ ಪ್ರೋಜೆಕ್ಟ ರಿಪೋರ್ಟ ಆಧಾರ, ಅವರ ಉದ್ಯಮಮಶೀಲತೆಗೆ ಪಡೆದ ತರಬೇತಿ | 0 | 0.00 | 1 | 5.00 | 11 | 48.00 | 7 | 27.16 |

| ಕ್ರಸಂ | ಡಿಸಿಸಿ ಬ್ಯಾಂಕಿನ ಹೆಸರು | ಜಿಲ್ಲೆಯ ಹೆಸರು | ಸಾಲ ಯೋಜನೆ ಶೀರ್ಷಿಕೆ (ಕೃಷಿ ಮತ್ತು ಕೃಷಿಯೇತರ ಒಳಗೊಂಡಂತೆ) | ಸಾಲ ನೀಡಲು ಬ್ಯಾಂಕ್ ನಿಗಧಿ ಪಡಿಸಿರುವ ಮಾನದಂಡ | 2017-18 | | 2018-19 | | 2019-20 | | 2020-21 ಡಿಸೆಂಬರ್ ಅಂತ್ಯದವರೆಗೆ | |
|---|---|---|---|---|---|---|---|---|---|---|---|---|
| 11 | | | ಬಡವರ ಬಂಧು ಯೋಜನೆ | ನೋಂದಾಯಿತ ಬೀದಿ ವ್ಯಾಪಾರಿ, ವ್ಯಾಪಾರ ಜರುಗಿಸುವ ಸ್ಥಳದ ಮೋಟ, ಆಧಾರ ಕಾರ್ಡ. | 0 | 0.00 | 5 | 0.50 | 122 | 11.58 | 13 | 1.10 |
| 12 | | | ಜಿ.ಎಲ್.ಜಿ ಸಾಲ | ಉಳಿತಾಯ ಮತ್ತು ಭದ್ರತೆ ಆಧಾರಿಸಿ ಗರಿಷ್ಠ 10.00 ಲಕ್ಷದವರೆಗೆ, ಶೇ.14 ರ ಬಡ್ಡಿದರದಲ್ಲಿ | 71 | 137.17 | 37 | 55.89 | 6 | 12.00 | 0 | 0.0 |
| | | | **ಜಿಲ್ಲಾ ಒಟ್ಟು:-** | | **20830** | **9109.84** | **25578** | **11026.21** | **36506** | **15220.02** | **41410** | **19236.57** |
| 1 | ಕೆ.ಸಿ.ಸಿ ಬ್ಯಾಂಕ ಲಿ., ಧಾರವಾಡ | ಗದಗ | ಅಲ್ಪಾವಧಿ ಸಾಲ | ಬೆಳೆವಾರು ಸ್ಕೇಲ್ ಫೈನಾನ್ಸ ಹಾಗೂ ಹಿಡುವಳಿ ಆದಾರದ ಮೇಲೆ ಗರಿಷ್ಠ 3.00 ಲಕ್ಷದವರೆಗೆ | 15642 | 5593.89 | 19284 | 7299.67 | 23945 | 9471.81 | 24054 | 11266.27 |
| 2 | | | ಮಧ್ಯಮಾವಧಿ ಸಾಲ | ಜಮೀನು ಆಧಾರದ ಮೇಲೆ ಯೋಜನಾವಾರು "ನಬಾರ್ಡ" ನಿಗಧಿಪಡಿಸಿದ ಯನಿಟ್ ಆಫ್ ಕಾಸ್ಟ ಆಧಾರದ ಮೇಲೆ ಗರಿಷ್ಠ 10.00 ಲಕ್ಷದವರೆಗೆ | 17 | 115.72 | 47 | 250.87 | 148 | 710.25 | 180 | 1066.45 |

| ಕ್ರ.ಸಂ | ಡಿಸಿಸಿ ಬ್ಯಾಂಕಿನ ಹೆಸರು | ಜಿಲ್ಲೆಯ ಹೆಸರು | ಸಾಲ ಯೋಜನೆ ಶೀರ್ಷಿಕೆ (ಕೃಷಿ ಮತ್ತು ಕೃಷಿಯೇತರ ಒಳಗೊಂಡಂತೆ) | ಸಾಲ ನೀಡಲು ಬ್ಯಾಂಕ್ ನಿಗಧಿ ಪಡಿಸಿರುವ ಮಾನದಂಡ | 2017-18 | | 2018-19 | | 2019-20 | | 2020-21 ಡಿಸೆಂಬರ್ ಅಂತ್ಯದವರೆಗೆ | |
|---|---|---|---|---|---|---|---|---|---|---|---|---|
| 3 | | | ಪಶುಸಂಗೋಪನೆ ಉದ್ದೇಶಕ್ಕೆ ದುಡಿಯುವ ಬಂಡವಾಳ ಸಾಲ | ರೂ.3.00 ಲಕ್ಷದವರೆಗಿನ ಶೂನ್ಯ ಬಡ್ಡಿದರದ ರಾಜ್ಯ ಸರಕಾರ/ನಬಾರ್ಡ್‌ನ ಆದೇಶದಂತೆ ತಾಂತ್ರಿಕ ತಜ್ಞರ ಸಮಿತಿಯ ಸ್ಕೇಲ್ ಆಫ್ ಫೈನಾನ್ಸ್‌ಗೆ ಅನುಸರಿಸಿ ರೈತರಿಗೆ ಸಾಲ ನೀಡುವುದು. ಹೈನುಗಾರಿಕೆ ಸಾಲ ಒಳಗೊಂಡಂತೆ ಸಾಲದ ಪರಮಾವಧಿ 2.00 ಲಕ್ಷದವರೆಗೆ | 0 | 0.00 | 0 | 0.00 | 0 | 0.00 | 122 | 28.00 |
| 4 | | | ವಾಹನ ಸಾಲ | ವಾಹನದ ಕಿಮ್ಮತ್ತಿನ ಪ್ರತಿಶತ 85% ರಷ್ಟು ಹಾಗೂ ಆಸ್ತಿ ಭದ್ರತೆ ಮತ್ತು ವಾಹನ ಹೈಪೋಥಿಕೇಶನ ಆಧಾರದ ಮೇಲೆ | 128 | 98.87 | 69 | 69.10 | 202 | 272.72 | 191 | 242.23 |
| 5 | | | ಪಗಾರ ಆಧಾರಿತ ಸಾಲ | ಒಟ್ಟು ಸಂಬಳದ 15 ಪಟ್ಟು, ಶೇ. 50 ರಷ್ಟು ಕಡಿತ ಒಳಪಟ್ಟು ವೇತನದ ಆಧಾರಿತ ಸಾಲ | 335 | 667.07 | 312 | 611.00 | 460 | 857.10 | 805 | 1229.39 |
| 6 | | | ಬಂಗಾರ ದಾಗೀನುಗಳ ಸಾಲ | 2400/- ಒಂದಿ ಗ್ರಾಂಗೆ, ಬಂಗಾರ ಅಡವಿಟ್ಟ ಸಾಲ | 3000 | 991.84 | 2900 | 879.93 | 4500 | 1276.61 | 8016 | 1833.38 |

| ಕ್ರ.ಸಂ | ಡಿಸಿಸಿ ಬ್ಯಾಂಕಿನ ಹೆಸರು | ಜಿಲ್ಲೆಯ ಹೆಸರು | ಸಾಲ ಯೋಜನೆ ಶೀರ್ಷಿಕೆ (ಕೃಷಿ ಮತ್ತು ಕೃಷಿಯೇತರ ಒಳಗೊಂಡಂತೆ) | ಸಾಲ ನೀಡಲು ಬ್ಯಾಂಕ್ ನಿಗಧಿ ಪಡಿಸಿರುವ ಮಾನದಂಡ | 2017-18 | | 2018-19 | | 2019-20 | | 2020-21 ಡಿಸೆಂಬರ್ ಅಂತ್ಯದವರೆಗೆ | |
|---|---|---|---|---|---|---|---|---|---|---|---|---|
| 7 | | | ಗೃಹ ಸಾಲ | ಅಂದಾಜುವೆಚ್ಚದ ಶೇ. 75 ರಷ್ಟು, ಹೈಪೋಥಿಕೇಶನ್ ಆಫ್ ಪ್ಲಾಟ ಹಾಗೂ ಬಿಲ್ಡಿಂಗ | 0 | 0.00 | 0 | 0.00 | 2 | 22.64 | 16 | 150.00 |
| 8 | | | ನಗದು ಪತ್ತಿನ ಸಾಲ | ವ್ಯಾಪಾರ ಮತ್ತು ಬ್ಯಾಂಕಿನ ವಹಿವಾಟಿನ ಆಧಾರದ ಮೇಲೆ ಸಾಲ ನೀಡುವುದು | 227 | 681.14 | 301 | 688.58 | 506 | 1066.02 | 763 | 1245.55 |
| 9 | | | ಸ್ವಸಹಾಯ ಗುಂಪು ಸಾಲ | ಬ್ಯಾಂಕಿನಲ್ಲಿ ಹೊಂದಿದ ಉಳಿತಾಯ ಖಾತೆ ಆಧಾರದ ಮೇಲೆ ಹಾಗೂ ನಬಾರ್ಡ ಮಾರ್ಗಸೂಚಿನುಸಾರ ಶೇಕಡಾ 0/4ರ ಬಡ್ಡಿದರದಲ್ಲಿ | 219 | 338.45 | 186 | 331.75 | 212 | 438.96 | 217 | 619.50 |
| 10 | | | ಕಾಯಕ ಯೋಜನೆ | ಸ್ವಸಹಾಯಕ ಗುಂಪುಗಳ ಪ್ರೋಜೆಕ್ಟ ರಿಪೋರ್ಟ ಆಧಾರ, ಅವರ ಉದ್ಯಮಮಶೀಲತೆಗೆ ಪಡೆದ ತರಬೇತಿ | 0 | 0.00 | 6 | 29.75 | 20 | 88.00 | 19 | 59.00 |

| ಕ್ರಸಂ | ಡಿಸಿಸಿ ಬ್ಯಾಂಕಿನ ಹೆಸರು | ಜಿಲ್ಲೆಯ ಹೆಸರು | ಸಾಲ ಯೋಜನೆ ಶೀರ್ಷಿಕೆ (ಕೃಷಿ ಮತ್ತು ಕೃಷಿಯೇತರ ಒಳಗೊಂಡಂತೆ) | ಸಾಲ ನೀಡಲು ಬ್ಯಾಂಕ್ ನಿಗಧಿ ಪಡಿಸಿರುವ ಮಾನದಂಡ | 2017-18 | | 2018-19 | | 2019-20 | | 2020-21 ಡಿಸೆಂಬರ್ ಅಂತ್ಯದವರೆಗೆ | |
|---|---|---|---|---|---|---|---|---|---|---|---|---|
| 11 | | | ಬಡವರ ಬಂಧು ಯೋಜನೆ | ನೋಂದಾಯಿತ ಬೀದಿ ವ್ಯಾಪಾರಿ, ವ್ಯಾಪಾರ ಜರುಗಿಸುವ ಸ್ಥಳದ ಪೋಟ, ಆಧಾರ ಕಾರ್ಡ. | 0 | 0.00 | 5 | 0.50 | 10 | 1.00 | 6 | 0.30 |
| 12 | | | ಜೆ.ಎಲ್.ಜಿ ಸಾಲ | ಉಳಿತಾಯ ಮತ್ತು ಭದ್ರತೆ ಆಧಾರಿಸಿ ಗರಿಷ್ಠ 10.00 ಲಕ್ಷದವರೆಗೆ, ಶೇ.14 ರ ಬಡ್ಡಿದರದಲ್ಲಿ | 24 | 77.5 | 2 | 3.50 | 13 | 61.00 | 0 | 0.00 |
| | | | ಜಿಲ್ಲಾ ಒಟ್ಟು:- | | 19592 | 8564.48 | 23112 | 10164.65 | 30018 | 14266.11 | 34389 | 17740.07 |
| | | | ಅಂತೂ ಒಟ್ಟು:- | | **62985** | **29529.15** | **73954** | **34009.93** | **96890** | **45288.64** | **110952** | **55651.08** |
| 1 | ಕೆನರಾ ಡಿ.ಸಿ.ಸಿ. ಬ್ಯಾಂಕ್ ಲಿ., ಶಿರಸಿ | ಉತ್ತರ ಕನ್ನಡ | ಅಲ್ಪಾವಧಿ ಕೃಷಿ ಸಾಲ | ರೂ.3.00 ಲಕ್ಷದವರೆಗಿನ ಶೂನ್ಯ ಬಡ್ಡಿದರದ ರಾಜ್ಯ ಸರಕಾರದ ಆದೇಶದಂತೆ ತಾಂತ್ರಿಕ ತಜ್ಞರ ಸಮಿತಿಯ ಸ್ಕೇಲ್ ಆಫ್ ಫೈನಾನ್ಸ್‌ಗೆ ಅನುಸರಿಸಿ ರೈತರಿಗೆ ಸಾಲ ನೀಡುವುದು | 80087 | 62467.76 | 88059 | 73126.55 | 88520 | 72038.59 | 86516 | 73145.70 |

| ಕ್ರಸಂ | ಡಿಸಿಸಿ ಬ್ಯಾಂಕಿನ ಹೆಸರು | ಜಿಲ್ಲೆಯ ಹೆಸರು | ಸಾಲ ಯೋಜನೆ ಶೀರ್ಷಿಕೆ (ಕೃಷಿ ಮತ್ತು ಕೃಷಿಯೇತರ ಒಳಗೊಂಡಂತೆ) | ಸಾಲ ನೀಡಲು ಬ್ಯಾಂಕ್ ನಿಗಧಿ ಪಡಿಸಿರುವ ಮಾನದಂಡ | 2017-18 | | 2018-19 | | 2019-20 | | 2020-21 ಡಿಸೆಂಬರ್ ಅಂತ್ಯದವರೆಗೆ | |
|---|---|---|---|---|---|---|---|---|---|---|---|---|
| 2 | | ಉತ್ತರ ಕನ್ನಡ | ಮಧ್ಯಮಾವಧಿ ಕೃಷಿ ಸಾಲ | ರೂ.10.00 ಲಕ್ಷದವರೆಗಿನ ಶೇಕಡಾ 3ರ ಬಡ್ಡಿದರದ ರಾಜ್ಯ ಸರಕಾರದ ಆದೇಶದಂತೆ ಪರಿಪತ್ರಕ್ಕೆ ಅನುಸರಿಸಿ ರೈತರಿಗೆ ಸಾಲ ನೀಡುವುದು | 7076 | 12297.68 | 6525 | 12096.39 | 5188 | 10233.37 | 3068 | 5066.77 |
| 3 | | ಉತ್ತರ ಕನ್ನಡ | ಎಸ್.ಎಚ್.ಜಿ. ಸಾಲ | ಬ್ಯಾಂಕಿನಲ್ಲಿ ಹೊಂದಿದ ಉಳಿತಾಯ ಖಾತೆ ಆಧಾರದ ಮೇಲೆ ಹಾಗೂ ನಬಾರ್ಡ ಮಾರ್ಗಸೂಚಿನುಸಾರ ಶೇಕಡಾ 0/4ರ ಬಡ್ಡಿದರದಲ್ಲಿ | 758 | 1818.37 | 680 | 1744.16 | 596 | 1964.23 | 214 | 807.22 |
| 4 | | ಉತ್ತರ ಕನ್ನಡ | ಬಡವರ ಬಂಧು ಸಾಲ | ಸ್ವಸಹಾಯಕ ಗುಂಪುಗಳ ಪ್ರೋಜೆಕ್ಟ ರಿಪೋರ್ಟ ಆಧಾರ, ಅವರ ಉದ್ಯಮಶೀಲತೆಗೆ ಪಡೆದ ತರಬೇತಿ | 0 | 0.00 | 70 | 3.15 | 92 | 6.49 | 30 | 3.00 |
| 5 | | ಉತ್ತರ ಕನ್ನಡ | ಕಾಯಕ ಯೋಜನೆ ಸಾಲ | ನೋಂದಾಯಿತ ಬೀದಿ ವ್ಯಾಪಾರಿ, ವ್ಯಾಪಾರ ಜರುಗಿಸುವ ಸ್ಥಳದ ಫೋಟ, ಆಧಾರ ಕಾರ್ಡ್, | 0 | 0.00 | 0 | 0.00 | 3 | 14.94 | 5 | 28.00 |

| ಕ್ರ.ಸಂ | ಡಿಸಿಸಿ ಬ್ಯಾಂಕಿನ ಹೆಸರು | ಜಿಲ್ಲೆಯ ಹೆಸರು | ಸಾಲ ಯೋಜನೆ ಶೀರ್ಷಿಕೆ (ಕೃಷಿ ಮತ್ತು ಕೃಷಿಯೇತರ ಒಳಗೊಂಡಂತೆ) | ಸಾಲ ನೀಡಲು ಬ್ಯಾಂಕ್ ನಿಗಧಿ ಪಡಿಸಿರುವ ಮಾನದಂಡ | 2017-18 | | 2018-19 | | 2019-20 | | 2020-21 ಡಿಸೆಂಬರ್ ಅಂತ್ಯದವರೆಗೆ | |
|---|---|---|---|---|---|---|---|---|---|---|---|---|
| 6 | | ಉತ್ತರ ಕನ್ನಡ | ಪಶುಸಂಗೋಪನೆ ಮತ್ತು ಮೀನುಗಾರಿಕೆ | ರೂ.3.00 ಲಕ್ಷದವರೆಗಿನ ಶೂನ್ಯ ಬಡ್ಡಿದರದ ರಾಜ್ಯ ಸರಕಾರ/ನಬಾರ್ಡ್‌ನ ಆದೇಶದಂತೆ ತಾಂತ್ರಿಕ ತಜ್ಞರ ಸಮಿತಿಯ ಸ್ಕೇಲ್ ಆಫ್ ಫೈನಾನ್ಸ್‌ಗೆ ಅನುಸರಿಸಿ ರೈತರಿಗೆ ಸಾಲ ನೀಡುವುದು. ಹೈನುಗಾರಿಕೆ/ಮೀನುಗಾರಿಗೆ ಸಾಲ ಒಳಗೊಂಡಂತೆ ಸಾಲದ ಪರಮಾವಧಿ 2.00 ಲಕ್ಷದವರೆಗೆ | 0 | 0.00 | 0 | 0.00 | 0 | 0.00 | 1337 | 435.53 |

| ಕ್ರ.ಸಂ | ಡಿಸಿಸಿ ಬ್ಯಾಂಕಿನ ಹೆಸರು | ಜಿಲ್ಲೆಯ ಹೆಸರು | ಸಾಲ ಯೋಜನೆ ಶೀರ್ಷಿಕೆ (ಕೃಷಿ ಮತ್ತು ಕೃಷಿಯೇತರ ಒಳಗೊಂಡಂತೆ) | ಸಾಲ ನೀಡಲು ಬ್ಯಾಂಕ್ ನಿಗಧಿ ಪಡಿಸಿರುವ ಮಾನದಂಡ | 2017-18 | | 2018-19 | | 2019-20 | | 2020-21 ಡಿಸೆಂಬರ್ ಅಂತ್ಯದವರೆಗೆ | |
|---|---|---|---|---|---|---|---|---|---|---|---|---|
| 7 | | ಉತ್ತರ ಕನ್ನಡ | PACS as MSC (ಬ್ಯಾಂಕಿನಿಂದ ಮಂಜೂರಾಗಿರುವುದು) | ರೂ.3.00 ಲಕ್ಷದವರೆಗಿನ ಶೂನ್ಯ ಬಡ್ಡಿದರದ ರಾಜ್ಯ ಸರಕಾರ/ನಬಾರ್ಡ್‌ನ ಆದೇಶದಂತೆ ತಾಂತ್ರಿಕ ತಜ್ಞರ ಸಮಿತಿಯ ಸ್ಕೇಲ್ ಆಫ್ ಫೈನಾನ್ಸ್‌ಗೆ ಅನುಸರಿಸಿ ರೈತರಿಗೆ ಸಾಲ ನೀಡುವುದು. ಹೈನುಗಾರಿಕೆ ಸಾಲ ಒಳಗೊಂಡಂತೆ ಸಾಲದ ಪರಮಾವಧಿ 2.00 ಲಕ್ಷದವರೆಗೆ | 0 | 0.00 | 0 | 0.00 | 0 | 0.00 | 3 | 304.20 |
| 8 | | ಉತ್ತರ ಕನ್ನಡ | ಠೇವು ಸಾಲ | ಠೇವುದಾರರ ಠೇವನ್ನಾಧರಿಸಿ ನೀಡಿದ ಸಾಲ | 3977 | 12598.60 | 3478 | 8219.19 | 3655 | 7240.99 | 1471 | 5290.57 |
| 9 | | ಉತ್ತರ ಕನ್ನಡ | ಬಂಗಾರ ದಾಗೀನೆ ಸಾಲ | ಬಂಗಾರವನ್ನು ಅಡಮಾನವಾಗಿಟ್ಟುಕೊಂಡು ನೀಡಿದ ಸಾಲ, ಬಂಗಾರದ ಮೌಲ್ಯದ ಶೇ.75 ರಷ್ಟು ಸಾಲ ನೀಡಲಾಗುತ್ತದೆ. | 10130 | 3345.24 | 9655 | 3364.71 | 9016 | 3602.17 | 4006 | 2617.87 |

| ಕ್ರ.ಸಂ | ಡಿಸಿಸಿ ಬ್ಯಾಂಕಿನ ಹೆಸರು | ಜಿಲ್ಲೆಯ ಹೆಸರು | ಸಾಲ ಯೋಜನೆ ಶೀರ್ಷಿಕೆ (ಕೃಷಿ ಮತ್ತು ಕೃಷಿಯೇತರ ಒಳಗೊಂಡಂತೆ) | ಸಾಲ ನೀಡಲು ಬ್ಯಾಂಕ್ ನಿಗಧಿ ಪಡಿಸಿರುವ ಮಾನದಂಡ | 2017-18 | | 2018-19 | | 2019-20 | | 2020-21 ಡಿಸೆಂಬರ್ ಅಂತ್ಯದವರೆ | |
|---|---|---|---|---|---|---|---|---|---|---|---|---|
| 10 | | ಉತ್ತರ ಕನ್ನಡ | ಇತರೇ ಅಲ್ಪಾವಧಿ ಸಾಲ | ನೌಕರರಿಗೆ ಹಬ್ಬದ ಮುಂಗಡ, ಸಂಘಗಳಿಗೆ ಶಿಲ್ಕು ಆಧರಿಸಿ ನೀಡಿದ ಸಾಲ | 226 | 8486.78 | 186 | 1061.55 | 254 | 5157.13 | 183 | 51.47 |
| 11 | | ಉತ್ತರ ಕನ್ನಡ | ಓವರ್‌ಡ್ರಾಫ್ಟ್ ಸಾಲ | ಅರ್ಜಿದಾರರ ವ್ಯವಹಾರ ಆಧರಿಸಿ ಗರಿಷ್ಠ ರೂ.50,000/- (Clean limit) | 1053 | 16852.72 | 899 | 15240.16 | 2157 | 26164.71 | 490 | 28713.99 |
| 12 | | ಉತ್ತರ ಕನ್ನಡ | ಕ್ಯಾಶ್‌ಕ್ರೆಡಿಟ್ ಸಾಲ | ಅರ್ಜಿದಾರರ ಶಿಲ್ಕು ಮಾಲು ಮತ್ತು ಬರತಕ್ಕ ಬಾಕಿಯ ಆಧಾರದ ಮೇಲೆ | 586 | 29270.49 | 593 | 23438.50 | 505 | 25653.01 | 183 | 13655.3 |
| 13 | | ಉತ್ತರ ಕನ್ನಡ | ಗೃಹ ಸಾಲ | ಮನೆ ನಿರ್ಮಾಣಕ್ಕಾಗಿ ನೀಡಿದ ಸಾಲ – ಅರ್ಜಿದಾರರ ಆದಾಯದ ಮೇಲೆ ತಿರುಗಿಕೊಡುವ ಸಾಮರ್ಥ್ಯಕ್ಕನುಸಾರ | 116 | 1305.81 | 130 | 1630.12 | 145 | 1618.63 | 113 | 943.7 |
| 14 | | ಉತ್ತರ ಕನ್ನಡ | ವಾಹನ ಸಾಲ | ವಾಹನ ಖರೀದಿಗಾಗಿ ನೀಡಿದ ಸಾಲ – ವಾಹನ ದರಪತ್ರದ ಮೇಲೆ | 1650 | 3221.50 | 1439 | 3316.42 | 1076 | 2992.58 | 789 | 2240.66 |

| ಕ್ರ.ಸಂ | ಡಿಸಿಸಿ ಬ್ಯಾಂಕಿನ ಹೆಸರು | ಜಿಲ್ಲೆಯ ಹೆಸರು | ಸಾಲ ಯೋಜನೆ ಶೀರ್ಷಿಕೆ (ಕೃಷಿ ಮತ್ತು ಕೃಷಿಯೇತರ ಒಳಗೊಂಡಂತೆ) | ಸಾಲ ನೀಡಲು ಬ್ಯಾಂಕ್ ನಿಗಧಿ ಪಡಿಸಿರುವ ಮಾನದಂಡ | 2017-18 | | 2018-19 | | 2019-20 | | 2020-21 ಡಿಸೆಂಬರ್ ಅಂತ್ಯದವರೆಗೆ | |
|---|---|---|---|---|---|---|---|---|---|---|---|---|
| 15 | | ಉತ್ತರ ಕನ್ನಡ | ಅವಧಿ ಸಾಲ | ನೌಕರರಿಗೆ ಅವರ ಪಗಾರು ಆಧರಿಸಿ, ಸ್ವ-ಉದ್ಯೋಗಸ್ಥರಿಗೆ ಅವರ ಆದಾಯ ಅನುಸರಿಸಿ ನೀಡುವ ಸಾಲ | 2678 | 6215.31 | 2959 | 7783.03 | 2696 | 8691.63 | 1260 | 5015.44 |
| 16 | | ಉತ್ತರ ಕನ್ನಡ | ಇತರೇ ಮಧ್ಯಮಾವಧಿ ಸಾಲ | ಟರ್ಸರಿ, ನಾನ್‌ಫಾರ್ಮಿಂಗ್ ಸೆಕ್ಟರ್ ಸಾಲಗಳು ದರಪತ್ರ / ಪ್ರೊಜೆಕ್ಟ್ ಆಧರಿಸಿ | 221 | 7388.39 | 209 | 4065.56 | 107 | 2057.62 | 172 | 6713.1 |
| 17 | | ಉತ್ತರ ಕನ್ನಡ | ಬಿಲ್ಸ್ ಡಿಸ್ಕೌಂಟ್ ಸಾಲ | ಬಿಲ್ಲುಗಳನ್ನು ಒತ್ತೆ ಇಟ್ಟುಕೊಂಡು ನೀಡುವ ಸಾಲ | 70 | 4832.91 | 76 | 7610.93 | 93 | 7132.19 | 47 | 4591.3 |
| | | | | ಒಟ್ಟು | **108628** | **170101.56** | **114958** | **162700.42** | **114103** | **174568.28** | **99887** | **149623.82** |

ಸಹಕಾರ ಸಂಘಗಳ ಅಪರ ನಿಬಂಧಕರು
(ಪತ್ತು)



# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1114
ಸದಸ್ಯರ ಹೆಸರು : ಶ್ರೀ ನಾಗೇಂದ್ರ ಎಲ್. (ಚಾಮರಾಜ)
ಉತ್ತರಿಸಬೇಕಾದ ದಿನಾಂಕ : 05.02.2021
ಉತ್ತರಿಸಬೇಕಾದ ಸಚಿವರು : ನಗರಾಭಿವೃದ್ಧಿ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಮೈಸೂರು ನಗರದಲ್ಲಿರುವ " ಇರ್ವಿನ್ " ರಸ್ತೆಯನ್ನು ಅಗಲೀಕರಣ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಕಾಮಗಾರಿ ಯಾವ ಹಂತದಲ್ಲಿದೆ; | ಹೌದು.<br>ಮೈಸೂರು ನಗರದಲ್ಲಿರುವ ಇರ್ವಿನ್ ರಸ್ತೆಯನ್ನು ಅಗಲೀಕರಣ ಮಾಡುವ ಕಾಮಗಾರಿಯು ಭಾಗಶಃ ಪೂರ್ಣಗೊಂಡಿದ್ದು, ವಕ್ಫ್ ಇಲಾಖೆಗೆ ಸೇರಿದ ಜುಮ್ಮಾ ಮಸೀದಿ ಕಟ್ಟಡ ಮತ್ತು ಒಂದು ಖಾಸಗಿ ಸ್ವತ್ತುಗಳ ವಿಸ್ತೀರ್ಣದಲ್ಲಿ ಚರಂಡಿ ಹಾಗೂ ರಸ್ತೆ ನಿರ್ಮಾಣ ಮಾಡಬೇಕಾಗಿರುತ್ತದೆ. ಉಳಿದಂತೆ ರಸ್ತೆ ವಿಭಜಕ ಹಾಗೂ ವಿದ್ಯುತ್ ಬೀದಿ ದೀಪ ಅಳವಡಿಸುವ ಕಾಮಗಾರಿ ಕೈಗೊಳ್ಳಬೇಕಾಗಿದ್ದು, ಸದರಿ ಸ್ವತ್ತುಗಳ ಭೂಸ್ವಾಧೀನ ಪಡಿಸಿಕೊಳ್ಳಬೇಕಾಗಿರುವುದರಿಂದ ಕಾಮಗಾರಿ ಸ್ಥಗಿತಗೊಂಡಿರುತ್ತದೆ. |
| ಆ) | ಈ ರಸ್ತೆಯಲ್ಲಿ ಒಟ್ಟು ಯಾವ ಯಾವ ಧಾರ್ಮಿಕ ಕಟ್ಟಡಗಳಿವೆ; ಇವುಗಳಲ್ಲಿ ಯಾವ ಯಾವ ಧಾರ್ಮಿಕ ಕಟ್ಟಡಗಳನ್ನು ತೆರವುಗೊಳಿಸಲಾಗಿದೆ;<br>ತೆರವುಗೊಳಿಸದೆ ಇರುವ ಕಟ್ಟಡಗಳಾವುವು; | ಇರ್ವಿನ್ ರಸ್ತೆಯಲ್ಲಿ ಒಟ್ಟು 3 ಧಾರ್ಮಿಕ ಕಟ್ಟಡಗಳಿವೆ.<br>ಅದರಲ್ಲಿ ಕಾಳಮ್ಮ ದೇವಸ್ಥಾನಕ್ಕೆ ಸೇರಿದ ಮಳಿಗೆ, ಮುಜರಾಯಿ ಇಲಾಖೆಗೆ ಸೇರಿದ ಪಂಚಮುಖಿ ಆಂಜನೇಯ ಸ್ವಾಮಿ ದೇವಸ್ಥಾನ ಹಾಗೂ ವಕ್ಫ್ ಇಲಾಖೆಗೆ ಸೇರಿದ ಜುಮ್ಮಾ ಮಸೀದಿಯು ಇರುತ್ತದೆ. ಕಾಳಮ್ಮ ದೇವಸ್ಥಾನಕ್ಕೆ ಸೇರಿದ ಮಳಿಗೆಯನ್ನು ಹಾಗೂ ಪಂಚಮುಖಿ ಆಂಜನೇಯ ಸ್ವಾಮಿ ಕಾಂಪೌಂಡ್ ಅನ್ನು ತೆರವುಗೊಳಿಸಲಾಗಿದ್ದು, ವಕ್ಫ್ ಇಲಾಖೆಗೆ ಸೇರಿದ ಜುಮ್ಮಾ ಮಸೀದಿಯ ಕಟ್ಟಡವನ್ನು ತೆರವುಗೊಳಿಸಬೇಕಾಗಿರುತ್ತದೆ. |
| ಇ) | ಈ ರಸ್ತೆಯಲ್ಲಿ ಧಾರ್ಮಿಕ ಕಟ್ಟಡಗಳನ್ನು ತೆರವುಗೊಳಿಸಲು ಎಷ್ಟು ಕಾಲಾವಕಾಶ ನೀಡಲಾಗಿದೆ; ಕಾಲಮಿತಿಯಲ್ಲಿ ತೆರವುಗೊಳಿಸದೆ ಇದ್ದಲ್ಲಿ ಕೈಗೊಂಡಿರುವ ಕ್ರಮಗಳೇನು ? | ವಕ್ಫ್ ಇಲಾಖೆಗೆ ಸೇರಿದ ಜುಮ್ಮಾ ಮಸೀದಿಯ ಕಟ್ಟಡಕ್ಕೆ ಸಂಬಂಧಿಸಿದಂತೆ, ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಪಾರದರ್ಶಕತೆ ಮತ್ತು ಸೂಕ್ತ ಪರಿಹಾರದ ಹಕ್ಕು, ಪುನರ್ವಸತಿ ಮತ್ತು ಪುನರ್ ನಿರ್ಮಾಣ ಕಾಯ್ದೆ-2013 ರನ್ವಯ ರಸ್ತೆ ಅಗಲೀಕರಣಕ್ಕೆ ಅವಶ್ಯವಿರುವ ಜಾಗವನ್ನು ಭೂಸ್ವಾಧೀನ ಪಡಿಸಿಕೊಳ್ಳಲು ಕ್ರಮವಹಿಸಿ, ದಿನಾಂಕ: 08-01-2021 ರಂದು ಪ್ರಾಥಮಿಕ ಅಧಿಸೂಚನೆಯನ್ನು ಹೊರಡಿಸಲಾಗಿದ್ದು ಪ್ರಕ್ರಿಯೆ ಜಾರಿಯಲ್ಲಿದೆ. |

ನಅಇ 21 ಎಸಿಎಂ 2021 (ಇ)

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1162
ವಿಧಾನ ಸಭೆಯ ಸದಸ್ಯರ ಹೆಸರು : ಡಾ||.ಅಜಯ್ ಧರ್ಮ ಸಿಂಗ್ (ಜೇವರ್ಗಿ)
ಉತ್ತರಿಸಬೇಕಾದ ದಿನಾಂಕ : 05-02-2021
ಉತ್ತರಿಸುವ ಸಚಿವರು : ಮಾನ್ಯ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಜೇವರ್ಗಿ ವಿಧಾನಸಭಾ ಕ್ಷೇತ್ರದಲ್ಲಿ ಸಹಾಯಕ ತೋಟಗಾರಿಕೆ ಅಧಿಕಾರಿ ಹುದ್ದೆ ಸೇರಿದಂತೆ ಲಿಪಿಕ ಸಿಬ್ಬಂದಿ ಹುದ್ದೆಗಳು ಹೋಬಳಿವಾರು ಖಾಲಿ ಇರುವುದು ಹಾಗೂ ಸದರಿ ಖಾಲಿಯಿರುವ ಹುದ್ದೆಗಳಿಂದ ಇಲಾಖೆಯ ಕಾರ್ಯಕ್ರಮಗಳನ್ನು ಯಶ್ವಸಿಯಾಗಿ ಅನುಷ್ಠಾನಕ್ಕೆ ತರಲು ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹುದ್ದೆಗಳು ಖಾಲಿ ಇರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಆ) | ಹಾಗಿದ್ದಲ್ಲಿ, ಸದರಿ ಕಾರ್ಯಕ್ರಮಗಳ ಅನುಷ್ಠಾನಕ್ಕೆ ಸರ್ಕಾರ ಕೈಗೊಂಡಿರುವ ಪರ್ಯಾಯ ಕ್ರಮಗಳು ಹಾಗೂ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಯಾವ ಕಾಲಮಿತಿಯಲ್ಲಿ ಕ್ರಮ ಜರುಗಿಸಲಿದೆ (ವಿವರ ನೀಡುವುದು)? | ಲಭ್ಯವಿರುವ ಅಧಿಕಾರಿ/ಸಿಬ್ಬಂಧಿ ವರ್ಗದವರಿಂದಲೇ ಇಲಾಖೆಯ ವಿವಿಧ ಕಾರ್ಯಕ್ರಮಗಳ ಅನುಷ್ಠಾನಕ್ಕೆ ತೊಂದರೆ ಆಗದಂತೆ ಕ್ರಮ ವಹಿಸಲಾಗುತ್ತಿದೆ.<br>ಸರ್ಕಾರದ ಸುತ್ತೋಲೆ ಸಂ:ಆಇ 3 ಬಿಇಎಂ 2020, ದಿನಾಂಕ:06.07.2020ರಲ್ಲಿ ನೇರ ನೇಮಕಾತಿ ಹುದ್ದೆಗಳಿಗೆ ಸಂಬಂಧಿಸಿದಂತೆ 2020-21ನೇ ಸಾಲಿನ ಆರ್ಥಿಕ ವರ್ಷದಲ್ಲಿ ಎಲ್ಲಾ ನೇರನೇಮಕಾತಿ ಹುದ್ದೆಗಳನ್ನು ಭರ್ತಿ ಮಾಡುವುದನ್ನು ಮುಂದಿನ ಆದೇಶದವರೆಗೂ ತಡೆಹಿಡಿಯಲಾಗಿರುತ್ತದೆ.<br>ಸದರಿ ನಿರ್ಬಂಧವನ್ನು ತೆರವುಗೊಳಿಸಿದ ನಂತರ ಭರ್ತಿ ಮಾಡಲು ಹಂತ-ಹಂತವಾಗಿ ಕ್ರಮಕೈಗೊಳ್ಳಲಾಗುವುದು. |

**Horti 56 HGM 2021**

**(ಆರ್.ಶಂಕರ್)**
**ತೋಟಗಾರಿಕೆ ಮತ್ತು ರೇಷ್ಮೆ**
**ಸಚಿವರು**

## ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1179 |
| ಸದಸ್ಯರ ಹೆಸರು | : | ಶ್ರೀ ಶ್ರೀನಿವಾಸ್ ಎಂ. (ಮಂಡ್ಯ) |
| ಉತ್ತರಿಸಬೇಕಾದ ದಿನಾಂಕ | : | 05-02-2021 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ ಹಾಗೂ ಸಕ್ಕರೆ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಮಂಡ್ಯ ನಗರಸಭೆಗೆ 2018ರ ಆಯವ್ಯಯದಲ್ಲಿ ರೂ 50.00 ಕೋಟಿಗಳ ವಿಶೇಷ ಅನುದಾನ ಘೋಷಿಸಿದ್ದು, ಈ ಅನುದಾನದಲ್ಲಿ ಕಾಮಗಾರಿಗಳ ಕ್ರಿಯಾ ಯೋಜನೆಗೆ ಅನುಮೋದನೆ ನೀಡಿದ್ದು, ತದನಂತರ ಹಿಂಪಡೆಯಲಾಗಿರುವ ಅನುದಾನವನ್ನು ಈವರೆಗೂ ಬಿಡುಗಡೆ ಮಾಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br><br>2018-19ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ 161ರಲ್ಲಿ ಮಂಡ್ಯ ನಗರದ ಸರ್ವತೋಮುಖ ಅಭಿವೃದ್ಧಿಗಾಗಿ ರೂ.50.00ಕೋಟಿ ವಿಶೇಷ ಪ್ಯಾಕೇಜ್ ಘೋಷಿಸಲಾಗಿರುತ್ತದೆ.<br><br>ಮಂಡ್ಯ ನಗರಕ್ಕೆ ಘೋಷಿಸಲಾದ ವಿಶೇಷ ಪ್ಯಾಕೇಜ್ ಅಡಿ ಕೈಗೊಳ್ಳುವ ಕಾಮಗಾರಿಗಳ ಕ್ರಿಯಾ ಯೋಜನೆಗೆ ಸರ್ಕಾರದ ಆದೇಶ ಸಂಖ್ಯೆ: ನಅಇ 310 ಪಿಆರ್‌ಜೆ 2018 ದಿ: 30-01-2018 ರನ್ವಯ ಅನುಮೋದನೆ ನೀಡಿ ಆದೇಶಿಸಲಾಗಿರುತ್ತದೆ.<br><br>ನಂತರ, ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಮಂಡ್ಯ ವಿಭಾಗದವರಿಗೆ ಠೇವಣೀಕರಿಸಲು ರೂ.5.00 ಕೋಟಿ ಅನುದಾನವನ್ನು ಬಿಡುಗಡೆ ಮಾಡಲು ಪೌರಾಡಳಿತ ನಿರ್ದೇಶನಾಲಯ ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದು, ಅದರಂತೆ, ಸರ್ಕಾರ ಆದೇಶ ಸಂಖ್ಯೆ: ನಅಇ 198 ಎಸ್‌ಎಫ್‌ಸಿ 2020 ದಿ: 23-07-2020ರನ್ವಯ ಮಂಡ್ಯ ನಗರಸಭೆಗೆ ರೂ.2.50 ಕೋಟಿ ಅನುದಾನವನ್ನು ಬಿಡುಗಡೆಗೊಳಿಸಿ ಆದೇಶಿಸಲಾಗಿರುತ್ತದೆ.<br><br>ತದನಂತರ, ರಾಜ್ಯದಲ್ಲಿನ ಪ್ರಸ್ತುತ ಆರ್ಥಿಕ ಪರಿಸ್ಥಿತಿಯು ಕಷ್ಟಕರವಾಗಿರುವುದರಿಂದ 2018ರ ಆಯವ್ಯಯ ಭಾಷಣದಲ್ಲಿ ಮಂಡ್ಯ ನಗರಕ್ಕೆ ಘೋಷಿಸಿರುವ ವಿಶೇಷ ಅನುದಾನ ರೂ.50.00 ಕೋಟಿಗಳಡಿ ಕೈಗೊಳ್ಳುವ ಕಾಮಗಾರಿಗಳನ್ನು ಕೈಬಿಡಲು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ:ಎಫ್.ಡಿ 424 ವೆಚ್ಚ-9/2020, ದಿನಾಂಕ: 03-11-2020 ರಲ್ಲಿ ನಿರ್ದೇಶನ ನೀಡಿದ ಮೇರೆಗೆ ಸರ್ಕಾರದ ಆದೇಶ ಸಂಖ್ಯೆ: ನಅಇ 269 ಎಸ್‌ಎಫ್‌ಸಿ 2020 ದಿ: 05-11-2020ರನ್ವಯ ತಡೆಹಿಡಿದು ಆದೇಶಿಸಲಾಗಿರುತ್ತದೆ.<br><br>ಆರ್ಥಿಕ ಇಲಾಖೆಯು ಸದರಿ ಕಾಮಗಾರಿಗಳನ್ನು ಮುಂದುವರೆಸಲು ಅನುದಾನವನ್ನು ಮಂಜೂರು ಮಾಡಿದಲ್ಲಿ ಪರಿಶೀಲಿಸಲಾಗುವುದು. |
| (ಆ) | ಬಂದಿದ್ದಲ್ಲಿ, ಅನುದಾನ ಬಿಡುಗಡೆಗೊಳಿಸದಿರಲು ಕಾರಣವೇನು; | |
| (ಇ) | ಸದರಿ ಅನುದಾನವನ್ನು ಯಾವಾಗ ಬಿಡುಗಡೆಗೊಳಿಸಲಾಗುವುದು? (ವಿವರ ನೀಡುವುದು) | |

ಕಡತ ಸಂಖ್ಯೆ:ನಅಇ 50 ಎಸ್.ಎಫ್.ಸಿ 2021

(ಎನ್. ನಾಗರಾಜ್, ಎಂ.ಟಿ.ಬಿ.)
ಪೌರಾಡಳಿತ ಹಾಗೂ ಸಕ್ಕರೆ ಸಚಿವರು



# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1086 |
| ಸದಸ್ಯರ ಹೆಸರು | ಶ್ರೀ ಶಿವಣ್ಣ ಬಿ. |
| ಉತ್ತರಿಸಬೇಕಾದ ದಿನಾಂಕ | 05.02.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಅನುಮತಿ ಪಡೆದು ನಡೆಸುತ್ತಿರುವ ಕಲ್ಲುಗಣಿಗಾರಿಕೆ ಮತ್ತು ಮರಳು ಗಣಿಗಾರಿಕೆಗಳೆಷ್ಟು (ಜಿಲ್ಲಾವಾರು ಮಾಹಿತಿ ನೀಡುವುದು); | (see table below) ಜಿಲ್ಲಾವಾರು ವಿವರಗಳನ್ನು **ಅನುಬಂಧ-01**ರಲ್ಲಿ ನೀಡಲಾಗಿದೆ. |
| ಆ) | ಅನಧಿಕೃತವಾಗಿ ರಾಜ್ಯದಲ್ಲಿ ಗಣಿಗಾರಿಕೆ ನಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ರೀತಿ ಎಷ್ಟು ಕಡೆಗಳಲ್ಲಿ ಗಣಿಗಾರಿಕೆ ನಡೆಯುತ್ತಿದೆ (ಜಿಲ್ಲಾವಾರು ಸಂಪೂರ್ಣ ವಿವರ ನೀಡುವುದು); | ಬಂದಿರುತ್ತದೆ.<br>ರಾಜ್ಯದಲ್ಲಿ ಕಳೆದ ಮೂರು ವರ್ಷಗಳಲ್ಲಿ ಅನಧಿಕೃತ ಕಲ್ಲು ಗಣಿಗಾರಿಕೆಯ 722 ಮತ್ತು ಮರಳು ಗಣಿಗಾರಿಕೆಯ 511 ಪ್ರಕರಣಗಳನ್ನು ಪತ್ತೆ ಹಚ್ಚಲಾಗಿದೆ.<br>ಜಿಲ್ಲಾವಾರು ವಿವರಗಳನ್ನು **ಅನುಬಂಧ-02**ರಲ್ಲಿ ನೀಡಲಾಗಿದೆ. |
| ಇ) | ಅಕ್ರಮ ಗಣಿಗಾರಿಕೆ ನಡೆಸುವವರ ವಿರುದ್ಧ ಸರ್ಕಾರವು ತೆಗೆದುಕೊಂಡ ಕ್ರಮವೇನು (ಪೂರ್ಣ ಮಾಹಿತಿ ನೀಡುವುದು)? | ಅಕ್ರಮವಾಗಿ ಗಣಿಗಾರಿಕೆ ನಡೆಸುತ್ತಿರುವವರ ವಿರುದ್ಧ ಎಂ.ಎಂ. (ಡಿ&ಆರ್) ಕಾಯ್ದೆ, 1957ರ ಮತ್ತು ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994 ರಂತೆ ಮೊಕದ್ದಮೆಗಳನ್ನು ದಾಖಲಿಸಿ ಮತ್ತು ದಂಡ ವಿಧಿಸಿ, ಸಂಗ್ರಹಿಸಲು ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುತ್ತಿದೆ.<br>ಅನಧಿಕೃತ ಕಲ್ಲು ಗಣಿಗಾರಿಕೆ ಮತ್ತು ಮರಳು ಗಣಿಗಾರಿಕೆ ಸಂಬಂಧ ಕೈಗೊಂಡಿರುವ ಕ್ರಮಗಳ ವಿವರ ಕೆಳಕಂಡಂತಿದೆ: |

(ಅ) ಉತ್ತರ:

| ಕ್ರ.ಸಂ. | ಉಪ ಖನಿಜ ಗಣಿ ಗುತ್ತಿಗೆಗಳ ಸಂಖ್ಯೆ | | ವಿಸ್ತೀರ್ಣ (ಎಕರೆಗಳಲ್ಲಿ) |
|---|---|---|---|
| 1 | ನಿರ್ದಿಷ್ಟಪಡಿಸಿದ | 517 | 2353.06 |
| 2 | ನಿರ್ದಿಷ್ಟವಲ್ಲದ | 2493 | 10567 |
| 3 | ಮರಳು | 323 | 3632.17 |

**ಕಲ್ಲುಗಣಿಗಾರಿಕೆ:-** (ರೂ.ಲಕ್ಷಗಳಲ್ಲಿ)

| ಕ್ರ ಸಂ. | ವರ್ಷ | ಪತ್ತೆ ಹಚ್ಚಿದ ಪ್ರಕರಣಗಳು | ದಾಖಲಿಸಿರುವ ಮೊಕದ್ದಮೆಗಳ ಸಂಖ್ಯೆ | ವಸೂಲಾದ ದಂಡ |
|---|---|---|---|---|
| 1. | 2018-19 | 413 | 108 | 1213.37 |
| 2. | 2019-20 | 266 | 117 | 908.70 |
| 3. | 2020-21 | 43 | 6 | 25.19 |
| | ಒಟ್ಟು | **722** | **231** | **2147.26** |

ಮರಳು ಗಣಿಗಾರಿಕೆ:– (ರೂ.ಲಕ್ಷಗಳಲ್ಲಿ)

| ಕ್ರ. ಸಂ. | ವರ್ಷ | ಪತ್ತೆ ಹಚ್ಚಿದ ಪ್ರಕರಣಗಳು | ದಾಖಲಿಸಿರುವ ಮೊಕದ್ದಮೆಗಳ ಸಂಖ್ಯೆ | ವಸೂಲಾದ ದಂಡ |
|---|---|---|---|---|
| 1. | 2018–19 | 191 | 106 | 54.62 |
| 2. | 2019–20 | 240 | 106 | 128.81 |
| 3. | 2020–21 | 80 | 34 | 30.88 |
| ಒಟ್ಟು | | **511** | **246** | **214.31** |

ಸಂಖ್ಯೆ ಸಿಐ 56 ಎಂಎಂಎನ್ 2021

(ಮುರುಗೇಶ್ ಆರ್. ನಿರಾಣಿ)
ಗಣಿ ಮತ್ತು ಭೂವಿಜ್ಞಾನ ಸಚಿವರು.

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1052 |
| ಸದಸ್ಯರ ಹೆಸರು | ಶ್ರೀ ರಘುಪತಿ ಭಟ್ .ಕೆ (ಉಡುಪಿ) |
| ಉತ್ತರಿಸಬೇಕಾದ ದಿನಾಂಕ | 05.02.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ. ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಕರಾವಳಿ ಪ್ರದೇಶಕ್ಕೆ ಪ್ರತ್ಯೇಕ ಮರಳು ನೀತಿ ಜಾರಿ ಮಾಡುವ ಸಂಬಂಧ ಹಾಗೂ ಗುಜರಾತ್ ಪ್ರವಾಸದ ವರದಿಯ ಆಧಾರದ ಮೇಲೆ ಸರ್ಕಾರ ಕೈಗೊಂಡ ಕ್ರಮಗಳೇನು; | ಸದರಿ ವಿಷಯಗಳಿಗೆ ಸಂಬಂಧಪಟ್ಟಂತೆ, ದಿನಾಂಕ: 07.01.2021 ರಂದು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಂದಿನ ಗಣಿ ಮತ್ತು ಭೂವಿಜ್ಞಾನ ಸಚಿವರ ಅಧ್ಯಕ್ಷತೆಯಲ್ಲಿ ಜಿಲ್ಲೆಯ ಜನ ಪ್ರತಿನಿಧಿಗಳು ಹಾಗೂ ಅಧಿಕಾರಿಗಳೊಂದಿಗೆ ಜರುಗಿದ ಸಭೆಯಲ್ಲಿ ಚರ್ಚಿಸಿದಂತೆ, ಈ ಕುರಿತು ಸದರಿ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಂದ ವರದಿ ಬಂದ ನಂತರ ಸರ್ಕಾರದಿಂದ ಸಾಧಕ ಬಾಧಕಗಳ ಬಗ್ಗೆ ಪರಿಶೀಲನೆ ನಡೆಸಿ, ಮುಂದಿನ ಕ್ರಮ ವಹಿಸಲಾಗುವುದು. |
| ಆ) | ಕರಾವಳಿ ಪ್ರದೇಶದಲ್ಲಿ ಸಿ.ಆರ್.ಜೆಡ್ ವ್ಯಾಪ್ತಿಯ ಸಾಂಪ್ರದಾಯಿಕ ಮರಳು ಕಾರ್ಮಿಕರಿಗೆ ಮರಳು ದಿಬ್ಬ ತೆರವುಗೊಳಿಸಲು ಅವಕಾಶ ನೀಡಿದಂತೆ ಹೊಸದಾಗಿ ಮರಳು ನೀತಿ ಜಾರಿ ಮಾಡಿ ನಾನ್ ಸಿ.ಆರ್.ಜೆಡ್ ಕಾರ್ಮಿಕರಿಗೂ ಅವಕಾಶ ಕಲ್ಪಿಸುವ ನಿಟ್ಟಿನಲ್ಲಿ ಸರ್ಕಾರದ ನಿಲುವೇನು; | ರಾಜ್ಯ ಸರ್ಕಾರವು ದಿನಾಂಕ:05.05.2020 ರಂದು ಹೊಸ ಮರಳು ನೀತಿ-2020 ನ್ನು ಜಾರಿಗೊಳಿಸಿದ್ದು, ಸದರಿ ಮರಳು ನೀತಿಯಂತೆ ಕರಾವಳಿ ಜಿಲ್ಲೆಗಳ ಕರಾವಳಿ ನಿಯಂತ್ರಣ ವಲಯ ಹೊರತುಪಡಿಸಿದ ( Non CRZ ) ಪ್ರದೇಶಗಳಲ್ಲಿನ ನದಿ ಪಾತ್ರ ಗಳಲ್ಲಿ ಸಾಂಪ್ರಾದಾಯಿಕ ಮರಳು ತೆಗೆಯುವ ವ್ಯಕ್ತಿಗಳಿಗೆ ಅವಕಾಶ ಕಲ್ಪಿಸುವ ಬಗ್ಗೆ ಪರಿಶೀಲಿಸಲಾಗುವುದು. |
| ಇ) | 2013ರಲ್ಲಿ ಮರಳು ನೀತಿ ಜಾರಿ ಆದಾಗಿನಿಂದಲೂ ಈ ಬಗ್ಗೆ ಬೇಡಿಕೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುತ್ತದೆ. |

| | | |
|---|---|---|
| ಈ) | ನಾನ್ ಸಿ.ಆರ್.ಜೆಡ್ ವ್ಯಾಪ್ತಿಯಲ್ಲಿ ಮರಳು ತೆಗೆಯುವುದರಿಂದ ಪ್ರವಾಹ ನಿಯಂತ್ರಣ ಮಾಡಬಹುದು ಎಂಬ ಅಂಶ ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; ವಿವರ ನೀಡುವುದು; | ಬಂದಿರುತ್ತದೆ.<br>ಭಾರತ ಸರ್ಕಾರದ ಗಣಿ ಮಂತ್ರಾಲಯದ ಸುಸ್ಥಿರ ಮರಳು ಗಣಿಗಾರಿಕೆ ನಿರ್ವಹಣೆ ಮಾರ್ಗಸೂಚಿಗಳು-2016 ರಂತೆ, ಪರಿಸರ ಅನುಮತಿ ಪತ್ರದಲ್ಲಿನ ಷರತ್ತಿನಂತೆ ಹಾಗೂ ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿ1994 ರ ತಿದ್ದುಪಡಿ ನಿಯಮ-2016 ರ ನಿಯಮ 31-R ರ ಉಪನಿಯಮ 17 ರಂತೆ ನದಿ ನೀರಿನಲ್ಲಿ ಮರಳು ತೆಗೆಯಲು ಅವಕಾಶವಿರುವುದಿಲ್ಲ.<br>ಮುಂದುವರೆದು, ಕರಾವಳಿ ಜಿಲ್ಲೆಗಳ ಕರಾವಳಿ ನಿಯಂತ್ರಣ ವಲಯ ಹೊರತುಪಡಿಸಿದ ಪ್ರದೇಶ (Non CRZ)ಗಳಿಗೆ ಸಂಬಂಧಿಸಿದಂತೆ,<br>1. ಉಡುಪಿ ಜಿಲ್ಲಾ ವ್ಯಾಪ್ತಿಯ ನದಿ ಪಾತ್ರಗಳಲ್ಲಿ ತೆರೆದ ಮರಳು ನಿಕ್ಷೇಪ ಲಭ್ಯವಿರುವ 24 ಮರಳು ಬ್ಲಾಕ್ ಗಳನ್ನು ಜಿಲ್ಲಾ ಮರಳು ಸಮಿತಿಯಿಂದ ಗುರುತಿಸಿ, ಅಧಿಸೂಚನೆ ಹೊರಡಿಸಿ, ಹೊಸ ಮರಳು ನೀತಿ-2020 ರಂತೆ ಸದರಿ ಪ್ರದೇಶದಲ್ಲಿ ಮರಳು ಗಣಿಗಾರಿಕೆ ನಡೆಸಲು ಕರ್ನಾಟಕ ಸ್ಟೇಟ್ ಮಿನರಲ್ ಕಾರ್ಪೋರೇಶನ್ ಇವರಿಗೆ ವಹಿಸಲಾಗಿರುತ್ತದೆ.<br>2. ದಕ್ಷಿಣ ಕನ್ನಡ ಜಿಲ್ಲಾ ವ್ಯಾಪ್ತಿಯಲ್ಲಿ ಈ ಹಿಂದೆ ಟೆಂಡರ್-ಕಂ-ಹರಾಜು ಮೂಲಕ ವಿಲೇಪಡಿಸಲು ಗುರುತಿಸಲಾಗಿದ್ದ 30 ಮರಳು ಬ್ಲಾಕ್ ಗಳನ್ನು KSMCL ಅಧಿಕಾರಿಗಳು ಸ್ಥಳ ಪರಿಶೀಲನೆ ನಡೆಸಿದ್ದು, ಸ್ಥಳ ಪರಿಶೀಲನೆ ವರದಿ ಬಂದ ನಂತರ ಜಿಲ್ಲಾ ಮರಳು ಸಮಿತಿಯಿಂದ ಸದರಿ ಸಂಸ್ಥೆಗೆ ಮರಳು ಗಣಿಗಾರಿಕೆಗೆ ಅಧಿಸೂಚನೆ ಹೊರಡಿಸಲು ಕ್ರಮ ಕೈಗೊಳ್ಳಲಾಗುವುದು.<br>3. ಉತ್ತರ ಕನ್ನಡ ಜಿಲ್ಲಾ ವ್ಯಾಪ್ತಿಯ ಕರಾವಳಿ ನಿಯಂತ್ರಣ ವಲಯ ಹೊರತುಪಡಿಸಿದ ಪ್ರದೇಶಗಳ ವ್ಯಾಪ್ತಿಯಲ್ಲಿ ಯಾವುದೇ ಮರಳು ಬ್ಲಾಕ್ ಗಳನ್ನು ಗುರುತಿಸಿರುವುದಿಲ್ಲ. |

ಸಂಖ್ಯೆ:ಸಿಐ 54 ಎಂಎಂಎನ್ 2021

(ಮುರುಗೇಶ್ ಆರ್. ನಿರಾಣಿ)

ಗಣಿ ಮತ್ತು ಭೂವಿಜ್ಞಾನ ಸಚಿವರು



# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1110 |
| ಸದಸ್ಯರ ಹೆಸರು | : | ಶ್ರೀ ಅಭಯ್ ಪಾಟೀಲ್ |
| ಉತ್ತರಿಸಬೇಕಾದ ದಿನಾಂಕ | : | 05.02.2021 |
| ಉತ್ತರಿಸಬೇಕಾದ ಸಚಿವರು | : | ನಗರಾಭಿವೃದ್ಧಿ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ) | ದಿನಾಂಕ 01.04.2018 ರಿಂದ 31.12.2020 ರ ಅವಧಿಯಲ್ಲಿ ಬೆಳಗಾವಿ ಮಹಾನಗರ ಪಾಲಿಕೆಯಲ್ಲಿ ವಾರ್ಡುವಾರು ಸ್ವಚ್ಛತೆಗಾಗಿ ವೆಚ್ಚ ಮಾಡಿರುವ ಅನುದಾನವೆಷ್ಟು; (ವಿವರಗಳನ್ನು ನೀಡುವುದು) | ಬೆಳಗಾವಿ ಮಹಾನಗರ ಪಾಲಿಕೆಯಲ್ಲಿ ಸ್ವಚ್ಛತಾ ಕೆಲಸಕ್ಕಾಗಿ ದಿನಾಂಕ 01/04/2018 ರಿಂದ 31/12/2020 ರ ಅವಧಿಯಲ್ಲಿ ರೂ. 6472.84 ಲಕ್ಷಗಳನ್ನು ವೆಚ್ಚ ಮಾಡಲಾಗಿದೆ. |
| ಆ) | ಸ್ವಚ್ಛತೆಗಾಗಿ ಯಾವ ಗುತ್ತಿಗೆದಾರರು ಯಾವ ಯಾವ ವಾರ್ಡುಗಳಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ; (ವಿವರ ನೀಡುವುದು) | ಬೆಳಗಾವಿ ಮಹಾನಗರ ಪಾಲಿಕೆಯಲ್ಲಿ ಸ್ವಚ್ಛತೆಗಾಗಿ ಈ ಕೆಳಗೆ ನಮೂದಿಸಿದಂತೆ ಗುತ್ತಿಗೆದಾರರು ಪ್ಯಾಕೇಜುವಾರು ಸ್ವಚ್ಛತಾ ಕಾರ್ಯ ನಿರ್ವಹಿಸುತ್ತಿದ್ದಾರೆ. |

| ಕ್ರ. ಸಂ. | ವಾರ್ಡ್ ಸಂಖ್ಯೆ | ಪ್ಯಾಕೇಜ್ ಸಂಖ್ಯೆ | ಗುತ್ತಿಗೆದಾರರ ಹೆಸರು |
|---|---|---|---|
| 1 | 1,4 | 1 | ಎನ್. ಜಿ. ಗೊಲ್ಲರ್ |
| 2 | 2,3 | 2 | ಎನ್. ಜಿ. ಗೊಲ್ಲರ್ |
| 3 | 5,6 | 3 | ಎನ್. ಜಿ. ಗೊಲ್ಲರ್ |
| 4 | 7,8 | 4 | ಆರ್. ಜಿ. ಮಾಸೇಕರ್ |
| 5 | 9,12 | 5 | ಡಿ. ಎಸ್. ಸಾಖೆ. |
| 6 | 10,11 | 6 | ಡಿ. ಎಸ್. ಸಾಖೆ. |
| 7 | 13,14,15 | 7 | ವಾಯ್. ಬಿ. ಗೊಲ್ಲರ್ |
| 8 | 20,21 | 8 | ವಾಯ್. ಬಿ. ಗೊಲ್ಲರ್ |
| 9 | 22,23 | 9 | ವಾಯ್. ಬಿ. ಗೊಲ್ಲರ್ |
| 10 | 24,25 | 10 | ವಾಯ್. ಬಿ. ಗೊಲ್ಲರ್ |
| 11 | 30,31,33 | 11 | ಭರತ ಶರ್ಮಾ |
| 12 | 32,34 | 12 | ಭರತ ಶರ್ಮಾ |
| 13 | 35,37,38 | 13 | ಎಸ್. ಬಿ. ಕಾಮನಾಚೆ |
| 14 | 36,39 | 14 | ಎಸ್. ಬಿ. ಕಾಮನಾಚೆ |
| 15 | 40,41 | 15 | ಆರ್. ಎ. ಪಾವಶೆ |
| 16 | 44,55 | 16 | ಆರ್. ಎ. ಪಾವಶೆ |
| 17 | 45,46 | 17 | ಎಮ್. ಪಿ. ಚೌಗುಲೆ |
| 18 | 47,48 | 18 | ಎಮ್. ಪಿ. ಚೌಗುಲೆ |
| 19 | 49,50 | 19 | ಎನ್. ಡಿ. ಪಾಟೀಲ |
| 20 | 51,54 | 20 | ಎನ್. ಡಿ. ಪಾಟೀಲ |
| 21 | 42,43 | 21 | ವಾಯ್. ಬಿ. ಗೊಲ್ಲರ್ |
| 22 | 52,53 | 22 | ವಾಯ್. ಬಿ. ಗೊಲ್ಲರ್ |

| | | |
|---|---|---|
| ಇ) | ಬೆಳಗಾವಿ ಮಹಾನಗರ ಪಾಲಿಕೆಯ ವಿವಿಧ ವಾರ್ಡುಗಳಲ್ಲಿ ನೀಡಿರುವ ಸ್ವಚ್ಛತಾ ಗುತ್ತಿಗೆಯ ಅವಧಿಯು ಮುಗಿದಿದೆಯೇ; ಮುಗಿದಿದ್ದಲ್ಲಿ, ಯಾವಾಗ ಮುಗಿದಿರುತ್ತದೆ; ಪ್ರಸ್ತುತ ಬೇರೆ ಗುತ್ತಿಗೆ ಪ್ರಕ್ರಿಯೆಯನ್ನು ನಡೆಸಿ ಗುತ್ತಿಗೆದಾರರನ್ನು ನೇಮಕ ಮಾಡಲಾಗಿದೆಯೇ; ಅಥವಾ ಅನಧಿಕೃತವಾಗಿ ಈಗಿರುವವರನ್ನೇ ಮುಂದುವರೆಸಲಾಗಿದೆಯೇ; ಮುಂದುವರೆಸಿದ್ದಲ್ಲಿ, ಈ ಬಗ್ಗೆ ಕಾನೂನಿನಲ್ಲಿ ಅವಕಾಶವಿದೆಯೇ; ಇಲ್ಲವಾದಲ್ಲಿ, ಸರ್ಕಾರವು ತಪ್ಪಿತಸ್ಥ ಅಧಿಕಾರಿಗಳ ಮೇಲೆ ಕ್ರಮ ಕೈಗೊಳ್ಳುವುದೇ; | ಬೆಳಗಾವಿ ಮಹಾನಗರ ಪಾಲಿಕೆಯಲ್ಲಿನ 47 ವಾರ್ಡುಗಳಲ್ಲಿ ರಸ್ತೆ ಕಸ ಗುಡಿಸುವ ಹಾಗೂ ಇತರೆ ಸ್ವಚ್ಛತೆಯ ಕೆಲಸಗಳಿಗೆ 22 ಪ್ಯಾಕೇಜುಗಳಲ್ಲಿ ಗುತ್ತಿಗೆ ನೀಡುವ ವಿಷಯಕ್ಕೆ ಸಂಬಂಧಿಸಿದಂತೆ ದಿನಾಂಕ:-01/08/2015 ರಲ್ಲಿ ಕಾರ್ಯಾದೇಶ ನೀಡಲಾಗಿದ್ದು, ದಿನಾಂಕ 31/07/2016 ಕ್ಕೆ ಟೆಂಡರ್ ಅವಧಿ ಮುಕ್ತಾಯವಾಗಿರುತ್ತದೆ.<br><br>ಸದರಿ 47 ವಾರ್ಡಗಳ 22 ಪ್ಯಾಕೇಜುಗಳಿಗೆ ಬೀದಿ ಕಸ ಗುಡಿಸುವಿಕೆಗೆ ಹೊಸ ಟೆಂಡರ್ ಕರೆಯಲು ಆಡಳಿತಾತ್ಮಕ ಅನುಮೋದನೆಯನ್ನು ಪಡೆಯಲು ಹಾಗೂ ಹೊಸ ಟೆಂಡರ್ ಪ್ರಕ್ರಿಯೆ ಪೂರ್ಣಗೊಳ್ಳುವವರೆಗೆ ಹಳೆಯ ಟೆಂಡರ್‌ನ್ನು ಮುಂದುವರೆಸಲು ದಿನಾಂಕ 12/04/2016 ರ ಪರಿಷತ್ ಸಭೆಯಲ್ಲಿ ಅಂಗೀಕರಿಸಲಾಗಿದೆ.<br><br>ತದನಂತರ ಪರಿಷತ್ ಸಭೆಯ ಗೊತ್ತುವಳಿಯೊಂದಿಗೆ ದಿನಾಂಕ:-28/10/2016 ರಂದು ಹೊಸ ಟೆಂಡರ್‌ಗೆ ನಿರ್ದೇಶನಾಲಯದಿಂದ ಆಡಳಿತಾತ್ಮಕ ಅನುಮೋದನೆ ಪಡೆಯಲು ಸಲ್ಲಿಸಿ ದಿನಾಂಕ:-16/02/2017 ರಂದು ತಾಂತ್ರಿಕ ಅನುಮೋದನೆ ಪಡೆಯಲಾಗಿರುತ್ತದೆ ಹಾಗೂ ಸದರಿ ಅನುಮೋದನೆಯನ್ವಯ ದಿನಾಂಕ:-10/03/2017, ದಿನಾಂಕ:-12/05/2017 ದಿನಾಂಕ:-29/06/2017 ಗಳಂದು ಟೆಂಡರ್‌ಗಳನ್ನು ಆಹ್ವಾನಿಸಲಾಗಿರುತ್ತದೆ. 3 ಬಾರಿ ಟೆಂಡರ್ ಅಹ್ವಾನಿಸಿದ್ದಾಗ್ಯೂ ಯಾವುದೇ ಬಿಡ್‌ದಾರರು ಟೆಂಡರ್ ಪ್ರಕ್ರಿಯೆಯಲ್ಲಿ ಭಾಗವಹಿಸಿರುವುದಿಲ್ಲ.<br><br>ಏತನ್ಮಧ್ಯೆ ಸರ್ಕಾರದ ಆದೇಶ ಸಂಖ್ಯೆ:ನಅಇ/126/ ಟಿಎಂಎಸ್/2016. ದಿನಾಂಕ:-07/08/2017 ರನ್ವಯ ಖಾಲಿ ಇರುವ ಪೌರಕಾರ್ಮಿಕರ ಹುದ್ದೆಗಳನ್ನು 700 ಜನಸಂಖ್ಯೆಗೆ ಒಬ್ಬರಂತೆ ಭರ್ತಿ ಮಾಡಲು ಸಹ ಸೂಚಿಸಿರುವುದರಿಂದ ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ ಇವರು ದಿನಾಂಕ:-23/02/2018 ರಂದು ಅಧಿಸೂಚನೆಯನ್ನು ಹೊರಡಿಸಿದ್ದು, ಸದರಿ ಅಧಿಸೂಚನೆಗೆ ಮಾನ್ಯ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ. 101773-101794/2018 ರಲ್ಲಿ ತಡೆಯಾಜ್ಞೆ ನೀಡಿರುತ್ತದೆ.<br><br>ಸರ್ಕಾರದ ಸುತ್ತೋಲೆಯಂತೆ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಬೆಳಗಾವಿ ಮಹಾನಗರಪಾಲಿಕೆಯಲ್ಲಿ 154 ಖಾಯಂ ಪೌರಕಾರ್ಮಿಕರು ಹಾಗೂ 538 (10 ಜನ ನಿಧನ ಹೊಂದಿದ ಪೌರಕಾರ್ಮಿಕರನ್ನು ಹೊರತುಪಡಿಸಿ) ನೇರಪಾವತಿ ಪೌರಕಾರ್ಮಿಕರು ಕರ್ತವ್ಯ ನಿರ್ವಹಿಸುತ್ತಿದ್ದು, ಖಾಯಂ ಪೌರಕಾರ್ಮಿಕರನ್ನು ಹೊರತುಪಡಿಸಿ ಉಳಿಯುವ ಹುದ್ದೆಗಳಿಗೆ ವಿಶೇಷ ನೇಮಕಾತಿ ಪೂರ್ಣಗೊಂಡಿರದೆ ಇರುವುದರಿಂದ ನಿಗದಿಪಡಿಸಿದ ಅರ್ಹತಾ ಅವಧಿಯನ್ನು ಪೂರ್ಣಗೊಳಿಸಿದ ಬಗ್ಗೆ ದೃಢಪಡಿಸಿಕೊಂಡು, ಕನಿಷ್ಠ ವೇತನ ಕಾಯ್ದೆಯನ್ವಯ ಪೌರಕಾರ್ಮಿಕರನ್ನು ಗುರುತಿಸಿ ಪಾಲಿಕೆಯಿಂದ ನೇರ ಪಾವತಿಗೆ ಕ್ರಮಜರುಗಿಸಲಾಗುತ್ತಿದೆ. ಪೌರಕಾರ್ಮಿಕೇತರ ಸ್ವಚ್ಛತಾ ಕಾರ್ಮಿಕರನ್ನು ಹಾಗೂ ವಾಹನ ಯಂತ್ರೋಪಕರಣಗಳನ್ನು ಗುತ್ತಿಗೆದಾರರಿಂದ ಪೂರೈಸಲು ದಿನಾಂಕ:-01/02/2019 ರಂದು ಪಾಲಿಕೆಯಿಂದ ಆದೇಶ ನೀಡಲಾಗಿರುತ್ತದೆ. |



## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1182 |
| ಸದಸ್ಯರ ಹೆಸರು | ಶ್ರೀ ಹ್ಯಾರಿಸ್ ಎನ್. |
| ಉತ್ತರಿಸಬೇಕಾದ ದಿನಾಂಕ | 05.02.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

<table>
<tr><th>ಕ್ರ.ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ರಾಜ್ಯದಲ್ಲಿ ಗಣಿಗಾರಿಕೆ ನಡೆಸಲು ಅನುಮತಿಗೆ ಕಾಯ್ದೆ ಕಾನೂನುಗಳಿದ್ದರೂ ಅಕ್ರಮ ಗಣಿಗಾರಿಕೆ ನಡಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಅಕ್ರಮ ಗಣಿಗಾರಿಕೆಯನ್ನು ತಡೆಗಟ್ಟಲು ಸರ್ಕಾರ ಕೈಗೊಂಡ ಕ್ರಮಗಳೇನು;</td><td>
ಬಂದಿರುತ್ತದೆ.
ಅಕ್ರಮವಾಗಿ ಗಣಿಗಾರಿಕೆ ನಡೆಸುತ್ತಿರುವವರ ವಿರುದ್ಧ ಎಂ.ಎಂ.(ಡಿ&ಆರ್) ಕಾಯ್ದೆ, 1957 ಮತ್ತು ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994 ರಂತೆ ಮೊಕದ್ದಮೆಗಳ ದಾಖಲಿಸಿ ಮತ್ತು ದಂಡ ವಿಧಿಸಿ, ಸಂಗ್ರಹಿಸಲು ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುತ್ತಿದೆ.
ಕಳೆದ 02 ವರ್ಷಗಳಲ್ಲಿ ಅನಧಿಕೃತ ಕಲ್ಲು ಗಣಿಗಾರಿಕೆ ಮತ್ತು ಮರಳು ಗಣಿಗಾರಿಕೆ ಸಂಬಂಧ ಕೈಗೊಂಡ ಕ್ರಮಗಳ ವಿವರ ಕೆಳಕಂಡಂತಿದೆ:
ಕಲ್ಲುಗಣಿಗಾರಿಕೆ:- (ರೂ.ಲಕ್ಷಗಳಲ್ಲಿ)
<table>
<tr><th>ಕ್ರ. ಸಂ.</th><th>ವರ್ಷ</th><th>ಪತ್ತೆ ಹಚ್ಚಿದ ಪ್ರಕರಣಗಳು</th><th>ದಾಖಲಿಸಿರುವ ಮೊಕದ್ದಮೆಗಳ ಸಂಖ್ಯೆ</th><th>ವಸೂಲಾದ ದಂಡ</th></tr>
<tr><td>1.</td><td>2019-20</td><td>266</td><td>117</td><td>908.70</td></tr>
<tr><td>2.</td><td>2020-21</td><td>43</td><td>6</td><td>25.19</td></tr>
<tr><td colspan="2">ಒಟ್ಟು</td><td>309</td><td>123</td><td>933.89</td></tr>
</table>
ಮರಳು ಗಣಿಗಾರಿಕೆ:- (ರೂ.ಲಕ್ಷಗಳಲ್ಲಿ)
<table>
<tr><th>ಕ್ರ. ಸಂ.</th><th>ವರ್ಷ</th><th>ಪತ್ತೆ ಹಚ್ಚಿದ ಪ್ರಕರಣಗಳು</th><th>ದಾಖಲಿಸಿರುವ ಮೊಕದ್ದಮೆಗಳ ಸಂಖ್ಯೆ</th><th>ವಸೂಲಾದ ದಂಡ</th></tr>
<tr><td>1.</td><td>2019-20</td><td>240</td><td>106</td><td>128.81</td></tr>
<tr><td>2.</td><td>2020-21</td><td>80</td><td>34</td><td>30.88</td></tr>
<tr><td colspan="2">ಒಟ್ಟು</td><td>320</td><td>140</td><td>159.69</td></tr>
</table>
</td></tr>
<tr><td>ಆ)</td><td>ಕಳೆದ 2 ವರ್ಷಗಳಲ್ಲಿ ಎಷ್ಟು ಅಕ್ರಮ ಗಣಿಗಾರಿಕೆಗಳನ್ನು ಗುರುತಿಸಿ ಕ್ರಮ ಜರುಗಿಸಲಾಗಿದೆ; ಅಕ್ರಮ ಗಣಿಗಾರಿಕೆಯಿಂದ ನೈಸರ್ಗಿಕ ಸಂಪತ್ತಿನ ಲೂಟಿ ಮತ್ತು ಪರಿಸರ ಮಾಲಿನ್ಯ ಉಂಟಾಗುತ್ತಿರುವುದರಿಂದ ಸಾರ್ವಜನಿಕರಿಗಾಗುತ್ತಿರುವ</td><td>
ಕಳೆದ 02 ವರ್ಷಗಳಲ್ಲಿ ಅನಧಿಕೃತ ಕಲ್ಲುಗಣಿಗಾರಿಕೆ ಮತ್ತು ಮರಳು ಗಣಿಗಾರಿಕೆ ಸಂಬಂಧ ಕೈಗೊಂಡ ಕ್ರಮಗಳ ಅಂಕಿ ಅಂಶಗಳ ವಿವರಗಳನ್ನು ಕ್ರ.ಸಂ (ಅ)ರಲ್ಲಿ ನೀಡಲಾಗಿದೆ.
ಅಕ್ರಮ ಕಲ್ಲು ಗಣಿಗಾರಿಕೆಯಿಂದ ಯಾವುದೇ ಕಾಯ್ದೆ ಮತ್ತು ನಿಯಮಗಳನ್ನು ಪಾಲನೆ ಮಾಡದ ಪ್ರಯುಕ್ತ ಕಲ್ಲು ಗಣಿಗಾರಿಕೆ ಪ್ರದೇಶದ ಸುತ್ತಲೂ ಇರುವ ನೈಸರ್ಗಿಕ ಮತ್ತು ವ್ಯವಸಾಯ ಭೂಮಿಗಳಿಗೆ ಹಾಗೂ ಅಕ್ರಮ ಖನಿಜ ಸಾಗಾಣಿಕೆ ವಾಹನಗಳಿಂದ ಸಾರ್ವಜನಿಕ ರಚನೆಗಳು ಮತ್ತು ರಸ್ತೆಗಳಿಗೆ ಹಾನಿಯಾಗುವ ಸಂಭವವಿರುತ್ತದೆ.
</td></tr>
</table>

| | | |
|---|---|---|
| | ತೊಂದರೆಗಳನ್ನು ತಡೆಗಟ್ಟಲು ಸರ್ಕಾರದ ಕ್ರಮವೇನು; | ಅಕ್ರಮವಾಗಿ ಗಣಿಗಾರಿಕೆ ನಡೆಸುತ್ತಿರುವವರ ವಿರುದ್ಧ ಎಂ.ಎಂ. (ಡಿ&ಆರ್) ಕಾಯ್ದೆ, 1957 ಮತ್ತು ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994 ರಂತೆ ಮೊಕದ್ದಮೆಗಳ ದಾಖಲು ಮತ್ತು ದಂಡ ವಿಧಿಸಿ, ಸಂಗ್ರಹಿಸಲು ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುತ್ತಿದೆ. |
| ಇ) | ಕಳೆದ 2 ವರ್ಷಗಳಲ್ಲಿ ಗಣಿಗಾರಿಕೆಯಿಂದ ಮೃತರಾದ ಕಾರ್ಮಿಕರಿಗೆ ಪರಿಹಾರ ನೀಡಲಾಗಿದೆಯೇ; ಅಕ್ರಮ ಗಣಿಗಾರಿಕೆ ನಡೆಸುತ್ತಿರುವವರ ವಿರುದ್ಧ ಯಾವ ಕ್ರಮ ಕೈಗೊಳ್ಳಲಾಗಿದೆ; ಶಾಶ್ವತವಾಗಿ ಅಕ್ರಮ ಗಣಿಗಾರಿಕೆಯನ್ನು ತಡೆಗಟ್ಟಲು ಸರ್ಕಾರವು ಕಠಿಣ ಕಾನೂನು ಕ್ರಮ ಜಾರಿಗೊಳಿಸುವುದೇ? (ವಿವರ ನೀಡುವುದು) | ಕಳೆದ ಎರಡು ವರ್ಷಗಳಲ್ಲಿ ಕಲ್ಲುಗಣಿಗಾರಿಕೆ ನಡೆಯುವ ಸಂದರ್ಭದಲ್ಲಿ ಸ್ಫೋಟಕಗಳಿಂದ ಜೀವ ಹಾನಿಯಾಗಿರುವ ಪ್ರಕರಣಗಳಲ್ಲಿ ಗಣಿ ಮತ್ತು ಭೂವಿಜ್ಞಾನ ಇಲಾಖೆಯಿಂದ ಈ ಕೆಳಕಂಡಂತೆ ಕ್ರಮ ಕೈಗೊಳ್ಳಲಾಗಿರುತ್ತದೆ.<br>• ಚಾಮರಾಜನಗರ ಜಿಲ್ಲೆ ಮತ್ತು ತಾಲ್ಲೂಕು, ಮಕ್ಕಡಹಳ್ಳಿ ಗ್ರಾಮದಲ್ಲಿ ಸ್ವಾಮಿ ಎಂಬುವರ ಕಲ್ಲು ಗಣಿಗುತ್ತಿಗೆ ಪ್ರದೇಶದಲ್ಲಿ ಇಟ್ಟಿದ್ದ ಸ್ಫೋಟಕ ಸಿಡಿದು, ದಿನಾಂಕ 28.12.2020 ರಂದು ಶ್ರೀ ಮಹದೇವಶೆಟ್ಟಿ ಎಂಬುವರು ಮೃತಪಟ್ಟಿರುತ್ತಾರೆ. ಈ ಸಂಬಂಧ ಚಾಮರಾಜನಗರ ಗ್ರಾಮೀಣ ಪೋಲಿಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ 141/2020 ನ್ನು ದಿನಾಂಕ 29.12.2020ರಂದು ದಾಖಲಿಸಲಾಗಿರುತ್ತದೆ. ಕಲ್ಲುಗಣಿ ಗುತ್ತಿಗೆದಾರರಿಂದ ಮೃತ ಕಾರ್ಮಿಕರ ಕುಟುಂಬದವರಿಗೆ ಪರಿಹಾರ ಕೊಡಿಸುವ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ.<br>• ದಿನಾಂಕ 21.01.2021 ರಂದು ಶಿವಮೊಗ್ಗ ತಾಲ್ಲೂಕು, ಕಲ್ಲಗಂಗೂರು ಗ್ರಾಮದ ವ್ಯಾಪ್ತಿಯಲ್ಲಿ ಸ್ಫೋಟಕ ಸಿಡಿದು 06 ಜನ ಕಾರ್ಮಿಕರು ಮೃತಪಟ್ಟಿದ್ದು, ಸರ್ಕಾರದಿಂದ ಮೃತಪಟ್ಟ ಕಾರ್ಮಿಕರ ಕುಟುಂಬಗಳಿಗೆ ತಲಾ ರೂ. 5–00 ಲಕ್ಷ ಪರಿಹಾರ ಘೋಷಿಸಲಾಗಿರುತ್ತದೆ.<br>• ಪ್ರಸ್ತುತ, ಅಕ್ರಮ ಗಣಿಗಾರಿಕೆ ಸಂಬಂಧ ಭಾರತ ಸರ್ಕಾರದ ಎಂ.ಎಂ(ಡಿ&ಆರ್) ಕಾಯ್ದೆ, 1957 ಮತ್ತು ರಾಜ್ಯ ಸರ್ಕಾರದ ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994 ರಡಿ ಮೊಕದ್ದಮೆಗಳನ್ನು ದಾಖಲಿಸಿ ಮತ್ತು ದಂಡ ವಿಧಿಸಿ, ಸಂಗ್ರಹಿಸಲು ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುತ್ತಿದೆ. |

ಸಂಖ್ಯೆ ಸಿಐ 64 ಎಂಎಂಎನ್ 2021

(ಮುರುಗೇಶ್ ಆರ್. ನಿರಾಣಿ)
ಗಣಿ ಮತ್ತು ಭೂವಿಜ್ಞಾನ ಸಚಿವರು.



# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1141 |
| ಸದಸ್ಯರ ಹೆಸರು | ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ. |
| ಉತ್ತರಿಸಬೇಕಾದ ದಿನಾಂಕ | 05.02.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಕೊಡಗು ಜಿಲ್ಲೆಯಲ್ಲಿ ಎಷ್ಟು ಮರಳು ನಿಕ್ಷೇಪಗಳನ್ನು ಯಾವ ಯಾವ ಸ್ಥಳದಲ್ಲಿ ಗುರುತಿಸಲಾಗಿದೆ; | ಹೊಸ ಮರಳು ನೀತಿ, 2020 ರಂತೆ IV, V ಮತ್ತು VI ನೇ ಶ್ರೇಣಿಯ ಹಳ್ಳ / ನದಿ ಪಾತ್ರಗಳಲ್ಲಿ 11 ಮರಳು ಬ್ಲಾಕ್ ಗಳನ್ನು ಪ್ರಾಥಮಿಕ ಹಂತದಲ್ಲಿ ಗುರುತಿಸಲಾಗಿರುತ್ತದೆ. ವಿವರಗಳು ಈ ಕೆಳಕಂಡಂತಿರುತ್ತವೆ. (ಎಕರೆಗಳಲ್ಲಿ) (see table below) |
| ಆ) | ಹೀಗೆ ಗುರುತಿಸಿರುವ ಮರಳು ನಿಕ್ಷೇಪಗಳನ್ನು ಯಾವಾಗ ಸಾರ್ವಜನಿಕರಿಗೆ ಹಂಚಿಕೆ ಮಾಡಲಾಗುತ್ತದೆ; ಹಂಚಿಕೆ ಮಾಡಲು ಅನುಸರಿಸುವ ಮಾನದಂಡವೇನು; ವಿಳಂಬಕ್ಕೆ ಕಾರಣವೇನು; (ಪೂರ್ಣ ವಿವರ ನೀಡುವುದು) | ಹೊಸ ಮರಳು ನೀತಿ, 2020 ರಂತೆ, ಮರಳು ನಿಕ್ಷೇಪದ ಬ್ಲಾಕುಗಳನ್ನು ಸಾರ್ವಜನಿಕರಿಗೆ ನೇರವಾಗಿ ಹಂಚಿಕೆ ಮಾಡಲು ಅವಕಾಶವಿರುವುದಿಲ್ಲ. ಸದರಿ ಮರಳು ಬ್ಲಾಕುಗಳನ್ನು ಸರ್ಕಾರದಿಂದ ಅಧಿಸೂಚನೆ ಹೊರಡಿಸಿದ ಸರ್ಕಾರಿ ಇಲಾಖೆ / ಕಾರ್ಪೋರೇಷನ್ / ನಿಗಮ / ಮಂಡಳಿಗಳಿಂದ ಗಣಿಗಾರಿಕೆ ನಡೆಸಲು ಅವಕಾಶ ಕಲ್ಪಿಸಲಾಗಿರುತ್ತದೆ. |

(ಎಕರೆಗಳಲ್ಲಿ)

| ಕ್ರ.ಸಂ. | ತಾಲ್ಲೂಕು | ಬ್ಲಾಕ್‌ನ ಹೆಸರು | ವಿಸ್ತೀರ್ಣ |
|---|---|---|---|
| 1 | ಸೋಮವಾರಪೇಟೆ | ಮಲಗನಹಳ್ಳಿ ಬ್ಲಾಕ್-II | 12.00 |
| 2 | | ಹೊಸಳ್ಳಿ | 5.00 |
| 3 | | ಗರಗಂದೂರು | 8.0 |
| 4 | | ಶಿರಂಗಾಲ | 9.00 |
| 5 | | ಜಂಬೂರು | 6.20 |
| 6 | | ನೆಲ್ಲಿಹುದಿಕೇರಿ-1 | 7.20 |
| 7 | ಮಡಿಕೇರಿ | ನಾಪೋಕ್ಲು | 5.20 |
| 8 | | ಬೇತು | 6.20 |
| 9 | ವಿರಾಜಪೇಟೆ | ಹಾಲಗುಂದ | 6.30 |
| 10 | | ಕೊಟ್ಟಗೇರಿ | 7.00 |
| 11 | | ಕೋತೂರು | 5.20 |

| | | |
|---|---|---|
| | | ಅದರಂತೆ, ರಾಜ್ಯದ ಬೆಂಗಳೂರು ಮತ್ತು ಮೈಸೂರು ವಿಭಾಗದ ಎಲ್ಲಾ ಜಿಲ್ಲೆಗಳು ಮತ್ತು ಕಲಬುರಗಿ ವಿಭಾಗದ ಬಳ್ಳಾರಿ ಜಿಲ್ಲೆಯನ್ನು ಕರ್ನಾಟಕ ಸ್ಟೇಟ್ ಕಾರ್ಪೊರೇಷನ್ ಲಿ. ಇವರಿಗೆ ಮತ್ತು ಬೆಳಗಾವಿ ವಿಭಾಗದ ಎಲ್ಲಾ ಜಿಲ್ಲೆಗಳು ಹಾಗೂ ಕಲಬುರಗಿ ವಿಭಾಗದ ಬಳ್ಳಾರಿ ಜಿಲ್ಲೆಯನ್ನು ಹೊರತುಪಡಿಸಿ ಉಳಿದ ಜಿಲ್ಲೆಗಳನ್ನು ಹಟ್ಟಿ ಚಿನ್ನದ ಗಣಿ ನಿಯಮಿತ ಇವರಿಗೆ ಮರಳು ಗಣಿಗಾರಿಕೆ ಮತ್ತು ವಿಲೇವಾರಿ ಜವಾಬ್ದಾರಿಯನ್ನು ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಐ 344 ಎಂಎಂಎನ್ 2019, ದಿನಾಂಕ 18.05.2020 ರಂತೆ ವಹಿಸಲಾಗಿರುತ್ತದೆ.<br><br>ಸರ್ಕಾರವು ದಿನಾಂಕ 05.05.2020 ರಂದು ಹೊಸ ಮರಳು ನೀತಿ, 2020ನ್ನು ಜಾರಿಗೊಳಿಸಿದ್ದು, ಈ ಮರಳು ನೀತಿಯನ್ನು ಅನುಷ್ಠಾನಗೊಳಿಸುವ ಸಂಬಂಧ ಮಾರ್ಗಸೂಚಿಗಳನ್ನು ಹೊರಡಿಸಲಾಗಿರುತ್ತದೆ. ಸದರಿ ಮಾರ್ಗಸೂಚಿಯಂತೆ;<br><br>• I, II & III ನೇ ಶ್ರೇಣಿಯ ಹಳ್ಳ / ತೊರೆಗಳಲ್ಲಿನ ಮರಳು ನಿಕ್ಷೇಪದ ಪ್ರದೇಶಗಳನ್ನು ಕಂದಾಯ, ಅರಣ್ಯ, ಗಣಿ ಮತ್ತು ಭೂವಿಜ್ಞಾನ, ಅಂತರ್ಜಲ ಇಲಾಖೆ ಮತ್ತು ಗ್ರಾಮ ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳ ತಂಡದಿಂದ ಜಂಟಿ ಪರಿಶೀಲನೆ ಮಾಡಿ, ನಕ್ಷೆ ತಯಾರಿಸಿ ತಾಲ್ಲೂಕು ಮರಳು ಸಮಿತಿಯಿಂದ ಜಿಲ್ಲಾ ಮರಳು ಸಮಿತಿಗೆ ಸೂಕ್ತ ಶಿಫಾರಸ್ಸಿನೊಂದಿಗೆ ಅಧಿಸೂಚನೆಗಾಗಿ ಸಲ್ಲಿಸುವುದು, ನಂತರ ಜಿಲ್ಲಾ ಮರಳು ಸಮಿತಿಯ ಸಂಬಂಧಪಟ್ಟ ಗ್ರಾಮ ಪಂಚಾಯಿತಿಗಳಿಗೆ ಮರಳು ನಿಕ್ಷೇಪಗಳಲ್ಲಿನ ಮರಳನ್ನು ತೆಗೆಯಲು ಅಧಿಸೂಚನೆ ಹೊರಡಿಸುವುದು.<br><br>• IV, V & VI ನೇ ಶ್ರೇಣಿಯ ಹೊಳೆ / ನದಿಗಳಲ್ಲಿ ಹಾಗೂ ಜಲಾಶಯ / ಅಣೆಕಟ್ಟು / ಬ್ಯಾರೇಜ್ ಮತ್ತು ಅಣೆಕಟ್ಟಿನ ಹಿನ್ನೀರಿನ ಪ್ರದೇಶಗಳಲ್ಲಿ ಲಭ್ಯವಿರುವ ಮರಳು ಪ್ರದೇಶಗಳನ್ನು ಕಂದಾಯ, ಅರಣ್ಯ, ಗಣಿ ಮತ್ತು ಭೂವಿಜ್ಞಾನ ಮತ್ತು ಜಲಸಂಪನ್ಮೂಲ ಇಲಾಖೆ ಅಧಿಕಾರಿಗಳಿಂದ ಜಂಟಿಯಾಗಿ ಗುರುತಿಸಿ, ಸದರಿ ಪ್ರದೇಶದಲ್ಲಿರುವ ಸಂಗ್ರಹವಾಗಿರುವ ಮರಳಿನ ಪ್ರಮಾಣವನ್ನು ಅಂದಾಜಿಸಿ, ಗಡಿ ಬಾಂದುಗಳನ್ನು ಅಕ್ಷಾಂಶ ಮತ್ತು ರೇಖಾಂಶಗಳೊಂದಿಗೆ ಗುರುತಿಸಿ, ನಕ್ಷೆ ತಯಾರಿಸಿ, ಜಿಲ್ಲಾ ಮರಳು ಸಮಿತಿಗೆ ಅಧಿಸೂಚನೆ ಹೊರಡಿಸಲು ಸೂಕ್ತ ಶಿಫಾರಸ್ಸಿನೊಂದಿಗೆ ವರದಿ ಸಲ್ಲಿಸುವುದು. ನಂತರ ಜಿಲ್ಲಾ ಮರಳು ಸಮಿತಿಯು ಸರ್ಕಾರದಿಂದ ಅಧಿಸೂಚನೆ ಹೊರಡಿಸಿದ ಸರ್ಕಾರಿ ಸಂಸ್ಥೆಗಳಿಗೆ ಮರಳು ಗಣಿಗಾರಿಕೆ ನಡೆಸಲು / ತೆಗೆಯಲು ಅಧಿಸೂಚನೆ ಹೊರಡಿಸಿ ಕಾರ್ಯಾದೇಶ ನೀಡುವುದು. ನಂತರ ಸಂಬಂಧಪಟ್ಟ ಸಂಸ್ಥೆಗಳು ಕ್ವಾರಿ ಯೋಜನೆ ತಯಾರಿಸಿ ಅನುಮೋದನೆ ಪಡೆದು, ಜಿಲ್ಲಾ ಮರಳು ಸಮಿತಿಗೆ ಪರಿಸರ ಅನುಮತಿ ಪತ್ರ ಸಲ್ಲಿಸಿದ ನಂತರ ಸದರಿ ಸಂಸ್ಥೆಯವರಿಗೆ ಮರಳು ಗಣಿಗಾರಿಕೆ ನಡೆಸಲು ಅವಕಾಶ ಕಲ್ಪಿಸಲಾಗುವುದು. |



# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1178 |
| ಸದಸ್ಯರ ಹೆಸರು | ಶ್ರೀ ಪುಟ್ಟರಂಗಶೆಟ್ಟಿ ಸಿ. |
| ಉತ್ತರಿಸಬೇಕಾದ ದಿನಾಂಕ | 05.02.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕಳೆದ 3 ವರ್ಷಗಳಿಂದ ಎಷ್ಟು ಕೇಂದ್ರಗಳಿಂದ ಮರಳು ಸಾಗಾಣಿಕೆಯನ್ನು ನಡೆಸಲಾಗುತ್ತಿದೆ; (ವರ್ಷವಾರು, ಜಿಲ್ಲಾವಾರು ಮಾಹಿತಿ ನೀಡುವುದು) | ರಾಜ್ಯದಲ್ಲಿ ಕಳೆದ ಮೂರು ವರ್ಷಗಳಲ್ಲಿ ಮರಳು ಗುತ್ತಿಗೆದಾರರು / ಲೈಸನ್ಸ್‌ದಾರರು / ತಾತ್ಕಾಲಿಕ ಪರವಾನಗಿದಾರರು ಸ್ಥಾಪಿಸಿರುವ ಮರಳು ಸಂಗ್ರಹಣಾ ಕೇಂದ್ರ (Stock Yards) ಗಳ ಜಿಲ್ಲಾವಾರು ವಿವರಗಳನ್ನು **ಅನುಬಂಧ-01** ರಲ್ಲಿ ನೀಡಲಾಗಿದೆ. ಸದರಿ ಮರಳು ಕೇಂದ್ರಗಳಿಂದ ಗುತ್ತಿಗೆದಾರರು ಮರಳು ಸಾಗಾಣಿಕೆ ಮಾಡಿರುತ್ತಾರೆ. |
| ಆ) | ಎಷ್ಟು ಪ್ರಮಾಣದ ಮರಳನ್ನು ಸಾಗಾಣಿಕೆ ಮಾಡಲಾಗಿದೆ; ಇದರಿಂದ ಸಂಗ್ರಹಿಸಲಾದ ರಾಯಧನವೆಷ್ಟು; (ಪೂರ್ಣ ಮಾಹಿತಿ ನೀಡುವುದು) | 2018-19 ನೇ ಸಾಲಿನಿಂದ 2020-21 ನೇ ಸಾಲಿನ ಡಿಸೆಂಬರ್ ಅಂತ್ಯದವರೆಗೆ ಮರಳು ಗುತ್ತಿಗೆದಾರರು ಸದರಿ ಮರಳು ಕೇಂದ್ರಗಳಿಂದ ಸಾಗಾಣಿಕೆ ಮಾಡಿದ ಮರಳಿನ ಪ್ರಮಾಣ ಮತ್ತು ಸಂಗ್ರಹಿಸಿದ ಮೊತ್ತದ ವಿವರಗಳನ್ನು **ಅನುಬಂಧ-01**ರಲ್ಲಿ ನೀಡಲಾಗಿದೆ. |
| ಇ) | ರಾಜ್ಯದಲ್ಲಿ ಎಷ್ಟು ಗಣಿಗಾರಿಕೆಗಳನ್ನು ಅನಧಿಕೃತವೆಂದು ಗುರುತಿಸಲಾಗಿದೆ; (ವಿವರ ನೀಡುವುದು). | 2018-19 ನೇ ಸಾಲಿನಿಂದ 2020-21 ನೇ ಸಾಲಿನ ಡಿಸೆಂಬರ್ ಅಂತ್ಯದವರೆಗೆ ರಾಜ್ಯದಲ್ಲಿ ಅನಧಿಕೃತ ಮರಳು ಗಣಿಗಾರಿಕೆಯಡಿ ಪತ್ತೆ ಹಚ್ಚಿದ ಪ್ರಕರಣಗಳ ಸಂಖ್ಯೆ, ಸಂಗ್ರಹಿಸಲಾದ ದಂಡದ ಮೊತ್ತ ಹಾಗೂ ದಾಖಲಿಸಲಾದ ಮೊಕದ್ದಮೆಗಳ ವಿವರಗಳನ್ನು **ಅನುಬಂಧ-02** ರಲ್ಲಿ ನೀಡಲಾಗಿದೆ. |
| ಈ) | ಅನಧಿಕೃತ ಗಣಿಗಾರಿಕೆ ನಡೆಸುತ್ತಿರುವವರ ವಿರುದ್ಧ ಸರ್ಕಾರ ಕೈಗೊಂಡ ಕ್ರಮಗಳೇನು?(ವಿವರ ನೀಡುವುದು) | ರಾಜ್ಯದಲ್ಲಿ ಅನಧಿಕೃತ ಮರಳು ಗಣಿಗಾರಿಕೆ ಚಟುವಟಿಕೆಗಳನ್ನು ನಿಯಂತ್ರಿಸಲು ಸರ್ಕಾರದಿಂದ ಈ ಕೆಳಕಂಡಂತೆ ಕ್ರಮ ವಹಿಸಲಾಗಿರುತ್ತದೆ;<br>• ಅನಧಿಕೃತ ಮರಳು ಗಣಿಗಾರಿಕೆ, ದಾಸ್ತಾನು, ಸಾಗಾಣಿಕೆಯನ್ನು ತಡೆಗಟ್ಟಲು ಸಂಬಂಧಿಸಿದ ಜಿಲ್ಲೆಗಳ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಮರಳು ಸಮಿತಿ ಹಾಗೂ ಉಪವಿಭಾಗಾಧಿಕಾರಿಗಳ ಅಧ್ಯಕ್ಷತೆಯಲ್ಲಿ ತಾಲ್ಲೂಕು ಮರಳು ಸಮಿತಿಯನ್ನು ರಚಿಸಲಾಗಿರುತ್ತದೆ. |

--2

| | | |
|---|---|---|
| | | • ಮೇಲ್ಕಂಡ ಸಮಿತಿಯಲ್ಲಿ ಕಂದಾಯ, ಪೊಲೀಸ್, ಅರಣ್ಯ, ಲೋಕೋಪಯೋಗಿ, ಜಿಲ್ಲಾ ಪಂಚಾಯತ್, ಗಣಿ ಮತ್ತು ಭೂವಿಜ್ಞಾನ ಹಾಗೂ ಪ್ರಾದೇಶಿಕ ಸಾರಿಗೆ ಇಲಾಖೆ ಅಧಿಕಾರಿಗಳು ಸದಸ್ಯರುಗಳಾಗಿರುತ್ತಾರೆ. ಈ ಇಲಾಖೆಗಳ ಅಧಿಕಾರಿಗಳಿಗೆ ಅನಧಿಕೃತ ಮರಳು ಗಣಿಗಾರಿಕೆ ಚಟುವಟಿಕೆಗಳನ್ನು ತಡೆಯಲು ಗಣಿ ಮತ್ತು ಖನಿಜ (ಅಭಿವೃದ್ಧಿ ಮತ್ತು ನಿಯಂತ್ರಣ) ಕಾಯ್ದೆ, 1957ರ ಕಲಂ 4(1), 4(1-A), 21 ಹಾಗೂ 22 ರಡಿಯಲ್ಲಿ ಹಾಗೂ ಕರ್ನಾಟಕ ಉಪ ಖನಿಜ (ತಿದ್ದುಪಡಿ) ರಿಯಾಯಿತಿ ನಿಯಮಗಳು, 1994ರ ನಿಯಮ 31-Rರ ಉಪ ನಿಯಮ 13 ರಡಿಯಲ್ಲಿ ಸಂಬಂಧಪಟ್ಟ ಪೊಲೀಸ್ ಠಾಣೆಗಳಲ್ಲಿ ಹಾಗೂ ನ್ಯಾಯಾಲಯಗಳಲ್ಲಿ ಮೊಕದ್ದಮೆ ದಾಖಲಿಸಲು ಅಧಿಕಾರ ಪ್ರತ್ಯಾಯೋಜಿಸಲಾಗಿರುತ್ತದೆ.<br><br>• ಅನಧಿಕೃತ ಮರಳು ಗಣಿಗಾರಿಕೆ / ಸಾಗಾಣಿಕೆಯನ್ನು ನಿಯಂತ್ರಿಸಲು ಜಿಲ್ಲಾ ಮರಳು ಉಸ್ತುವಾರಿ ಸಮಿತಿಗಳಿಂದ ರಾಜ್ಯದಲ್ಲಿ ಆಯಕಟ್ಟಿನ ಪ್ರದೇಶಗಳಲ್ಲಿ ಮರಳು ತನಿಖಾ ಠಾಣೆಗಳನ್ನು ತೆರೆದು ಕಾರ್ಯ ನಿರ್ವಹಿಸಲಾಗುತ್ತಿದೆ. ಅಲ್ಲದೆ ಆಯಾ ಜಿಲ್ಲಾ ವ್ಯಾಪ್ತಿಗಳಲ್ಲಿ ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದ ಚಾಲಿತ ದಳವನ್ನು ರಚಿಸಿಕೊಂಡು ಅನಧಿಕೃತ ಮರಳು ಗಣಿಗಾರಿಕೆ / ಸಾಗಾಣಿಕೆಯನ್ನು ನಿಯಂತ್ರಿಸಲಾಗುತ್ತಿದೆ.<br><br>• ಮೇಲ್ಕಂಡಂತೆ, ರಾಜ್ಯದಲ್ಲಿ ಅನಧಿಕೃತ ಮರಳು ಗಣಿಗಾರಿಕೆ ಚಟುವಟಿಕೆಗಳನ್ನು ನಿಯಂತ್ರಿಸಲು ಕ್ರಮವಹಿಸಲಾಗಿರುತ್ತದೆ.<br><br>• ಕಳೆದ ಮೂರು ವರ್ಷಗಳಲ್ಲಿ ಆಯಾ ಜಿಲ್ಲಾ ಮರಳು ಸಮಿತಿಯಿಂದ ಅನಧಿಕೃತ ಮರಳು ಗಣಿಗಾರಿಕೆಯಡಿ ಕೈಗೊಂಡ ಕ್ರಮಗಳ ವಿವರಗಳನ್ನು **ಅನುಬಂಧ-02** ರಲ್ಲಿ ನೀಡಲಾಗಿದೆ. |

ಸಂಖ್ಯೆ ಸಿಐ 63 ಎಂಎಂಎನ್ 2021

**(ಮುರುಗೇಶ್ ಆರ್. ನಿರಾಣಿ)**

ಗಣಿ ಮತ್ತು ಭೂವಿಜ್ಞಾನ ಸಚಿವರು.



# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1192 |
| ಸದಸ್ಯರ ಹೆಸರು | ಶ್ರೀ ಸುಕುಮಾರ್ ಶೆಟ್ಟಿ ಬಿ.ಎಂ. |
| ಉತ್ತರಿಸಬೇಕಾದ ದಿನಾಂಕ | 05.02.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಉಡುಪಿ ಜಿಲ್ಲೆ ವ್ಯಾಪ್ತಿಯಲ್ಲಿ ಕಲ್ಲು ಗಣಿಗಾರಿಕೆಗೆ ಪರವಾನಿಗೆ ಪಡೆದವರ ಸಂಖ್ಯೆ ಎಷ್ಟು; (ಶಿಲೆ ಕಲ್ಲು, ಕ್ರಷರ್ ಸೇರಿದಂತೆ ಪರವಾನಿಗೆದಾರರ ಹೆಸರು, ವಿಳಾಸ, ಸರ್ವೆ ನಂ. ಸಹಿತ ಸಂಪೂರ್ಣ ಮಾಹಿತಿ ನೀಡುವುದು) | ಉಡುಪಿ ಜಿಲ್ಲಾ ವ್ಯಾಪ್ತಿಯಲ್ಲಿ ಉಪಖನಿಜಗಳಾದ ಕಟ್ಟಡ ಕಲ್ಲು, ಅಲಂಕಾರಿಕ ಶಿಲೆ, ಸಿಲಿಕಾ ಮರಳು, ಜೇಡಿಮಣ್ಣು ಮತ್ತು ಮುರ್ರಂ ಕಲ್ಲು ಗಣಿಗಾರಿಕೆಗಾಗಿ ಒಟ್ಟು 131 ಗಣಿ ಗುತ್ತಿಗೆಗಳನ್ನು ಮಂಜೂರು ಮಾಡಲಾಗಿರುತ್ತದೆ. ಸ್ಟೋನ್ ಕ್ರಷರ್ ಕಾರ್ಯಾಚರಣೆಗಾಗಿ 37 ಲೈಸೆನ್ಸ್‌ಗಳನ್ನು ಮಂಜೂರು ಮಾಡಲಾಗಿರುತ್ತದೆ.<br>ವಿವರಗಳನ್ನು **ಅನುಬಂಧ-01** ಮತ್ತು **02**ರಲ್ಲಿ ನೀಡಲಾಗಿದೆ. |
| ಆ) | ಜಿಲ್ಲೆಯಲ್ಲಿ ಕಳೆದ ಮೂರು ವರ್ಷಗಳಲ್ಲಿ ಗಣಿಗಾರಿಕೆಯಿಂದ ವಸೂಲಿಯಾದ ರಾಜಧನದ ವಿವರ ಒದಗಿಸುವುದು; (ವರ್ಷವಾರು ಸಂಪೂರ್ಣ ಮಾಹಿತಿ ಒದಗಿಸುವುದು) | ಉಡುಪಿ ಜಿಲ್ಲೆಯಲ್ಲಿ ಕಳೆದ ಮೂರು ವರ್ಷಗಳಲ್ಲಿ ಗಣಿಗಾರಿಕೆಯಿಂದ ಸಂಗ್ರಹವಾದ ರಾಜಧನದ ವಿವರ ಕೆಳಕಂಡಂತಿದೆ:<br>(ಮೊತ್ತ ರೂ.ಲಕ್ಷಗಳಲ್ಲಿ)<br>**2017-18**: 1876.05<br>**2018-19**: 1632.65<br>**2019-20**: 2412.17<br>**2020-21** (ಡಿಸೆಂಬರ್ ಅಂತ್ಯದವರೆಗೆ): 1653.30 |
| ಇ) | ಕಳೆದ ಮೂರು ವರ್ಷಗಳಲ್ಲಿ ವಸೂಲಿಯಾದ ರಾಜಧನವನ್ನು ಯಾವ ಯಾವ ಉದ್ದೇಶಕ್ಕೆ ಬಳಸಲಾಗಿದೆ? (ವರ್ಷವಾರು ಸಂಪೂರ್ಣ ಮಾಹಿತಿ ಒದಗಿಸುವುದು) | ಗಣಿಗಾರಿಕೆಯಿಂದ ಸಂಗ್ರಹವಾಗುವ ರಾಜಧನವನ್ನು ಸರ್ಕಾರದ ಲೆಕ್ಕ ಶೀರ್ಷಿಕೆ 0853-102-1-05 ಗೆ ಜಮೆ ಮಾಡಲಾಗುತ್ತದೆ. ಈ ರೀತಿ ಸಂಗ್ರಹವಾದ ಮೊತ್ತವನ್ನು ಸರ್ಕಾರದಿಂದ ಬಜೆಟ್ ಘೋಷಣೆಯಲ್ಲಿ ವಿವಿಧ ಕಾರ್ಯಕ್ರಮಗಳಿಗೆ ಅನುದಾನ ಬಿಡುಗಡೆ ಮಾಡಲಾಗುತ್ತದೆ. |

ಸಂಖ್ಯೆ ಸಿಐ 66 ಎಂಎಂಎನ್ 2021

(ಮುರುಗೇಶ್ ಆರ್. ನಿರಾಣಿ)
ಗಣಿ ಮತ್ತು ಭೂವಿಜ್ಞಾನ ಸಚಿವರು.

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1157 |
| ಸದಸ್ಯರ ಹೆಸರು | ಶ್ರೀ ನಾಗೇಂದ್ರ.ಬಿ |
| ಉತ್ತರಿಸುವ ದಿನಾಂಕ | 05/02/2021 |
| ಉತ್ತರಿಸುವವರು | ತೋಟಗಾರಿಕೆ ಮತ್ತು ರೇಷ್ಮೆ ಸಚಿವರು |

| | ಪ್ರಶ್ನೆಗಳು | ಉತ್ತರ |
|---|---|---|
| ಅ | ರೇಷ್ಮೆ ಇಲಾಖೆಯಲ್ಲಿರುವ ವಿವಿಧ ಯೋಜನೆಗಳಾವುವು; ಕಳೆದ ಮೂರು ವರ್ಷಗಳಲ್ಲಿ ಇಲಾಖೆಯಲ್ಲಿ ಜಾರಿಯಲ್ಲಿರುವ ವಿವಿಧ ಯೋಜನೆಗಳಿಗೆ ಮಂಜೂರು ಮಾಡಿದ ಅನುದಾನ ಎಷ್ಟು; ಬಿಡುಗಡೆಗೊಳಿಸಿದ ಅನುದಾನ ಎಷ್ಟು (ವರ್ಷವಾರು, ಯೋಜನೆವಾರು, ಮತ ಕ್ಷೇತ್ರವಾರು ಅನುದಾನದೊಂದಿಗೆ ಪೂರ್ಣ ವಿವರ ನೀಡುವುದು); | ಕಳೆದ ಮೂರು ವರ್ಷಗಳಲ್ಲಿ ರೇಷ್ಮೆ ಇಲಾಖೆಯಲ್ಲಿ ಜಾರಿಯಲ್ಲಿರುವ ವಿವಿಧ ಯೋಜನೆಗಳಿಗೆ ಮಂಜೂರು ಮಾಡಿದ ಅನುದಾನ ಮತ್ತು ಬಿಡುಗಡೆ ಮಾಡಿರುವ ಅನುದಾನದ ವಿವರಗಳನ್ನು ಮತಕ್ಷೇತ್ರವಾರು ಅನುಬಂಧದಲ್ಲಿ ನೀಡಿದೆ. |
| ಆ | ಕಳೆದ ಮೂರು ವರ್ಷಗಳಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ವಿವಿಧ ಯೋಜನೆಗಳ ಅನುಕೂಲ ಪಡೆದ ಫಲಾನುಭವಿಗಳ ಸಂಖ್ಯೆ ಎಷ್ಟು (ವರ್ಷವಾರು, ಯೋಜನೆಗಳವಾರು, ಫಲಾನುಭವಿವಾರು, ಮತಕ್ಷೇತ್ರವಾರು ಪೂರ್ಣ ವಿವರ ನೀಡುವುದು); | ಕಳೆದ ಮೂರು ವರ್ಷಗಳಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ರೇಷ್ಮೆ ಇಲಾಖೆಯಿಂದ ವಿವಿಧ ಯೋಜನೆಗಳಡಿ ಅನುಕೂಲ ಪಡೆದ ಫಲಾನುಭವಿಗಳ ವಿವರಗಳನ್ನು ಅನುಬಂಧ-1ರಲ್ಲಿ ನೀಡಿದೆ. |
| ಇ | ಫಲಾನುಭವಿಗಳ ಆಯ್ಕೆಯನ್ನು ಯಾವ ಮಾನದಂಡ ಅನುಸರಿಸಿ ಮಾಡಲಾಗಿದೆ (ವಿವರ ನೀಡುವುದು); | ರಾಜ್ಯದಲ್ಲಿ ರೇಷ್ಮೆ ಉದ್ಯಮವನ್ನು ಉತ್ತೇಜಿಸಲು ರೇಷ್ಮೆ ಇಲಾಖೆಯಿಂದ ಅನುಷ್ಠಾನಗೊಳಿಸುತ್ತಿರುವ ಕಾರ್ಯಕ್ರಮಗಳಡಿ ರೇಷ್ಮೆ ಬೆಳೆಗಾರರಿಗೆ ಸಹಾಯಧನ/ಪ್ರೋತ್ಸಾಹಧನ ನೀಡಲು ಈ ಕೆಳಕಂಡ ಸಾಮಾನ್ಯ ಮಾನದಂಡಗಳನ್ನು ಪರಿಗಣಿಸಲಾಗುತ್ತಿದೆ.<br>1. ನೀರಾವರಿ ಸೌಲಭ್ಯ<br>2. ಸ್ವಂತ ಹಿಪ್ಪುನೇರಳೆ ತೋಟ,<br>3. ರೇಷ್ಮೆ ಬೆಳೆಗಾರರಾಗಿರಬೇಕು<br>4. ಇಲಾಖೆಯ ನೀಡುವ ರೇಷ್ಮೆ ಬೆಳೆಗಾರರ ಚಾಲ್ತಿಯಲ್ಲಿರುವ ಪಾಸ್ ಪುಸ್ತಕ<br>5. ಮುಚ್ಚಳಿಕೆ ಪತ್ರ<br>6. ಆಧಾರ್ ಕಾರ್ಡ್<br>7. ಹನಿ ನೀರಾವರಿ ಅಳವಡಿಕೆ / ಸಲಕರಣೆ ಖರೀದಿಯನ್ನು ಇಲಾಖೆಯಿಂದ ಅನುಮೋದಿತ ಸಂಸ್ಥೆಗಳಿಂದ ಪಡೆದಿರಬೇಕು.<br>8. ಬ್ಯಾಂಕ್ ಖಾತೆ.<br>ಮುಂದುವರೆದು ಸದರಿ ಕಾರ್ಯಕ್ರಮಕ್ಕೆ ಆಗ್ಗಿಂದಾಗ್ಗೆ ಇಲಾಖೆಯು ಹೊರಡಿಸುವ ಮಾರ್ಗಸೂಚಿ/ ಅಧಿಸೂಚನೆಯಲ್ಲಿ ಸೂಚಿಸುವ ಅಗತ್ಯ ದಾಖಲಾತಿ ಮತ್ತು ಕ್ರಮಗಳನ್ನು ಅನುಸರಿಸಿದಲ್ಲಿ ಸಹಾಯಧನ ನೀಡಲು ಕ್ರಮವಹಿಸಲಾಗುವುದು. |

---2

| | | |
|---|---|---|
| ಈ) | ಆಯ್ಕೆ ಮಾಡಲಾದ ಫಲಾನುಭವಿಗಳಿಗೆ ಪೂರ್ಣ ಪ್ರಮಾಣದ ಅನುದಾನ ನೀಡಲಾಗಿದೆಯೇ; ಫಲಾನುಭವಿಗಳು ಯೋಜನೆಗಳ ಅನುಕೂಲ ಪಡೆದಿರುವವರೇ ಅಥವಾ ಇಲ್ಲವೇ; ಪಡೆಯದಿದ್ದಲ್ಲಿ, ಕಾರಣಗಳೇನು (ಪೂರ್ಣ ವಿವರ ನೀಡುವುದು); | ಆಯ್ಕೆ ಮಾಡಲಾದ ಫಲಾನುಭವಿಗಳಿಗೆ ಪೂರ್ಣ ಪ್ರಮಾಣದ ಅನುದಾನ ನೀಡಲಾಗಿದೆ. ರೇಷ್ಮೆ ಇಲಾಖೆಯಿಂದ ಅನುಷ್ಠಾನ ಗೊಳಿಸುತ್ತಿರುವ ಯೋಜನೆಗಳಡಿ ಗುರುತಿಸಿರುವ ಎಲ್ಲಾ ಫಲಾನುಭವಿಗಳು ಅನುಕೂಲ ಪಡೆದಿರುತ್ತಾರೆ. |
| ಉ | ಪ್ರಸಕ್ತ ಸಾಲಿನಲ್ಲಿ ಇಲಾಖೆಯ ವಿವಿಧ ಯೋಜನೆಗಳ ಅಡಿಯಲ್ಲಿ ಬಳ್ಳಾರಿ ಜಿಲ್ಲೆಗೆ ನೀಡಿರುವ ಅನುದಾನ ಎಷ್ಟು (ಮತಕ್ಷೇತ್ರಗಳವಾರು, ಯೋಜನೆಗಳವಾರು ಅನುದಾನದೊಂದಿಗೆ ಪೂರ್ಣ ವಿವರ ನೀಡುವುದು)? | ಪ್ರಸಕ್ತ ಸಾಲಿನಲ್ಲಿ ಇಲಾಖೆಯ ವಿವಿಧ ಯೋಜನೆಗಳ ಅಡಿಯಲ್ಲಿ ಬಳ್ಳಾರಿ ಜಿಲ್ಲೆಗೆ ನೀಡಿರುವ ಅನುದಾನ ಮತಕ್ಷೇತ್ರವಾರು ವಿವರಗಳನ್ನು ಅನುಬಂಧ-1 ರಲ್ಲಿ ನೀಡಿದೆ. |

ಸಂಖ್ಯೆ: ರೇಷ್ಮೆ 25 ರೇಕೃವಿ 2021

(ಆರ್.ಶಂಕರ್)
ತೋಟಗಾರಿಕೆ ಮತ್ತು ರೇಷ್ಮೆ ಸಚಿವರು



# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : | 1151 |
| ಸದಸ್ಯರ ಹೆಸರು : | ಶ್ರೀ ಖಾದರ್ ಯು.ಟಿ (ಮಂಗಳೂರು) |
| ಉತ್ತರಿಸಬೇಕಾದ ದಿನಾಂಕ : | 05-02-2021 |
| ಉತ್ತರಿಸುವವರು : | ಪೌರಾಡಳಿತ ಮತ್ತು ಸಕ್ಕರೆ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ. |
|---|---|---|
| (ಅ) | ಮಂಗಳೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಗೆ ಬರುವ ಉಳ್ಳಾಲ ನಗರಸಭೆ, ಸೋಮೇಶ್ವರ ಪಟ್ಟಣ ಪಂಚಾಯತಿ ಗಳಲ್ಲಿ ಮತ್ತು ಕೋಟೆಕಾರ್ ಪಟ್ಟಣ ಪಂಚಾಯತಿಗಳಲ್ಲಿ ಸಿಬ್ಬಂದಿಗಳು ಹಾಗೂ ಮೂಲಭೂತ ಸೌಕರ್ಯಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ. |
| (ಆ) | ಹಾಗಿದ್ದಲ್ಲಿ, ಸಿಬ್ಬಂದಿಗಳ ನೇಮಕ ಮತ್ತು ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲು ಅನುದಾನ ಬಿಡುಗಡೆ ಮಾಡಲು ಕ್ರಮವಹಿಸಲಾಗುವುದೇ? (ವಿವರಗಳನ್ನು ಒದಗಿಸುವುದು) | ರಾಜ್ಯದ ನಗರ ಸ್ಥಳೀಯ ಸಂಸ್ಥೆಗಳಲ್ಲಿ ನೇರ ನೇಮಕಾತಿ ಅಡಿಯಲ್ಲಿ ಖಾಲಿ ಇರುವ ಗ್ರೂಪ್ 'ಬಿ' ವೃಂದದ 4 ಹುದ್ದೆಗಳು ಮತ್ತು ಗ್ರೂಪ್ 'ಸಿ' ವೃಂದದ 544 ಹುದ್ದೆಗಳನ್ನು ಒಳಗೊಂಡಂತೆ ಒಟ್ಟು 548 ಹುದ್ದೆಗಳನ್ನು ಭರ್ತಿ ಮಾಡಲು ಕರ್ನಾಟಕ ಲೋಕಸೇವಾ ಆಯೋಗದಲ್ಲಿ ನೇಮಕಾತಿ ಪ್ರಕ್ರಿಯೆಯಲ್ಲಿರುತ್ತದೆ.<br><br>ಮುಂದುವರೆದು, ಜಿಲ್ಲಾ ಮಟ್ಟದಲ್ಲಿ ಮುಂಬಡ್ತಿ ಖೋಟಾದಡಿಯಲ್ಲಿ ವಿವಿಧ "ಸಿ" ವೃಂದದ ಖಾಲಿ ಹುದ್ದೆಗೆ ಮುಂಬಡ್ತಿಗೆ ಸಂಬಂಧಿಸಿದಂತೆ ಪೌರಾಡಳಿತ ನಿರ್ದೇಶನಾಲಯದಿಂದ ಖಾಲಿ ಇರುವ ಹುದ್ದೆಗಳನ್ನು ನಿಯಮನುಸಾರ ಭರ್ತಿ ಮಾಡಲು ಜಿಲ್ಲಾಧಿಕಾರಿಗಳಿಗೆ ಸೂಚಿಸಲಾಗಿರುತ್ತದೆ. ಪತ್ರದ ಪ್ರತಿಯನ್ನು (ಅನುಬಂಧ- ಲಗತ್ತಿಸಿದೆ).<br><br>ನಗರದ/ ಪಟ್ಟಣದ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲು ಸರ್ಕಾರದಿಂದ ವಿವಿಧ ಯೋಜನೆಯಡಿ ಉಳ್ಳಾಲ ನಗರಸಭೆ, ಸೋಮೇಶ್ವರ ಪಟ್ಟಣ ಪಂಚಾಯಿತಿ ಮತ್ತು ಕೋಟೇಕಾರು ಪಟ್ಟಣ ಪಂಚಾಯಿತಿಗಳಿಗೆ ಅನುದಾನ ಹಂಚಿಕೆ ಮಾಡಿ ಬಿಡುಗಡೆಗೊಳಿಸಲಾಗಿದೆ.<br><br>2015-16ನೇ ಸಾಲಿನಿಂದ 2019-20ನೇ ಸಾಲಿನವರೆಗೆ 14ನೇ ಹಣಕಾಸು ಆಯೋಗದ ಅನುದಾನದಡಿ ಮತ್ತು 2020-21ನೇ ಸಾಲಿನ |

15ನೇ ಹಣಕಾಸು ಆಯೋಗದ ಅನುದಾನದಡಿ ಬಿಡುಗಡೆಗೊಳಿಸಿರುವ ಅನುದಾನದ ವಿವರಗಳು ಈ ಕೆಳಕಂಡಂತಿದೆ;

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ನ.ಸ್ಥ.ಸಂಸ್ಥೆ ಹೆಸರು | 14ನೇ ಹಣಕಾಸು ಆಯೋಗದ ಅನುದಾನ (2015-16 ರಿಂದ 2019-20) ಬಿಡುಗಡೆ | 15ನೇ ಹಣಕಾಸು ಆಯೋಗದ ಅನುದಾನ 2020-21 | |
|---|---|---|---|---|
| | | | ಹಂಚಿಕೆ | ಬಿಡುಗಡೆ |
| 1 | ಉಳ್ಳಾಲ ನಗರಸಭೆ | 877.88 | 238.00 | 119.00 |
| 2 | ಸೋಮೇಶ್ವರ ಪುರಸಭೆ | - | 120.00 | 60.00 |
| 3 | ಕೋಟೆಕಾರು ಪ.ಪಂ. | 353.29 | 92.00 | 46.00 |

2) ಎಸ್.ಎಫ್.ಸಿ ಮುಕ್ತನಿಧಿ ಅನುದಾನ ಮತ್ತು ಎಸ್.ಎಫ್.ಸಿ ಕುಡಿಯುವ ನೀರು ಅನುದಾನ:-

ಮಂಗಳೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಗೆ ಬರುವ ಉಳ್ಳಾಲ, ಸೋಮೇಶ್ವರ ಮತ್ತು ಕೋಟೆಕಾರ್ ಸ್ಥಳೀಯ ಸಂಸ್ಥೆಗಳಿಗೆ ಬಿಡುಗಡೆಯಾದ ಅನುದಾನದ ವಿವರಗಳು ಈ ಕೆಳಕಂಡಂತಿದೆ.

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ನ.ಸ್ಥ.ಸಂಸ್ಥೆ ಹೆಸರು | ಅವಧಿ | ಎಸ್.ಎಫ್.ಸಿ ಮುಕ್ತನಿಧಿ ಅನುದಾನ | | ಎಸ್.ಎಫ್.ಸಿ ಕುಡಿಯುವ ನೀರು | |
|---|---|---|---|---|---|---|
| | | | ಹಂಚಿಕೆ | ಬಿಡುಗಡೆ | ಹಂಚಿಕೆ | ಬಿಡುಗಡೆ |
| 1 | ಉಳ್ಳಾಲ ನಗರಸಭೆ | 2019-20 | 136.00 | 136.00 | 20.00 | 20.00 |
| | | 2020-21 | 50.23 | 31.05 | 2.50 | 2.50 |
| 2 | ಸೋಮೇಶ್ವರ ಪುರಸಭೆ | 2019-20 | 0 | 0 | 0 | 0 |
| | | 2020-21 | 26.01 | 16.08 | 2.50 | 2.50 |
| 3 | ಕೋಟೆಕಾರು ಪ.ಪಂ. | 2019-20 | 57.00 | 57.00 | 12.00 | 12.00 |
| | | 2020-21 | 20.93 | 12.95 | 2.50 | 2.50 |

3) ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ ಹಂತ-3 :-



# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : | 1196 |
| ಸದಸ್ಯರ ಹೆಸರು : | ಶ್ರೀ ರಾಜೀವ್ ಪಿ. (ಕುಡುಚಿ) |
| ಉತ್ತರಿಸಬೇಕಾದ ದಿನಾಂಕ : | 05-02-2021 |
| ಉತ್ತರಿಸುವವರು : | ಪೌರಾಡಳಿತ ಮತ್ತು ಸಕ್ಕರೆ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಲ್ಲಿ ಕುಡಚಿ ಮತಕ್ಷೇತ್ರದ ಕುಡಚಿ, ಹಾರೂಗೇರಿ ಮತ್ತು ಮುಗಳಖೋಡ ಪುರಸಭೆಯ ವ್ಯಾಪ್ತಿಯಲ್ಲಿ ಮನೆ, ವಾಣಿಜ್ಯ ಕಟ್ಟಡ ನಿರ್ಮಾಣ ಮಾಡಲು ಪುರಸಭೆಯಿಂದ ಎಷ್ಟು ಪರವಾನಿಗೆಯನ್ನು ನೀಡಲಾಗಿರುತ್ತದೆ. | ಕಳೆದ ಮೂರು ವರ್ಷಗಳಲ್ಲಿ ಕುಡಚಿ ಮತಕ್ಷೇತ್ರದ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಕಟ್ಟಡ ನಿರ್ಮಾಣ ಮಾಡಲು ಪರವಾನಿಗೆ ನೀಡಿರುವ ವಿವರಗಳು ಈ ಕೆಳಗಿನಂತಿದೆ.<br><br>ಪುರಸಭೆ, ಕುಡಚಿ –154<br>ಪುರಸಭೆ, ಹಾರೂಗೇರಿ – 15<br>ಪುರಸಭೆ, ಮುಗಳಖೋಡ –127 |
| ಆ) | ಹೊಸದಾಗಿ ಮನೆ/ವಾಣಿಜ್ಯ ಕಟ್ಟಡ ನಿರ್ಮಾಣಕ್ಕೆ ಪರವಾನಗಿ ಪಡೆಯಲು ಇರುವ ಮಾನದಂಡಗಳೇನು? (ಸಂಪೂರ್ಣ ವಿವರ ನೀಡುವುದು) | ಕರ್ನಾಟಕ ಪೌರಸಭೆಗಳ ಅಧಿನಿಯಮ, 1964 ರ ಸೆಕ್ಷನ್ 187 ಮತ್ತು ಕರ್ನಾಟಕ ಪೌರಸಭೆಗಳ ಮಾದರಿ ಕಟ್ಟಡ ಉಪವಿಧಿಗಳು –2017 ರನ್ವಯ ನಾಗರೀಕರು ನೋಂದಣಿಯಾದ ಆರ್ಕಿಟೆಕ್ಟ್ / ಇಂಜಿನಿಯರ್‌ಗಳಿಂದ ತಯಾರಿಸಲಾದ ಕಟ್ಟಡದ ನಕ್ಷೆ ಹಾಗೂ ಇತರೆ ಸೂಕ್ತ ದಾಖಲಾತಿಗಳೊಂದಿಗೆ ನಗರ ಸ್ಥಳೀಯ ಸಂಸ್ಥೆಗಳಿಗೆ ಅರ್ಜಿಯನ್ನು ಸಲ್ಲಿಸಬೇಕಾಗಿರುತ್ತದೆ.<br><br>ಯೋಜನಾ ಪ್ರಾಧಿಕಾರಗಳೆಂದು ಘೋಷಣೆಯಾಗದ ನಗರ ಸ್ಥಳೀಯ ಸಂಸ್ಥೆಗಳಲ್ಲಿ, ಕರ್ನಾಟಕ ಪೌರಸಭೆಗಳ ಅಧಿನಿಯಮ, 1964 ರ ಸೆಕ್ಷನ್ 387 ರನ್ವಯ ಹತ್ತಿರದ ಯೋಜನಾ ಪ್ರಾಧಿಕಾರದೊಂದಿಗೆ ಸಮಾಲೋಚಿಸಲು ತಿಳಿಸಲಾಗಿರುತ್ತದೆ. ಅದರಂತೆ ನಗರ ಸ್ಥಳೀಯ ಸಂಸ್ಥೆಗಳಿಂದ ನಿಯಮಾನುಸಾರ ಪರಿಶೀಲಿಸಿ ಕಟ್ಟಡ ಪರವಾನಿಗೆಯನ್ನು ನೀಡಲಾಗುತ್ತದೆ. |
| ಇ) | ಸದರಿ ಪುರಸಭೆಯ ವ್ಯಾಪ್ತಿಯಲ್ಲಿ ಪುರಸಭೆಯಿಂದ ಪರವಾನಗಿ ಪಡೆಯದೇ ಮನೆ/ವಾಣಿಜ್ಯ ಕಟ್ಟಡ ನಿರ್ಮಾಣ ಮಾಡುತ್ತಿರುವುದು, ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಯಾವ ಕ್ರಮ ಕೈಗೊಳ್ಳಲಾಗಿದೆ? (ಸಂಪೂರ್ಣ ವಿವರ ಮಾಡುವುದು) | ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br>ಕರ್ನಾಟಕ ಪೌರಸಭೆಗಳ ಅಧಿನಿಯಮ 1964, ಕಲಂ 187 ರೀತ್ಯಾ ಅಕ್ರಮ ಕಟ್ಟಡಗಳನ್ನು ನಿರ್ಮಾಣ ಹಂತದಲ್ಲಿ ತಡೆಯಲು ಕ್ರಮವಹಿಸಲಾಗುವುದು. ಈಗಾಗಲೇ ನಿರ್ಮಾಣವಾಗಿರುವ ಅನಧಿಕೃತ ಕಟ್ಟಡಗಳಿಗೆ ಕರ್ನಾಟಕ ಪೌರಸಭಾ ಅಧಿನಿಯಮ 1964ರ ಕಲಂ 107 ರಂತೆ ತೆರಿಗೆಗೆ ಸಮನಾದ ಎರಡು ಪಟ್ಟು ದಂಡವನ್ನು ಸಕ್ರಮಾತಿಯವರೆಗೆ ವಸೂಲು ಮಾಡಲಾಗುವುದು. |

ಸಂಖ್ಯೆ: ನಅಇ 11 ಜೆಇಎಲ್ 2021

(ಎನ್.ನಾಗರಾಜ್ ಎಂಟಿಬಿ)
ಪೌರಾಡಳಿತ ಮತ್ತು ಸಕ್ಕರೆ ಸಚಿವರು



# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1073 |
| ಸದಸ್ಯರ ಹೆಸರು | ಶ್ರೀ ಪ್ರಿಯಾಂಕ್ ಎಂ. ಖರ್ಗೆ |
| ಉತ್ತರಿಸಬೇಕಾದ ದಿನಾಂಕ | 05.02.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಲಬುರಗಿ ಜಿಲ್ಲೆಯಲ್ಲಿ ಜಿಲ್ಲಾ ಖನಿಜ ಪ್ರತಿಷ್ಠಾನ (ಡಿ.ಎಂ.ಎಫ್) ಅಡಿಯಲ್ಲಿ ಈ ಹಿಂದೆ ಪ್ರತ್ಯಕ್ಷ ಗಣಿ ಬಾಧಿತ ಪ್ರದೇಶಕ್ಕೆ ಶೇ 60 ಮತ್ತು ಪರೋಕ್ಷ ಗಣಿ ಬಾಧಿತ ಪ್ರದೇಶಕ್ಕೆ ಶೇ 40ನ್ನು ಅನುದಾನವನ್ನು ಮೀಸಲಿಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಜಿಲ್ಲಾ ಖನಿಜ ಪ್ರತಿಷ್ಠಾನ ಟ್ರಸ್ಟ್ ನಿಯಮಗಳು, 2016ರ ನಿಯಮ 18 ರಂತೆ ಜಿಲ್ಲಾ ಖನಿಜ ನಿಧಿಯ ಅನುದಾನ ಹಂಚಿಕೆ ಅನ್ವಯವಾಗುವುದು ಆದ್ಯತೆ ವಲಯ (High Priority) ಮತ್ತು ಇತರೆ ವಲಯ (Other Priority) ಗಳಿಗೆ ಸಂಬಂಧಿಸಿದ್ದಾಗಿರುತ್ತದೆ. ಈ ಅನುಪಾತವು ಶೇಕಡ 60 ಮತ್ತು ಶೇಕಡ 40 ಇದ್ದು ಇದರಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.<br>ಕೇಂದ್ರ ಸರ್ಕಾರವು ಪ್ರಧಾನ ಮಂತ್ರಿ ಖನಿಜ ಕ್ಷೇತ್ರ ಕಲ್ಯಾಣ ಯೋಜನೆ (PMKKKY) ಪರಿಷ್ಕೃತ ಮಾರ್ಗಸೂಚಿಯನ್ನು ರೂಪಿಸಿದ್ದು, ಅದರನ್ವಯ ಗಣಿ ಪ್ರದೇಶದಿಂದ 10 ಕಿ.ಮೀ. ಅಥವಾ ರಾಜ್ಯ ಸರ್ಕಾರದಿಂದ ಅಧಿಸೂಚಿತ ಪ್ರದೇಶವನ್ನು ಪ್ರತ್ಯಕ್ಷ ಗಣಿ ಬಾಧಿತ ಪ್ರದೇಶವೆಂದು ಗುರುತಿಸಬಹುದಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಹಾಗೂ ವಿವಿಧ ಜಿಲ್ಲೆಗಳಿಂದ ಈ ಬಗ್ಗೆ ಅಭಿಪ್ರಾಯವನ್ನು ಪಡೆದು ದಿನಾಂಕ 30.11.2019 ರಂದು ಜಿಲ್ಲಾ ಖನಿಜ ಪ್ರತಿಷ್ಠಾನ ಟ್ರಸ್ಟಿನ ರಾಜ್ಯ ಮಟ್ಟದ ಉನ್ನತಾಧಿಕಾರಸ್ಥ ಸಮಿತಿ ಸಭೆಯಲ್ಲಿ ಸುಧೀರ್ಘವಾಗಿ ಚರ್ಚಿಸಿ, ಕೆಲವು ಜಿಲ್ಲೆಗಳಲ್ಲಿ ಕಡಿಮೆ ಹಾಗೂ ಕೆಲವು ಜಿಲ್ಲೆಗಳಲ್ಲಿ ಹೆಚ್ಚು ಜಿಲ್ಲಾ ಖನಿಜ ಪ್ರತಿಷ್ಠಾನ ಟ್ರಸ್ಟ್ ವಂತಿಗೆ ಸಂಗ್ರಹವಾಗುತ್ತಿರುವುದನ್ನು ಪರಿಗಣನೆಗೆ ತೆಗೆದುಕೊಂಡು ಜಿಲ್ಲೆಯ ಸರ್ವತೋಮುಖ ಅಭಿವೃದ್ಧಿಗೆ ಪ್ರತ್ಯಕ್ಷ ಹಾಗೂ ಪರೋಕ್ಷ ಗಣಿ ಬಾಧಿತ ಪ್ರದೇಶಗಳ ಪರಿಮಿತಿ ಹಾಗೂ ಶೇಕಡಾವಾರು ವಂತಿಗೆಯನ್ನು PMKKKY ಯೋಜನೆಗಳಿಗೆ ಉಪಯೋಗಿಸಲು ಪರಿಗಣಿಸಿ, ರಾಜ್ಯ ಸರ್ಕಾರವು, ಅಧಿಸೂಚನೆ ಸಂಖ್ಯೆ CI 348 MMN 2019, ದಿನಾಂಕ 20.01.2020 ರಂತೆ ಅಧಿಸೂಚನೆ ಜಾರಿಗೊಳಿಸಿದೆ. (ಪ್ರತಿ ಲಗತ್ತಿಸಿದೆ) |

--2

| | | |
|---|---|---|
| ಆ) | ಹಾಗಿದ್ದಲ್ಲಿ, 2020-21ನೇ ಸಾಲಿನಲ್ಲಿ ಪರೋಕ್ಷ ಗಣಿ ಬಾಧಿತ ಪ್ರದೇಶಕ್ಕೆ ಶೇಕಡ 60 ಪ್ರತ್ಯಕ್ಷ ಗಣಿ ಬಾಧಿತ ಪ್ರದೇಶಕ್ಕೆ ಶೇಕಡ 40 ರಷ್ಟು ಅನುದಾನ ನೀಡಿರುವುದನ್ನು ಸರ್ಕಾರ ಗಮನಿಸಿದೆಯೇ; | ಹೌದು. |
| ಇ) | ನೇರ ಗಣಿ ಬಾಧಿತ ಪ್ರದೇಶದ (ಪ್ರತ್ಯಕ್ಷ ಗಣಿ ಬಾಧಿತ ಪ್ರದೇಶ) ಜನರಿಗೆ ನೇರ ಪರಿಣಾಮ ಬೀರುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದ್ದರೂ ಕೂಡ ಯಾವ ಕಾರಣಕ್ಕೆ ಪರೋಕ್ಷ ಗಣಿ ಬಾಧಿತ ಪ್ರದೇಶಕ್ಕೆ ಶೇಕಡ 60 ರಷ್ಟು ಮತ್ತು ಪ್ರತ್ಯಕ್ಷ ಗಣಿ ಬಾಧಿತ ಪ್ರದೇಶಕ್ಕೆ ಶೇಕಡ 40 ರಷ್ಟು ಅನುದಾನ ನೀಡಲು ಸೂಚಿಸಲಾಗಿದೆಯೇ? (ಸಂಪೂರ್ಣ ವಿವರ ನೀಡುವುದು) | ನೇರ ಗಣಿ ಬಾಧಿತ ಪ್ರದೇಶವು (ಪ್ರತ್ಯಕ್ಷ ಗಣಿ ಬಾಧಿತ ಪ್ರದೇಶ) ಮಂಜೂರಾದ ಗಣಿ ಗುತ್ತಿಗೆ ಪ್ರದೇಶದ ವ್ಯಾಪ್ತಿಯ 10 ಕಿ.ಮೀ. ಮತ್ತು ಕಲ್ಲುಗಣಿ ಗುತ್ತಿಗೆ ಪ್ರದೇಶ ವ್ಯಾಪ್ತಿಯ 5 ಕಿ.ಮೀ. ಗೆ ಮಾತ್ರ ಸೀಮಿತವಾಗಿರುತ್ತದೆ. ಆದ್ದರಿಂದ ಸದರಿ ಪ್ರದೇಶದಲ್ಲಿ ಶೇ.40 ರಷ್ಟು ಮೊತ್ತವನ್ನು ನೇರ ಗಣಿ ಬಾಧಿತ ಪ್ರದೇಶದ ಅಭಿವೃದ್ಧಿಗೆ ಉಪಯೋಗಿಸಲಾಗುತ್ತದೆ.<br><br>10 ಕಿ.ಮೀ ಮತ್ತು 5 ಕಿ.ಮೀ ವ್ಯಾಪ್ತಿ ಬಿಟ್ಟು ಉಳಿದ ಎಲ್ಲಾ ಪ್ರದೇಶವು (ವಿಸ್ತೀರ್ಣ ಹೆಚ್ಚಾಗಿದ್ದು) ಪರೋಕ್ಷ ಗಣಿ ಬಾಧಿತ ಪ್ರದೇಶವಾಗಿದ್ದು, ಈ ಪ್ರದೇಶಕ್ಕೆ ಶೇ. 60 ರಷ್ಟು ಮೊತ್ತ ವಿನಿಯೋಗಿಸಲು ಕ್ರಮ ವಹಿಸಲಾಗುತ್ತಿದೆ. |

ಸಂಖ್ಯೆ ಸಿಐ 55 ಎಂಎಂಎನ್ 2021

(ಮುರುಗೇಶ್ ಆರ್. ನಿರಾಣಿ)
ಗಣಿ ಮತ್ತು ಭೂವಿಜ್ಞಾನ ಸಚಿವರು.



# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1039

ಸದಸ್ಯರ ಹೆಸರು : ಶ್ರೀ ಕರುಣಾಕರ ರೆಡ್ಡಿ ಜಿ, (ಹರಪನಹಳ್ಳಿ)

ಉತ್ತರಿಸುವ ದಿನಾಂಕ : 05/02/2021

ಉತ್ತರಿಸುವ ಸಚಿವರು : ಮಾನ್ಯ ಪೌರಾಡಳಿತ ಮತ್ತು ಸಕ್ಕರೆ ಸಚಿವರು

| ಕ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಹರಪನಹಳ್ಳಿ ವಿಧಾನಸಭಾ ಮತಕ್ಷೇತ್ರ ಹರಪನಹಳ್ಳಿ ಪುರಸಭೆಯನ್ನು ನಗರಸಭೆಯನ್ನಾಗಿ ಮೇಲ್ದರ್ಜೆಗೇರಿಸುವ ಪ್ರಸ್ತಾವನೆಯನ್ನು 2016ನೇ ಸಾಲಿನಲ್ಲಿಯೇ ಸಲ್ಲಿಸಲಾಗಿದ್ದು, ಇದುವರೆಗೂ ಯಾವುದೇ ಕ್ರಮ ಕೈಗೊಳ್ಳದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕರ್ನಾಟಕ ಪುರಸಭೆ ಕಾಯ್ದೆ 1964ರ ಕಲಂ 3 ರನ್ವಯ ನಗರಸಭೆಯನ್ನಾಗಿ ಮೇಲ್ದರ್ಜೆಗೇರಿಸಲು ಜನಸಂಖ್ಯೆಯು 50,000ಕ್ಕಿಂತ ಕಡಿಮೆ ಇಲ್ಲದ ಹಾಗೂ 3 ಲಕ್ಷಕ್ಕಿಂತ ಹೆಚ್ಚಿಲ್ಲದಂತಹ ಮಾನದಂಡವನ್ನು ನಿಗದಿಪಡಿಸಲಾಗಿದೆ.<br><br>2011ರ ಜನಗಣತಿಯನುಸಾರ ಹರಪನಹಳ್ಳಿ ಪುರಸಭೆಯ ಜನಸಂಖ್ಯೆಯು 47,039 ಇರುತ್ತದೆ. ಈ ಹಿನ್ನೆಲೆಯಲ್ಲಿ ಹರಪನಹಳ್ಳಿ ಪುರಸಭೆಯನ್ನು ನಗರಸಭೆಯನ್ನಾಗಿ ಮೇಲ್ದರ್ಜೆಗೇರಿಸಲು ಅವಕಾಶವಿರುವುದಿಲ್ಲ. |
| (ಆ) | ಬಂದಿದಲ್ಲಿ, ಹರಪನಹಳ್ಳಿ ಪುರಸಭೆಯನ್ನು ನಗರಸಭೆಯನ್ನಾಗಿ ಯಾವಾಗ ಮೇಲ್ದರ್ಜೆಗೇರಿಸಲಾಗುವುದು (ಸಂಪೂರ್ಣ ವಿವರ ನೀಡುವುದು) | ಹರಪನಹಳ್ಳಿ ಪುರಸಭೆಯನ್ನು ನಗರಸಭೆಯನ್ನಾಗಿ ಮೇಲ್ದರ್ಜೆಗೇರಿಸುವ ಕುರಿತು ಸೂಕ್ತ ಹಾಗೂ ಅರ್ಹ ಪ್ರಸ್ತಾವನೆ ಸ್ವೀಕೃತವಾದಲ್ಲಿ ನಿಯಮಾನುಸಾರ ಕ್ರಮವಹಿಸಲಾಗುವುದು. |

ಸಂಖ್ಯೆ: ನಅಇ 19 ಎಲ್‌ಎಕ್ಯೂ 2021

(ಎನ್. ನಾಗರಾಜು ಎಂ.ಟಿ.ಬಿ.)
ಪೌರಾಡಳಿತ ಮತ್ತು ಸಕ್ಕರೆ ಸಚಿವರು

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 391
(ಇಂಧನ ಇಲಾಖೆಯಿಂದ ವರ್ಗಾವಣೆಗೊಂಡ ಪ್ರಶ್ನೆ)
2. ಸದಸ್ಯರ ಹೆಸರು : ಡಾ॥ ರಂಗನಾಥ್ ಹೆಚ್.ಡಿ. (ಕುಣಿಗಲ್)
3. ಉತ್ತರಿಸುವ ದಿನಾಂಕ : 05.02.2021
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | 2020-21ನೇ ಸಾಲಿನ ಆಯವ್ಯಯದಲ್ಲಿ ರಾಮನಗರ ತಾಲ್ಲೂಕಿನ ಹಾರೋಹಳ್ಳಿ 5ನೇ ಹಂತದ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳ (KIADB) ಕೈಗಾರಿಕಾ ಪ್ರದೇಶದಲ್ಲಿ "ಎಲೆಕ್ಟ್ರಿಕ್ ವೆಹಿಕಲ್ಸ್ ಮತ್ತು ಎನರ್ಜಿ ಸ್ಟೋರೇಜ್ ಮ್ಯಾನುಫ್ಯಾಕ್ಚರಿಂಗ್ ಕ್ಲಸ್ಟರ್‌ನ್ನು ಸ್ಥಾಪಿಸಲಾಗಿದೆಯೇ; | 2020-21ನೇ ಸಾಲಿನ ಆಯವ್ಯಯದಲ್ಲಿ ಘೋಷಣೆಯಂತೆ ಹಾರೋಹಳ್ಳಿ ಮತ್ತು ಬಿಡದಿ ಕೈಗಾರಿಕಾ ಪ್ರದೇಶಗಳ ಮಧ್ಯಭಾಗದಲ್ಲಿ ಬರುವ ರಾಮನಗರ ಜಿಲ್ಲೆ ಮತ್ತು ತಾಲ್ಲೂಕು, ಕಂಚುಗಾರನಹಳ್ಳಿ ಮತ್ತು ಕಂಚುಗಾರನಹಳ್ಳಿ ಕಾವಲ್ ಹಾಗೂ ಕನಕಪುರ ತಾಲ್ಲೂಕು, ಮುಡೇನಹಳ್ಳಿ ಮತ್ತು ಯರೇಹಳ್ಳಿ ಗ್ರಾಮಗಳ ಒಟ್ಟು 912-12½ ಎಕರೆ ಜಮೀನನ್ನು ಹಾರೋಹಳ್ಳಿ 5ನೇ ಹಂತದ ಕೈಗಾರಿಕಾ ಪ್ರದೇಶಕ್ಕಾಗಿ ಭೂಸ್ವಾಧೀನಪಡಿಸಲು ದಿನಾಂಕ: 09.07.2020ರಂದು ಅಂತಿಮ ಅಧಿಸೂಚನೆ ಹೊರಡಿಸಲಾಗಿದೆ.<br><br>ದಿನಾಂಕ: 22.12.2020ರಂದು ನಡೆದ ಮಂಡಳ ಸಭೆಯಲ್ಲಿ ಜಿಲ್ಲಾಧಿಕಾರಿ, ರಾಮನಗರ ಜಿಲ್ಲೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ: 04.11.2020ರಂದು ನಡೆದ ಭೂದರ ನಿರ್ಧರಣಾ ಸಲಹಾ ಸಮಿತಿ ಸಭೆಯು ಶಿಫಾರಸ್ಸು ಮಾಡಿರುವ ದರವನ್ನು ಅನುಮೋದಿಸಲಾಗಿದೆ.<br><br>ಭೂಪರಿಹಾರ ಪಾವತಿ ಕಾರ್ಯ ಪೂರ್ಣಗೊಂಡ ನಂತರ ಉದ್ದೇಶಿತ ಯೋಜನೆಯನ್ನು ಜಾರಿಗೆ ತರಲಾಗುವುದು. |
| (ಆ) | ಸ್ಥಾಪಿಸದೇ ಇದ್ದಲ್ಲಿ, ಯಾವಾಗ ಸ್ಥಾಪಿಸಲಾಗುವುದು ಹಾಗೂ ಸ್ಥಾಪಿಸುವಲ್ಲಿ ಆಗುತ್ತಿರುವ ವಿಳಂಬಕ್ಕೆ ಕಾರಣವೇನು? | |

ಸಂಖ್ಯೆ: ಸಿಐ 27 ಐಎಪಿ (ಇ) 2021

(ಜಗದೀಶ ಶೆಟ್ಟರ)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

ಕರ್ನಾಟಕ ವಿಧಾನ ಸಭೆ

ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ಅಭಯ ಪಾಟೀಲ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1109

ಉತ್ತರಿಸಬೇಕಾದ ದಿನಾಂಕ : 05.02.2021

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ರೈತ ಬಾಂಧವರಿಗೆ ನೀಡಿರುವಂತೆ ನೇಕಾರ ಬಾಂಧವರಿಗೂ ಸಹಕಾರ ಸಂಘಗಳ ಮೂಲಕ ಸಾಲ ಮನ್ನಾ ಸೌಲಭ್ಯವನ್ನು ಕಲ್ಪಿಸುವ ಯೋಜನೆ ಸರ್ಕಾರದ ಮುಂದೆ ಇದೆಯೇ; ಇದ್ದಲ್ಲಿ, ಅದಕ್ಕಿರುವ ಮಾನದಂಡಗಳು ಹಾಗೂ ಅರ್ಹತೆಗಳನ್ನು ತಿಳಿಸುವುದು; | ರೈತ ಬಾಂಧವರಿಗೆ ನೀಡಿರುವಂತೆ ನೇಕಾರ ಬಾಂಧವರಿಗೂ ಸಹಕಾರ ಸಂಘಗಳ ಮೂಲಕ ಸಾಲ ಮನ್ನಾ ಸೌಲಭ್ಯವನ್ನು ಕಲ್ಪಿಸುವ ಯೋಜನೆ ಸರ್ಕಾರದ ಮುಂದಿದ್ದು, ಅದಕ್ಕಿರುವ ಮಾನದಂಡಗಳು ಹಾಗೂ ಅರ್ಹತೆಗಳು ಈ ಕೆಳಂಡಂತಿದೆ.<br><br>• ಸರ್ಕಾರದ ಆದೇಶ ಸಂಖ್ಯೆ: ವಾಕೈ 15 ಜಕೈಯೋ 2019, ದಿನಾಂಕ:02–08–2019ರನ್ವಯ ರಾಜ್ಯದ ನೇಕಾರರು ನೇಕಾರಿಕೆ ಉದ್ದೇಶಕ್ಕಾಗಿ ನೇಕಾರರ ಸಹಕಾರ ಸಂಘಗಳು, ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು, ಪಟ್ಟಣ ಸಹಕಾರಿ ಬ್ಯಾಂಕುಗಳು, ವಿವಿಧೋದ್ದೇಶ ಸಹಕಾರ ಸಂಘಗಳು, ಕೈಗಾರಿಕಾ ಸಹಕಾರ ಬ್ಯಾಂಕುಗಳು, ಕೃಷಿ ಪತ್ತಿನ ಸಹಕಾರ ಸಂಘಗಳು, ಸೌಹಾರ್ದ ಸಹಕಾರಿ ಸಂಘ, ಸೌಹಾರ್ದ ಸಹಕಾರಿ ಬ್ಯಾಂಕ್, ಕೃಷಿಯೇತರ ಪತ್ತಿನ ಸಹಕಾರ ಸಂಘ ಹಾಗೂ ಇತರೆ ಸಹಕಾರಿ ಬ್ಯಾಂಕುಗಳಿಂದ ದಿನಾಂಕ:26–07–2012 ರಿಂದ ಸಾಲ ಪಡೆದು ದಿನಾಂಕ:31–03–2019ಕ್ಕೆ ಹೊಂದಿದ ಹೊರಬಾಕಿಯಲ್ಲಿ ರೂ.1.00 ಲಕ್ಷಗಳವರೆಗಿನ (ಅಸಲು ಮತ್ತು ಬಡ್ಡಿ ಸೇರಿ) ಸಾಲ ಮನ್ನಾ ಮಾಡಲು ಕೆಲವು ಷರತ್ತುಗಳಿಗೊಳಪಟ್ಟು ಆದೇಶಿಸಲಾಗಿರುತ್ತದೆ. ಆದೇಶದ ಪ್ರತಿ ಅನುಬಂಧ–01 ರಲ್ಲಿ ನೀಡಲಾಗಿದೆ.<br><br>• ಸರ್ಕಾರದ ಆದೇಶ ಸಂಖ್ಯೆ:ವಾಕೈ 46 ಜಕೈಯೋ 2020, ದಿನಾಂಕ:16–05–2020ರನ್ವಯ ರಾಜ್ಯದ ನೇಕಾರರು ನೇಕಾರಿಕೆ ಉದ್ದೇಶಕ್ಕಾಗಿ ನೇಕಾರರ ಸಹಕಾರ ಸಂಘಗಳು, ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು, ಪಟ್ಟಣ ಸಹಕಾರಿ ಬ್ಯಾಂಕುಗಳು, ವಿವಿಧೋದ್ದೇಶ ಸಹಕಾರ ಸಂಘ, ಸೌಹಾರ್ದ ಸಹಕಾರಿ ಬ್ಯಾಂಕ್, ಕೃಷಿಯೇತರ ಪತ್ತಿನ ಸಹಕಾರ ಸಂಘ ಹಾಗೂ ಇತರೆ ಸಹಕಾರಿ ಬ್ಯಾಂಕುಗಳಿಂದ ಸಾಲ ಪಡೆದು ದಿನಾಂಕ:01–01–2019 ರಿಂದ ದಿ:31–03–2019ರ ಅವಧಿಯೊಳಗೆ ಪಾವತಿಸಿದಂತಹ ನೇಕಾರರಿಗೂ ಸಹ ರೂ.1.00 ಲಕ್ಷಗಳವರೆಗಿನ (ಅಸಲು ಮತ್ತು ಬಡ್ಡಿ ಸೇರಿ) ಸಾಲ ಮನ್ನಾ ಯೋಜನೆಯನ್ನು ವಿಸ್ತರಿಸಿ ಅವರುಗಳು ಪಾವತಿ ಮಾಡಿದಂತಹ ಸಾಲದ ಮೊತ್ತವನ್ನು ಸರ್ಕಾರಕ್ಕೆ ಮರುಪಾವತಿಸಲು ಕೆಲವು ಷರತ್ತುಗಳಿಗೊಳಪಟ್ಟು ಆದೇಶಿಸಲಾಗಿರುತ್ತದೆ. ಆದೇಶದ ಪ್ರತಿ ಅನುಬಂಧ–02 ರಲ್ಲಿ ನೀಡಲಾಗಿದೆ. |

| | | |
|---|---|---|
| ಆ | ಯೋಜನೆಗಳ ಸೌಲಭ್ಯದಿಂದ ಬೆಳಗಾವಿ ದಕ್ಷಿಣ ಮತಕ್ಷೇತ್ರದ ನೇಕಾರರು ವಂಚಿತರಾಗಿದ್ದು, ಅದನ್ನು ಸರಿಪಡಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; ಸುಮಾರು 5 ವರ್ಷಗಳಿಂದ ನೇಕಾರರಿಗೆ ಬಡ್ಡಿ ಹಣ ಮನರ್ ಪಾವತಿಯಗದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ವಿವರ ನೀಡುವುದು | ಬೆಳಗಾವಿ ದಕ್ಷಿಣ ಮತಕ್ಷೇತ್ರದ ನೇಕಾರರಿಗೆ ಸಾಲ ಮನ್ನಾ ಯೋಜನೆಯಡಿ ಸೌಲಭ್ಯವನ್ನು ಒದಗಿಸಲಾಗಿದ್ದು, ಸಾಲ ಮನ್ನಾ ಸೌಲಭ್ಯದ ವಿವರ ಈ ಕೆಳಕಂಡಂತಿದೆ.<br>(ರೂ.ಲಕ್ಷಗಳಲ್ಲಿ)<br>ವರ್ಷ / ನೇಕಾರರ ಸಂಖ್ಯೆ / ಸಾಲ ಮನ್ನಾ ಮೊತ್ತ<br>2018-19 / 436 / 185.80<br>2019-20 / 1010 / 627.75<br>2020-21 (ದಿ:01.02.2021 ಕ್ಕೆ ಇದ್ದಂತೆ) / 289 / 116.35 (ರೂ.21.12 ಲಕ್ಷಗಳನ್ನು ಈಗಾಗಲೇ ಬಿಡುಗಡೆ ಮಾಡಲಾಗಿರುತ್ತದೆ.)<br>ಶೇ.1 ಮತ್ತು ಶೇ.3ರ ಬಡ್ಡಿ ಸಹಾಯಧನ ಯೋಜನೆಯಡಿ ಬಡ್ಡಿ ಸಹಾಯಧನವನ್ನು 2015-16 ಮತ್ತು 2016-17ನೇ ಸಾಲಿಗೆ ಬೆಳಗಾವಿ ದಕ್ಷಿಣ ಕ್ಷೇತ್ರದ 1517 ನೇಕಾರಿಗೆ ಒಟ್ಟು ರೂ.36.81 ಲಕ್ಷ ಬಡ್ಡಿ ಸಹಾಯಧನ ಒದಗಿಸಲಾಗಿರುತ್ತದೆ. |
| ಇ) | ಬೆಳಗಾವಿ ಜಿಲ್ಲೆಯ ಎಷ್ಟು ಜನ ರೈತರು ರಾಷ್ಟ್ರೀಕೃತ ಬ್ಯಾಂಕ್ ಹಾಗೂ ಸಹಕಾರಿ ಸಂಸ್ಥೆಗಳಿಂದ ಬೆಳೆ ಸಾಲವನ್ನು ಪಡೆದಿದ್ದಾರೆ? (ಬ್ಯಾಂಕುವಾರು, ಸಹಕಾರಿ ಸಂಸ್ಥೆವಾರು, ಮತ ಕ್ಷೇತ್ರವಾರು ಮಾಹಿತಿ ನೀಡುವುದು) | **ಸಹಕಾರ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ಬೆಳಗಾವಿ ಜಿಲ್ಲೆಯಲ್ಲಿ ಬೆಳಗಾವಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್, ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳ ಮೂಲಕ 2019-20ನೇ ಸಾಲಿನಲ್ಲಿ 3,80,223 ರೈತರು ರೂ. 1,89,369.69 ಲಕ್ಷ ಹಾಗೂ 2020-21 ನೇ ಸಾಲಿನಲ್ಲಿ ದಿ:31-01-2021 ರವರೆಗೆ 3,03,723 ರೈತರು ರೂ. 1,56,609.31 ಲಕ್ಷ ಬೆಳೆ ಸಾಲ ಪಡೆದಿರುತ್ತಾರೆ. ವಿವರ ಅನುಬಂಧ-3ರಲ್ಲಿ ನೀಡಲಾಗಿದೆ.<br>**ವಾಣಿಜ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ರಾಷ್ಟ್ರೀಕೃತ ಬ್ಯಾಂಕ್ ಹಾಗೂ ಸಹಕಾರಿ ಸಂಸ್ಥೆಗಳಿಂದ ದಿ:30.09.2020 ರ ಅಂತ್ಯಕ್ಕೆ ಬೆಳಗಾವಿ ಜಿಲ್ಲೆಯ 6,79,245 ರೈತರು ರೂ.6,24,018 ಲಕ್ಷಗಳ ಬೆಳೆ ಸಾಲವನ್ನು ಪಡೆದಿದ್ದಾರೆ.<br>ಬ್ಯಾಂಕುವಾರು, ಸಹಕಾರಿ ಸಂಸ್ಥೆವಾರು ವಿವರಗಳನ್ನು ಅನುಬಂಧ-4 ರಲ್ಲಿ ನೀಡಲಾಗಿದೆ. ಮತ್ತು ತಾಲ್ಲೂಕುವಾರು ವಿವರಗಳನ್ನು ಅನುಬಂಧ-5 ರಲ್ಲಿ ನೀಡಲಾಗಿದೆ. |

**ಸಂಖ್ಯೆ: ಸಿಒ 31 ಸಿಎಲ್ಎಸ್ 2021**

(ಎಸ್.ಟಿ. ಸೋಮಶೇಖರ್)
ಸಹಕಾರ ಸಚಿವರು

ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1067
2. ಸದಸ್ಯರ ಹೆಸರು : ಶ್ರೀ ಶ್ರೀನಿವಾಸ್ ಎಂ.
3. ಉತ್ತರಿಸಬೇಕಾದ ದಿನಾಂಕ : 05.02.2021
4. ಉತ್ತರಿಸುವ ಸಚಿವರು : ಪೌರಾಡಳಿತ ಮತ್ತು ಸಕ್ಕರೆ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಮಂಡ್ಯ ಮೈಷುಗರ್ ಸಕ್ಕರೆ ಕಾರ್ಖಾನೆ ಕಬ್ಬು ಅರೆಯದೆ ಸ್ಥಗಿತಗೊಂಡಿದ್ದು, ಅದನ್ನು ಪುನಾರಂಭಿಸುವ ಬಗ್ಗೆ ಸರ್ಕಾರದ ಕ್ರಮವೇನು; ( ವಿವರ ನೀಡುವುದು) | ಮೈಸೂರು ಸಕ್ಕರೆ ಕಂಪನಿಯು 2015-16, 2016-17 ಹಾಗೂ 2019-20 ನೇ ಸಾಲಿನಲ್ಲಿ ದುಡಿಯುವ ಬಂಡವಾಳದ ಕೊರತೆಯಿಂದಾಗಿ ಕಬ್ಬು ಅರೆಯುವ ಕಾರ್ಯವನ್ನು ಸ್ಥಗಿತಗೊಳಿಸಿರುತ್ತದೆ ಈ ಕಾರ್ಖಾನೆಯನ್ನು ಪುನಶ್ಚೇತನಗೊಳಿಸುವ ಸಂಬಂಧ ಸದರಿ ಕಾರ್ಖಾನೆಯನ್ನು 2021-22ನೇ ಹಂಗಾಮಿನಿಂದ 40 ವರ್ಷಗಳ ಅವಧಿಗೆ LROT(Lease Rehabilitate Operate Transfer) ಆಧಾರದ ಮೇಲೆ ಇದ್ದಲ್ಲಿ ಇದ್ದಂತೆಯೇ ((As is where is Basis) ಖಾಸಗಿಯವರಿಗೆ ಗುತ್ತಿಗೆ ನೀಡಲು ಸರ್ಕಾರದ ಆದೇಶ ಸಂಖ್ಯೆ ಸಿಐ 05 ಸಿಓಎಫ್ 2020 ದಿನಾಂಕ 18-11-2020ರಲ್ಲಿ ಅನುಮತಿಯನ್ನು ನೀಡಲಾಗಿದೆ. |
| (ಆ) | ಅವು ಯಾವ ಹಂತದಲ್ಲಿದೆ; (ಸಂಪೂರ್ಣ ಮಾಹಿತಿ ನೀಡುವುದು) | ಸದರಿ ಕಾರ್ಖಾನೆಯನ್ನು ಖಾಸಗಿಯವರಿಗೆ ಗುತ್ತಿಗೆ ಸಂಬಂಧ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮಗಳು 2000ರನ್ವಯ ಟೆಂಡರ್ ಕರೆಯುವ ಸಂಬಂದ ಟೆಂಡರ್ ಡಾಕ್ಯುಮೆಂಟ್ ಮತ್ತು ಒಡಂಬಡಿಕೆ ಪತ್ರವನ್ನು ಸಿದ್ದಪಡಿಸಲು ಕ್ರಮವಹಿಸಲಾಗುತ್ತಿದೆ. |
| (ಇ) | ಮೈಷುಗರ್ ಸಕ್ಕರೆ ಕಾರ್ಖಾನೆಯನ್ನು ಯಾವಾಗ ಪ್ರಾರಂಭಿಸಲಾಗುವುದು? ( ವಿವರ ನೀಡುವುದು) | ಯಶಸ್ವಿ ಬಿಡ್ಡುದಾರರು ಸದರಿ ಕಾರ್ಖಾನೆಯಲ್ಲಿ 2021-22ನೇ ಸಾಲಿನಿಂದ ಕಬ್ಬು ನುರಿಸುವ ಹಂಗಾಮನ್ನು ಪ್ರಾರಂಭಿಸುವಂತೆ ಟೆಂಡರ್‌ನಲ್ಲಿ ಷರತ್ತು ವಿಧಿಸಲಾಗುತ್ತಿದ್ದು, ಅದರಂತೆ ಯಶಸ್ವಿ ಬಿಡ್ಡುದಾರರು 2021-22ನೇ ಹಂಗಾಮಿನಿಂದ ಸದರಿ ಕಬ್ಬು ನುರಿಸುವ ಕಾರ್ಯವನ್ನು ಪ್ರಾರಂಭಿಸುತ್ತಾರೆ. |

ಸಂಖ್ಯೆ: ಸಿಐ 36 ಸಿಓಎಫ್ 2021

N. Nagaraju

(ಎನ್. ನಾಗರಾಜು.ಎಂ.ಟಿ.ಬಿ.)
ಪೌರಾಡಳಿತ ಮತ್ತು ಸಕ್ಕರೆ ಸಚಿವರು.

# ಕರ್ನಾಟಕ ವಿಧಾನ ಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 452
2) ಸದಸ್ಯರ ಹೆಸರು : ಶ್ರೀ ಶ್ರೀನಿವಾಸ್ (ವಾಸು) ಎಸ್.ಆರ್. (ಗುಬ್ಬಿ)
3) ಉತ್ತರಿಸುವ ದಿನಾಂಕ: : 05-02-2021
4) ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಪೆಟ್ರೋಲ್ ಬೆಲೆ ದಿನದಿಂದ ದಿನಕ್ಕೆ ಏರಿಕೆಯಾಗುತ್ತಿರುವುದರಿಂದ ಕರ್ನಾಟಕ ರಾಜ್ಯದ ಬೊಕ್ಕಸಕ್ಕೆ ಬರುವ ಆದಾಯ ಎಷ್ಟು ಹೆಚ್ಚಾಗುತ್ತಿದೆ (ವಿವರ ನೀಡುವುದು); | ಪೆಟ್ರೋಲ್ ಉತ್ಪನ್ನಗಳಿಂದ ಏಪ್ರಿಲ್-2020 ರಿಂದ ಜನವರಿ-2021ರವರೆಗೆ ಸಂಗ್ರಹಿಸಲಾದ ತೆರಿಗೆ ವಿವರ ಈ ಕೆಳಕಂಡಂತೆ ಇರುತ್ತದೆ. |

| ತಿಂಗಳು | ತೆರಿಗೆ ಸಂಗ್ರಹಣೆ (ಕೋಟಿಗಳಲ್ಲಿ) |
|---|---|
| ಏಪ್ರಿಲ್-2020 | 1121.78 |
| ಮೇ-2020 | 540.77 |
| ಜೂನ್-2020 | 1020.59 |
| ಜುಲೈ-2020 | 1274.81 |
| ಆಗಸ್ಟ್-2020 | 1189.77 |
| ಸೆಪ್ಟೆಂಬರ್-2020 | 1301.50 |
| ಅಕ್ಟೋಬರ್-2020 | 1295.27 |
| ನವೆಂಬರ್-2020 | 1418.93 |
| ಡಿಸೆಂಬರ್-2020 | 1548.84 |
| ಜನವರಿ-2021 | 1657.47 |

ಲಾಕ್‌ಡೌನ್ ಕಾರಣದಿಂದ ಮೇ-2020 ರಿಂದ ಆಗಸ್ಟ್-2020ರವರೆಗೆ ತೆರಿಗೆ ಸಂಗ್ರಹಣೆಯು ಕುಂಠಿತಗೊಂಡಿತ್ತು ಮತ್ತು ತಿಂಗಳಿಂದ ತಿಂಗಳಿಗೆ ಏರುಪೇರಾಗಿತ್ತು. ಆದರೆ ಅಕ್ಟೋಬರ್-2020 ರಿಂದ ಪೆಟ್ರೋಲ್ ಉತ್ಪನ್ನಗಳ ಒಟ್ಟಾರೆ ಬಳಕೆಯು ತಿಂಗಳಿಂದ ತಿಂಗಳಿಗೆ ಅಲ್ಪ ಪ್ರಮಾಣದಲ್ಲಿ ಹೆಚ್ಚಾಗುತ್ತಿರುವುದರಿಂದ ಮತ್ತು ಮೂಲ ಬೆಲೆಯೂ ಹೆಚ್ಚಾಗುತ್ತಿರುವುದರಿಂದ ತೆರಿಗೆ ಸಂಗ್ರಹಣೆ ಹೆಚ್ಚಾಗಿರುತ್ತದೆ.

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಆ) | ಹಾಗಿದ್ದಲ್ಲಿ, ಬಂದ ಆದಾಯದಲ್ಲಿ ಯಾವ ಯಾವ ರೀತಿ ಖರ್ಚು ಮಾಡಲಾಗುತ್ತಿದೆ (ವಿವರ ನೀಡುವುದು)? | ಈ ಆದಾಯವು ತೆರಿಗೆ ಸ್ವೀಕೃತಿಯಾಗಿದ್ದು(Tax Receipts) ಇದನ್ನು ರಾಜ್ಯದ ವಿವಿಧ ಯೋಜನೆ/ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಖರ್ಚು ಮಾಡಲಾಗುತ್ತಿದೆ. ಈ ತೆರಿಗೆ ಸ್ವೀಕೃತಿಗಳನ್ನು ಪ್ರತ್ಯೇಕವಾಗಿ ಯಾವುದೇ ಒಂದು ಯೋಜನೆ/ಕಾರ್ಯಕ್ರಮಕ್ಕೆ ಖರ್ಚು ಮಾಡಲು ಬರುವುದಿಲ್ಲ. |

ಸಂಖ್ಯೆ: ಆಇ 10 ಸಿಎಸ್‌ಎಲ್ 2021

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ.

## ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ : 1152**

**ಸದಸ್ಯರ ಹೆಸರು : ಶ್ರೀ. ಖಾದರ್ ಯು.ಟಿ.(ಮಂಗಳೂರು)**

**ಉತ್ತರಿಸುವ ಸಚಿವರು : ಮಾನ್ಯ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು**

**ಉತ್ತರಿಸಬೇಕಾದ ದಿನಾಂಕ : 05.02.2021**

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ತೋಟಗಾರಿಕೆ ಇಲಾಖೆಯಿಂದ ರಾಜ್ಯದ ಜನರ ಕಲ್ಯಾಣಕ್ಕಾಗಿ ಹಮ್ಮಿಕೊಂಡಿರುವ ಕಾರ್ಯಕ್ರಮ ಗಳಾವುವು; (ಯೋಜನಾವಾರು ವಿವರಗಳನ್ನು ಒದಗಿಸುವುದು) | ಪ್ರಸಕ್ತ ಸಾಲಿನಲ್ಲಿ ತೋಟಗಾರಿಕೆ ಇಲಾಖೆಯಿಂದ ರಾಜ್ಯದ ಜನರ ಕಲ್ಯಾಣಕ್ಕಾಗಿ ಹಮ್ಮಿಕೊಂಡಿರುವ ಯೋಜನೆಗಳು ಹಾಗೂ ಕಾರ್ಯಕ್ರಮಗಳ ವಿವರವನ್ನು ಅನುಬಂಧ-1ರಲ್ಲಿ ಒದಗಿಸಿದೆ. |
| ಆ) | ಕಳೆದ ಎರಡು ವರ್ಷಗಳಿಂದ ವಿವಿಧ ಯೋಜನೆಗಳಡಿಯಲ್ಲಿ ಖರ್ಚು ಮಾಡಿರುವ ಹಣವೆಷ್ಟು; (ಜಿಲ್ಲಾವಾರು ವಿವರಗಳನ್ನು ಒದಗಿಸುವುದು) | ಕಳೆದ ಎರಡು ವರ್ಷಗಳಲ್ಲಿ ಅಂದರೆ 2018-19 ಹಾಗೂ 2019-20ನೇ ಸಾಲಿನಲ್ಲಿ ತೋಟಗಾರಿಕೆ ಇಲಾಖೆಯ ವಿವಿಧ ಯೋಜನೆಗಳಡಿಯಲ್ಲಿ ಒಟ್ಟಾರೆ ಅನುಕ್ರಮವಾಗಿ ರೂ.109603.28 ಲಕ್ಷಗಳು ಹಾಗೂ ರೂ. 84905.83 ಲಕ್ಷಗಳ ಅನುದಾನವನ್ನು ಖರ್ಚು ಮಾಡಲಾಗಿರುತ್ತದೆ. ಯೋಜನಾವಾರು ಮತ್ತು ಜಿಲ್ಲಾವಾರು ವಿವರವನ್ನು ಅನುಬಂಧ-2a & 2b ರಲ್ಲಿ ಒದಗಿಸಲಾಗಿದೆ. |

ಸಂಖ್ಯೆ: HORTI 63 HGM 2021

(ಆರ್.ಶಂಕರ್)
ತೋಟಗಾರಿಕೆ ಮತ್ತು ರೇಷ್ಮೆ ಸಚಿವರು

# ಕರ್ನಾಟಕ ವಿಧಾನ ಸಭೆ

ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ಹ್ಯಾರಿಸ್ ಎನ್.ಎ. (ಶಾಂತಿನಗರ)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1184

ಉತ್ತರಿಸಬೇಕಾದ ದಿನಾಂಕ : 05.02.2021

| ಕ್ರ. ಸಂ | ಪ್ರಶ್ನೆ | ಉತ್ತರ |
| --- | --- | --- |
| ಅ) | ರಾಜ್ಯದಲ್ಲಿರುವ ಗೃಹ ನಿರ್ಮಾಣ ಸಹಕಾರ ಸಂಘಗಳ ಕಾರ್ಯ ನಿರ್ವಹಣೆ ಹಾಗೂ ಲೋಪದೋಷಗಳ ಕುರಿತು ಇಲಾಖೆಗೆ ದೂರುಗಳು ಬಂದರೂ ಅವುಗಳನ್ನು ಸಕಾಲದಲ್ಲಿ ಇತ್ಯರ್ಥಗೊಳಿಸದೆ ಇರುವುದರಿಂದ ಸಂಘದ ಸದಸ್ಯರುಗಳಿಗೆ ಉಂಟಾಗುತ್ತಿರುವ ಅನ್ಯಾಯ ಮತ್ತು ಆರ್ಥಿಕ ನಷ್ಟದ ಬಗ್ಗೆ ಸರ್ಕಾರವು ಕೈಗೊಳ್ಳುತ್ತಿರುವ ಕ್ರಮಗಳೇನು; ಸಂಘದ ಸದಸ್ಯರುಗಳಿಗೆ ಆಗುತ್ತಿರುವ ಅನಾನೂಕೂಲಗಳನ್ನು ಬಗೆಹರಿಸಲು ಸರ್ಕಾರದ ಕ್ರಮಗಳೇನು; | ರಾಜ್ಯದಲ್ಲಿ ಗೃಹ ನಿರ್ಮಾಣ ಸಹಕಾರ ಸಂಘಗಳಲ್ಲಿನ ಕಾರ್ಯನಿರ್ವಹಣೆ ಹಾಗೂ ಲೋಪಗಳ ಕುರಿತು ಇಲಾಖೆಗೆ ದೂರುಗಳು ಸ್ವೀಕೃತವಾದ ಕೂಡಲೇ, ಅಂತಹ ದೂರುಗಳನ್ನು ವ್ಯಾಪ್ತಿಯ ನಿಬಂಧಕರಿಂದ ವಿಚಾರಣೆಗೆ ಒಳಪಡಿಸಿ ದೂರುದಾರರಿಗೆ ನ್ಯಾಯ ದೊರಕಿಸಿ ಕೊಡುವ ಕ್ರಮ ಇಲಾಖೆಯಲ್ಲಿ ನಡೆಯುತ್ತಿದೆ. ಗಂಭೀರ ಆರೋಪಗಳು ಕಂಡುಬಂದಲ್ಲಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959 ರ ಕಲಂ 64 ರಡಿ ವಿಚಾರಣೆ ಮತ್ತು 65 ರಡಿಯಲ್ಲಿ ಪರಿವೀಕ್ಷಣೆಗೆ ಶಾಸನಬದ್ಧ ವಿಚಾರಣೆಗೆ ಆದೇಶಿಸಿ ಕ್ರಮ ಕೈಗೊಳ್ಳಲಾಗುತ್ತಿದೆ. ಈ ರೀತಿ ಕಲಂ 64 ರ ವಿಚಾರಣಾ ವರದಿ ಮತ್ತು ಕಲಂ 65 ರ ಪರಿವೀಕ್ಷಣಾ ವರದಿಗಳನ್ನಾಧರಿಸಿ ತಪ್ಪಿತಸ್ಥ ಸಂಘಗಳ ವಿರುದ್ಧ ಕ್ರಮ ಕೈಗೊಳ್ಳಲಾಗುತ್ತಿದೆ.<br>ಮುಂದುವರೆದು ಗೃಹ ನಿರ್ಮಾಣ ಸಹಕಾರ ಸಂಘಗಳಿಂದ ಅನ್ಯಾಯ ಅಥವಾ ಆರ್ಥಿಕ ನಷ್ಟವಾಗಿದ್ದಲ್ಲಿ ಸಹಕಾರ ಸಂಘಗಳ ಕಾಯ್ದೆ, 1959 ಕಲಂ 70 ರಡಿಯಲ್ಲಿ ಅರೆನ್ಯಾಯಿಕ ಅಧಿಕಾರಗಳ ಕಾರ್ಯವ್ಯಾಪ್ತಿ ನಿಬಂಧಕರ ಸಮ್ಮುಖದಲ್ಲಿ ದಾವೆಯನ್ನು ದಾಖಲಿಸಿ ಪರಿಹಾರ ಕಂಡುಕೊಳ್ಳಲು ಕಾಯ್ದೆಯಲ್ಲಿ ಅವಕಾಶವಿರುತ್ತದೆ. |
| ಆ) | ರೇರಾ ಆಕ್ಟ್ ಜಾರಿಗೆ ಬರುವುದಕ್ಕೆ ಮೊದಲಿದ್ದ ಗೃಹ ನಿರ್ಮಾಣ ಸಹಕಾರ ಸಂಘಗಳ ವತಿಯಿಂದ ನಿವೇಶನಗಳನ್ನು ನೀಡದೆ ಇರುವ ಎಷ್ಟು ಪ್ರಕರಣಗಳನ್ನು ಗುರುತಿಸಿ ಕ್ರಮ ಜರುಗಿಸಲಾಗಿದೆ; ಬಡ, ಮಧ್ಯಮ ವರ್ಗದ ಜನರು ಇಂಥ ಸಂಘಗಳಲ್ಲಿ ತಮ್ಮ ಶ್ರಮದ ಹಣವನ್ನು ಪಾವತಿಸಿ ಮೋಸ ಹೋಗಿರುವ ಸಂಘದ ಸದಸ್ಯರುಗಳಿಗೆ ನ್ಯಾಯ ಒದಗಿಸಲು 10-15 ವರ್ಷಗಳಿಂದಲೂ ನಿವೇಶನ ನೀಡದೆ ಅನ್ಯಾಯವೆಸಗಿರುವ ಸಂಘಗಳ ಮೇಲೆ ಸರ್ಕಾರ ಕೈಗೊಂಡ ಕ್ರಮಗಳೇನು; | ರೇರಾ ಕಾಯ್ದೆ 2016 ರಿಂದ ಜಾರಿಗೆ ಬಂದಿದ್ದು ಇದಕ್ಕೆ ಮೊದಲು ಗೃಹ ನಿರ್ಮಾಣ ಸಹಕಾರ ಸಂಘಗಳಲ್ಲಿ ನಿವೇಶನ ವಂಚಿತರಾದವರು ಸಹಕಾರ ಸಂಘಗಳ ಕಾಯ್ದೆ 1959 ಕಲಂ 70 ರಡಿಯಲ್ಲಿ ಅರೆನ್ಯಾಯಿಕ ಅಧಿಕಾರ ಕಾರ್ಯವ್ಯಾಪ್ತಿ ನಿಬಂಧಕರ ಸಮ್ಮುಖದಲ್ಲಿ ದಾವೆಯನ್ನು ಹೂಡಲು ಅವಕಾಶವಿರುತ್ತದೆ. ಈ ಅವಕಾಶದಂತೆ 2016-17ನೇ ಸಾಲಿನಿಂದ ತಹಲ್‌ವರೆಗೆ ಒಟ್ಟು 258 ಪ್ರಕರಣಗಳು ದಾಖಲಾಗಿದ್ದು ಈ ಪೈಕಿ 104 ಪ್ರಕರಣಗಳನ್ನು ಇತ್ಯರ್ಥಪಡಿಸಲಾಗಿದೆ. ಅದಲ್ಲದೆ 27 ಗೃಹ ನಿರ್ಮಾಣ ಸಹಕಾರ ಸಂಘಗಳ ವಿರುದ್ಧ ಕಲಂ 64 ರಡಿ ವಿಚಾರಣೆಗೆ ಹಾಗೂ ಕಲಂ 65 ರಡಿ ಪರಿವೀಕ್ಷಣೆಗೆ ಆದೇಶಿಸಿ ಕ್ರಮವಿಡಲಾಗಿದೆ. |
| ಇ) | ಗೃಹ ನಿರ್ಮಾಣ ಸಹಕಾರ ಸಂಘಗಳ ಮೇಲೆ ಸರ್ಕಾರವು ಕಾನೂನು ನಿಯಮಗಳಡಿಯಲ್ಲಿ ಕ್ರಮ ಜರುಗಿಸುವ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು? | ರಾಜ್ಯದಲ್ಲಿ ಗೃಹ ನಿರ್ಮಾಣ ಸಹಕಾರ ಸಂಘಗಳಲ್ಲಿ ಅವ್ಯವಹಾರಗಳು ಅಧಿಕಾರ ದುರುಪಯೋಗಗಳು ಅಥವಾ ಇತರೆ ಯಾವುದೇ ಕಾರಣಗಳಿಂದಾಗಿ ಸದಸ್ಯರುಗಳಿಗೆ ಅನ್ಯಾಯವಾಗಿದ್ದಲ್ಲಿ ಸದಸ್ಯರುಗಳು ನೇರವಾಗಿ ಕಲಂ 70 ರಡಿ ದಾವೆಯನ್ನು ದಾಖಲು ಮಾಡಲು ಕಾಯ್ದೆಯಲ್ಲಿ ಅವಕಾಶವಿರುತ್ತದೆ ಅಥವಾ ದೂರು ನೀಡಿದ್ದಲ್ಲಿ ಕಲಂ 64 ರಡಿ ಶಾಸನಾತ್ಮಕ ವಿಚಾರಣೆ ಅಥವಾ ಕಲಂ 65 ರ ಶಾಸನಾತ್ಮಕ ಪರಿವೀಕ್ಷಣೆ ನಡೆಸಿ ಕಲಂ 68 ರಡಿಯಲ್ಲಿ ಶಾಸನಬದ್ಧ ನಿರ್ದೇಶನಗಳನ್ನು ನೀಡಲಾಗುತ್ತಿದ್ದು, ಶಾಸನಬದ್ಧ ನಿರ್ದೇಶನಗಳನ್ವಯ ಸಂಘಗಳು |

| | | |
|---|---|---|
| | | ಕಡ್ಡಾಯವಾಗಿ ಬಾದಿತ ವ್ಯಕ್ತಿಗೆ ನ್ಯಾಯ ಒದಗಿಸಲೇ ಬೇಕಾದ ಕಾನೂನಾತ್ಮಕ ನಿಯಮಗಳಿರುತ್ತದೆ. ಒಂದು ವೇಳೆ ಶಾಸನಾತ್ಮಕ ನಿರ್ದೇಶನಗಳನ್ನು ಪಾಲನೆ ಮಾಡದಿದ್ದ ಪ್ರಕರಣಗಳಲ್ಲಿ ಕಲಂ 29 (ಸಿ)ರ ಅವಕಾಶಗಳಿಗೆ ಒಳಪಟ್ಟು ಆಡಳಿತ ಮಂಡಲಿ ಸದಸ್ಯರುಗಳನ್ನು ಅನರ್ಹತೆಗೊಳಿಸುವ ಅವಕಾಶವಿದ್ದು ಸಂಧರ್ಬಾನುಸಾರ ಸಂಬಂಧಪಟ್ಟವರ ವಿರುದ್ಧ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ. |

ಸಂಖ್ಯೆ: ಸಿಒ 07 ಸಿಹೆಚ್‌ಎಸ್ 2021 (ಇ)

(ಎಸ್.ಟಿ. ಸೋಮಶೇಖರ್)
ಸಹಕಾರ ಸಚಿವರು

## ಕರ್ನಾಟಕ ವಿಧಾನ ಸಭೆ

ಮಾನ್ಯ ವಿಧಾನ ಸಭೆಯ ಸದಸ್ಯರು : ಶ್ರೀ ಗುತ್ತೇದಾರ್ ಸುಭಾಷ್ ರುಕ್ಮಯ್ಯ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1081

ಉತ್ತರಿಸಬೇಕಾದ ದಿನಾಂಕ : 05.02.2021

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2017ನೇ ಸಾಲಿನಿಂದ ಕಲಬುರಗಿ ಜಿಲ್ಲೆ ಆಳಂದ ಡಿ.ಸಿ.ಸಿ. ಬ್ಯಾಂಕ್‌ನಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳು ಇಲ್ಲಿಯವರೆಗೆ ರೂ.8,30,00,000 ಹಣ ದುರುಪಯೋಗಪಡಿಸಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು, 2019-20 ನೇ ಸಾಲಿನ ಲೆಕ್ಕಪರಿಶೋಧನೆಯಲ್ಲಿ ಲೆಕ್ಕಪರಿಶೋಧಕರು ಸಲ್ಲಿಸಿರುವ ಆಂತರಿಕ ಟಿಪ್ಪಣಿಯಲ್ಲಿ ಕಲಬುರಗಿ ಮತ್ತು ಯಾದಗಿರಿ ಡಿಸಿಸಿ ಬ್ಯಾಂಕಿನ ಆಳಂದ ಶಾಖೆಯಲ್ಲಿ ರೂ.8.32 ಕೋಟಿ ರಷ್ಟು ಹಣ ಕೊರತೆಯಾಗಿರುತ್ತದೆ ಎಂದು ತಿಳಿಸಿರುತ್ತದೆ. |
| ಆ) | ಬಂದಿದ್ದಲ್ಲಿ, ತಪ್ಪಿತಸ್ಥ ಸಿಬ್ಬಂದಿಗಳು ಯಾರು; ಅವರ ವಿರುದ್ಧ ಯಾವ ಕ್ರಮ ಕೈಗೊಳ್ಳಲಾಗಿದೆ; (ಸಿಬ್ಬಂದಿಗಳ ಹೆಸರು ಮತ್ತು ಅವರು ದುರುಪಯೋಗ ಪಡಿಸಿಕೊಂಡಿರುವ ಮೊತ್ತದ ಸಂಪೂರ್ಣ ವಿವರ ನೀಡುವುದು) | ಲೆಕ್ಕಪರಿಶೋಧಕರ ಆಂತರಿಕ ವರದಿಯನ್ವಯ ವಿಚಾರಣೆ ಕಾಯ್ದಿರಿಸಿ, ಬ್ಯಾಂಕಿನ ಆಳಂದ ಶಾಖೆಯ ವ್ಯವಸ್ಥಾಪಕರಾದ ಶ್ರೀ ರವೀಂದ್ರ ಕುಮಾರ. ಎನ್. ಹಾಗೂ ನಗದು ಗುಮಾಸ್ತರಾದ ಶ್ರೀ ಲಕ್ಷ್ಮಣ ಪವಾರ ಇವರು ಜಂಟಿಯಾಗಿ ತಪ್ಪಿತಸ್ಥರೆಂದು. ಗುರುತಿಸಿ ಅಮಾನತ್ತು ಮಾಡಲಾಗಿದೆ.<br><br>2019-20ನೇ ಸಾಲಿನಲ್ಲಿ ರೂ.35.83 ಲಕ್ಷ ಮಾತ್ರ ಹಣ ದುರುಪಯೋಗವಾಗಿದೆ ಎಂದು ಹಾಗೂ ರೂ.3.61 ಕೋಟಿ ಮೊತ್ತಗಳ ವ್ಯವಹಾರವು ಅನುಮಾನಾಸ್ಪದವಾಗಿದೆ ಎಂದು ವರದಿ ಸ್ವೀಕೃತವಾದ ಕಾರಣ 2017ನೇ ಸಾಲಿನಿಂದ ಅಪಾರ ಮೊತ್ತದ ಹಣ ದುರುಪಯೋಗ ಪಡಿಸಿಕೊಂಡಿರುವ ಬಗ್ಗೆ, ತನಿಖೆ ಮಾಡಿ ವರದಿ ಸಲ್ಲಿಸುವಂತೆ ಬ್ಯಾಂಕಿನ ಆದೇಶ ಸಂಖ್ಯೆ:ಡಿಸಿಸಿಬಿ/ಆಮಸಿ/2020-21/3230/3235 ದಿನಾಂಕ: 02-09-2020ರನ್ವಯ ಬ್ಯಾಂಕಿನ ಸಿಬ್ಬಂದಿಗಳಾದ ಶ್ರೀ ಬಿ.ಜಿ.ಕೊಲ್ಲೂರ್, ವಸೂಲಾಧಿಕಾರಿ, ಶ್ರೀ ಮುರಳಿಧರ್. ಶಿವರೆಡ್ಡಿ, ಸಿಬ್ಬಂದಿ ಶಾಖೆಯ ಮುಖ್ಯಸ್ಥರು, ಶ್ರೀ ಲಿಂಗನ ಗೌಡ ಪಾಟೀಲ, ಶಾಹಪೂರ್ ಶಾಖೆಯ ಮೇಲ್ವಿಚಾರಕರು ಮತ್ತು ಶ್ರೀ ಶಿವರಾಜ್ ಮಠಪತಿ, ಸಿ.ಬಿ.ಎಸ್ ತಂತ್ರಾಂಶದ ಮೇಲ್ವಿಚಾರಕರು ಇವರಗಳ ತಂಡವನ್ನು ರಚಿಸಿದ್ದು, ತನಿಖಾ ತಂಡ ದಿನಾಂಕ:18-01-2021 ರಂದು ಮಧ್ಯಂತರ ವರದಿ ಸಲ್ಲಿಸಿದ್ದು, ತನಿಖೆ ಪೂರ್ಣಗೊಳಿಸಿ ಅಂತಿಮ ವರದಿಯನ್ನು ಸಲ್ಲಿಸುವಂತೆ ಸೂಚಿಸಲಾಗಿದೆ. ವರದಿ ಬಂದ ನಂತರ ಹಣ ದುರುಪಯೋಗ ಮೊತ್ತ |

| | | |
|---|---|---|
| | | ಗುರುತಿಸಲು ಸಾಧ್ಯವಾಗುತ್ತದೆ.<br>ಮುಂದುವರೆದು, ಶ್ರೀ ರವೀಂದ್ರ ಕುಮಾರ. ಎನ್. ಹಾಗೂ ಲಕ್ಷ್ಮಣ ಪವಾರ ರವರ ವಿರುದ್ಧ ಬ್ಯಾಂಕಿನ ಆದೇಶ ಸಂಖ್ಯೆ:ಮುಕಾನಿ/ಆಸಿವಿ/ಸೇ.ಅ:2020-21/3226 ಮತ್ತು 3228 ದಿನಾಂಕ:03-09-2020 ರನ್ವಯ ಸೇವೆಯಿಂದ ಅಮಾನತ್ತು ಮಾಡಲಾಗಿರುತ್ತದೆ. |
| ಇ) | ತಪ್ಪಿತಸ್ಥರಿಂದ ದುರುಪಯೋಗ ಪಡಿಸಿಕೊಂಡಿರುವ ಹಣವನ್ನು ಹಿಂಪಡೆಯಲಾಗಿದೆಯೇ; | ತಪ್ಪಿತಸ್ಥರು ದುರುಪಯೋಗ ಪಡಿಸಿಕೊಂಡಿರುವ ಮೊತ್ತದಲ್ಲಿ ರೂ 1.10 ಕೋಟಿಗಳಷ್ಟು ಬ್ಯಾಂಕ್ ಖಾತೆಗೆ ಜಂಟಿಯಾಗಿ ಸಂದಾಯ ಮಾಡಿದ್ದು, ಅಂತಿಮ ವರದಿ ಬಂದ ನಂತರ ಬಾಕಿ ಮೊತ್ತ ವಸೂಲು ಮಾಡಲು ಕ್ರಮವಿಡಲಾಗುವುದು. |
| ಈ) | ಇಲ್ಲದಿದ್ದಲ್ಲಿ, ದುರುಪಯೋಗ ಪಡಿಸಿಕೊಂಡಿರುವ ಹಣವನ್ನು ಹಿಂ ಪಡೆಯಲು ವಿಳಂಬ ವಾಗುತ್ತಿರುವುದಕ್ಕೆ ಕಾರಣವೇನು? (ಸಂಪೂರ್ಣ ವಿವರ ನೀಡುವುದು) | ದುರುಪಯೋಗಪಡಿಸಿಕೊಂಡ ಹಣ ವಸೂಲಾತಿಗೆ ಯಾವುದೇ ವಿಳಂಬವಾಗಿರುವುದಿಲ್ಲ. ತನಿಖೆ ತಂಡದ ಅಂತಿಮ ವರದಿ ಬಂದ ನಂತರ ನಿಖರವಾದ ಹಣ ದುರುಪಯೋಗದ ಮೊತ್ತವನ್ನು ಕಂಡುಹಿಡಿದು ಸಂಬಂದಪಟ್ಟವರಿಂದ ವಸೂಲಾತಿ ಮಾಡಲು ದಿನಾಂಕ: 31.01.2021 ರಂದು ಜರುಗಿದ ಆಡಳಿತ ಮಂಡಳಿ ಸಭೆಯಲ್ಲಿ ನಿರ್ಣಯಿಸಲಾಗಿದೆ. ಅದರಂತೆ ಶೀಘ್ರವಾಗಿ ತನಿಖಾ ವರದಿ ನೀಡಲು ತನಿಖಾ ತಂಡಕ್ಕೆ ನಿರ್ದೇಶನ ನೀಡಲಾಗಿರುತ್ತದೆ. |

ಕಡತ ಸಂಖ್ಯೆ: ಸಿಒ 22 ಸಿಸಿಬಿ 2021

**(ಎಸ್. ಟಿ. ಸೋಮಶೇಖರ್)**
ಸಹಕಾರ ಸಚಿವರು.



# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1049

ಸದಸ್ಯರ ಹೆಸರು : ಶ್ರೀ ಹೂಲಗೇರಿ ಡಿ.ಎಸ್ (ಲಿಂಗಸುಗೂರು)

ಉತ್ತರಿಸುವ ದಿನಾಂಕ : 05/02/2021

ಉತ್ತರಿಸುವ ಸಚಿವರು : ಮಾನ್ಯ ಪೌರಾಡಳಿತ ಮತ್ತು ಸಕ್ಕರೆ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಯಚೂರು ಜಿಲ್ಲೆಯ ಲಿಂಗಸುಗೂರು ಪುರಸಭೆಯನ್ನು ನಗರಸಭೆಯನ್ನಾಗಿ ಮೇಲ್ದರ್ಜೆಗೇರಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ರಾಯಚೂರು ಜಿಲ್ಲೆಯ ಲಿಂಗಸುಗೂರು ಪುರಸಭೆಯನ್ನು ನಗರಸಭೆಯನ್ನಾಗಿ ಮೇಲ್ದರ್ಜೆಗೇರಿಸುವ ಕುರಿತು ಯಾವುದೇ ಪ್ರಸ್ತಾವನೆ ಇರುವುದಿಲ್ಲ.<br><br>2011ರ ಜನಗಣತಿಯನುಸಾರ ಲಿಂಗಸುಗೂರು ಪುರಸಭೆಯ ಜನಸಂಖ್ಯೆಯು 35,411 ಇದ್ದು, ನಗರಸಭೆಯಾಗಿ ಪರಿವರ್ತಿಸಲು ಕರ್ನಾಟಕ ಪುರಸಭೆಗಳ ಅಧಿನಿಯಮ 1964ರ ಕಲಂ 3 ಮತ್ತು 9ರ ಅನ್ವಯ ನಿಗಧಿಪಡಿಸಿದ ಮಾನದಂಡಗಳನ್ವಯ ಕನಿಷ್ಠ ಜನಸಂಖ್ಯೆ 50,000 ಹೊಂದಿಲ್ಲವಾದ್ದರಿಂದ ಪ್ರಸ್ತುತ ಹಂತದಲ್ಲಿ ನಗರಸಭೆಯಾಗಿ ಮೇಲ್ದರ್ಜೆಗೇರಿಸಲು ಅವಕಾಶವಿರುವುದಿಲ್ಲ. |
| (ಆ) | ಈ ಜಿಲ್ಲೆಯ ಲಿಂಗಸುಗೂರು ತಾಲ್ಲೂಕಿನಲ್ಲಿರುವ ಹಟ್ಟಿ ಚಿನ್ನದ ಗಣಿ ಕಂಪನಿಯನ್ನು ಹಟ್ಟಿ ಪಟ್ಟಣ ಪಂಚಾಯಿತಿ ವ್ಯಾಪ್ತಿಗೆ ಸೇರ್ಪಡೆಗೊಳಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲ್ಲೂಕಿನಲ್ಲಿರುವ ಹಟ್ಟಿ ಚಿನ್ನದ ಗಣಿ ಕಂಪನಿಯನ್ನು ಹಟ್ಟಿ ಪಟ್ಟಣ ಪಂಚಾಯಿತಿ ವ್ಯಾಪ್ತಿಗೆ ಸೇರ್ಪಡೆಗೊಳಿಸುವ ಕುರಿತು ಯಾವುದೇ ಪ್ರಸ್ತಾವನೆ ಇರುವುದಿಲ್ಲ. |
| (ಇ) | ರಾಯಚೂರು ಜಿಲ್ಲೆಯ ಲಿಂಗಸುಗೂರು ವಿಧಾನಸಭಾ ಕ್ಷೇತ್ರಕ್ಕೆ ಎಸ್.ಎಫ್.ಸಿ ವಿಶೇಷ ಯೋಜನೆ ಅಡಿಯಲ್ಲಿ ಮಂಜೂರಾಗಿರುವ ಬಿಡುಗಡೆಯಾಗಿರುವ ಅನುದಾನ ಎಷ್ಟು; | ಲಿಂಗಸುಗೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಲಿಂಗಸುಗೂರು ಪುರಸಭೆ, ಮುದಗಲ್ ಪುರಸಭೆ ಹಾಗೂ ಹಟ್ಟಿ ಪಟ್ಟಣ ಪಂಚಾಯಿತಿಗಳ ವ್ಯಾಪ್ತಿಗಳಲ್ಲಿ ವಿವಿಧ ಮೂಲಭೂತ ಸೌಕರ್ಯ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ರೂ 600.00 ಲಕ್ಷಗಳ ಅನುದಾನವನ್ನು ಆದೇಶ ಸಂಖ್ಯೆ: ನಅಇ 03 ಎಸ್‌ಎಫ್‌ಸಿ 2019, ದಿನಾಂಕ 09-01-2019ರನ್ವಯ ಮಂಜೂರು ಮಾಡಿ ಆದೇಶಿಸಿರುತ್ತದೆ.<br><br>ತದನಂತರ ಸರ್ಕಾರವು ಮಂಜೂರು ಮಾಡಲಾಗಿರುವ ವಿಶೇಷ ಅನುದಾನದಡಿ ಕೈಗೊಳ್ಳುವ ಕಾಮಗಾರಿಗಳು ಇನ್ನೂ ಪ್ರಾರಂಭವಾಗಬೇಕಾಗಿರುವುದರ ಹಿನ್ನೆಲೆಯಲ್ಲಿ ಲಿಂಗಸುಗೂರು ಪುರಸಭೆ, ಮುದಗಲ್ ಪುರಸಭೆ ಹಾಗೂ ಹಟ್ಟಿ ಪಟ್ಟಣ ಪಂಚಾಯಿತಿಗಳಿಗೆ ಮಂಜೂರು ಮಾಡಲಾಗಿದ್ದರೂ 600.00 ಲಕ್ಷಗಳ ಅನುದಾನವನ್ನು ಪತ್ರ ಸಂಖ್ಯೆ: ನಅಇ 222 ಎಸ್‌ಎಫ್‌ಸಿ 2019, ದಿನಾಂಕ 13-09-2019ರನ್ವಯ ತಡೆಹಿಡಿಯಲಾಗಿದೆ. |

...2

| | | |
|---|---|---|
| (ಇ) | ಲಿಂಗಸುಗೂರು ವಿಧಾನಸಭಾ ಕ್ಷೇತ್ರದಲ್ಲ ಇಲ್ಲಿಯವರೆಗೂ ಬಿಲ್‌ಗಳು ಪಾವತಿ ಆಗದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಈ ಬಗ್ಗೆ ಸರ್ಕಾರ ತೆಗೆದುಕೊಂಡ ಕ್ರಮಗಳೇನು? (ವಿವರ ನೀಡುವುದು) | ಹೌದು.<br><br>ಎಸ್.ಎಫ್.ಸಿ. ವಿಶೇಷ ಅನುದಾನ ತಡೆಹಿಡಿಯುವ ಮುನ್ನ ಕಾಮಗಾರಿ ಪ್ರಾರಂಭವಾಗಿರುವ / ಮುಕ್ತಾಯಗೊಂಡಿರುವ ಒಟ್ಟು 11 ನಗರ ಸ್ಥಳೀಯ ಸಂಸ್ಥೆಗಳಿಗೆ (ಲಿಂಗಸುಗೂರು ಪುರಸಭೆಗೆ ಮಂಜೂರು ಮಾಡಲಾಗಿದ್ದರೂ 200.00 ಲಕ್ಷಗಳನ್ನು ಒಳಗೊಂಡಂತೆ) ರೂ 5550.00 ಲಕ್ಷಗಳ ಅನುದಾನವನ್ನು ಮರು ಮಂಜೂರು ಮಾಡಿ ಬಿಡುಗಡೆಗೊಳಸಲು ಏಕ ಕಡತ ಪದ್ಧತಿಯನ್ವಯ ಕಡತ ಸಂಖ್ಯೆ: 30495 ಡಿಎಂಎ 2 ಎಸ್‌ಎಫ್‌ಸಿ ಎಸ್‌ಪಿಎಲ್ 2020-21, ದಿನಾಂಕ 07-07-2020ರನ್ವಯ ಪ್ರಸ್ತಾವನೆಯನ್ನು ಸಲ್ಲಿಸಲಾಗಿದ್ದು, ಪರಿಶೀಲನೆಯಲ್ಲಿದೆ. |

ಸಂಖ್ಯೆ: ನಅಇ 20 ಎಲ್‌ಎಕ್ಯೂ 2021

(ಎನ್. ನಾಗರಾಜು ಎಂ.ಟಿ.ಬಿ.)
ಪೌರಾಡಳಿತ ಮತ್ತು ಸಕ್ಕರೆ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1087 |
| ಸದಸ್ಯರ ಹೆಸರು | ಶ್ರೀ ಶಿವಣ್ಣ ಬಿ |
| ಉತ್ತರಿಸುವ ದಿನಾಂಕ | 05/02/2021 |
| ಉತ್ತರಿಸುವವರು | ತೋಟಗಾರಿಕೆ ಮತ್ತು ರೇಷ್ಮೆ ಸಚಿವರು |

| | ಪ್ರಶ್ನೆಗಳು | ಉತ್ತರ |
|---|---|---|
| ಅ | 2020-21ನೇ ಸಾಲಿಗೆ ರೇಷ್ಮೆ ಇಲಾಖೆ ವತಿಯಿಂದ ಆನೇಕಲ್ ವಿಧಾನಸಭಾ ಕ್ಷೇತ್ರಕ್ಕೆ ವಿತರಣೆಯಾಗಿರುವ ವಿವಿಧ ಸಬ್ಸಿಡಿಗಳು ಎಷ್ಟು;ಅವುಗಳು ಯಾವುವು(ಪೂರ್ಣ ಮಾಹಿತಿ ನೀಡುವುದು) | 2020-21ನೇ ಸಾಲಿನಲ್ಲಿ ರೇಷ್ಮೆ ಇಲಾಖೆಯಿಂದ ಆನೇಕಲ್ ವಿಧಾನಸಭಾ ಕ್ಷೇತ್ರಕ್ಕೆ ವಿತರಣೆಯಾಗಿರುವ ವಿವಿಧ ಸಹಾಯಧನ/ಪ್ರೋತ್ಸಾಹಧನ ಕಾರ್ಯಕ್ರಮಗಳ ವಿವರ ಕೆಳಕಂಡಂತಿದೆ.<br><br>1. ಟ್ರಂಚಿಂಗ್ ಮತ್ತು ಮಲ್ಚಿಂಗ್.<br>2. ಹನಿ ನೀರಾವರಿ ಘಟಕ ಅಳವಡಿಕೆ.<br>3. ರೇಷ್ಮೆ ಹುಳುಸಾಕಾಣಿಕಾ ಸಲಕರಣೆಗಳ ಖರೀದಿಗೆ.<br>4. ಪ್ರತ್ಯೇಕ ರೇಷ್ಮೆ ಹುಳುಸಾಕಾಣಿಕಾ ಮನೆ.<br>5. ದ್ವಿತಳಿ ರೇಷ್ಮೆ ಗೂಡು ಉತ್ಪಾದನೆಗೆ ಸಹಾಯಧನ ಹಾಗೂ ಪ್ರೋತ್ಸಾಹಧನ.<br>6. ದ್ವಿತಳಿ ಚಾಕಿ ಸಾಕಾಣಿಕೆಗೆ ಪ್ರೋತ್ಸಾಹ ಧನ.<br>ಈ ಮೇಲ್ಕಂಡ ಕಾರ್ಯಗಳಡಿ 341 ರೇಷ್ಮೆ ಬೆಳೆಗಾರರು ಸೌಲಭ್ಯ ಪಡೆದಿದ್ದು, ಇದಕ್ಕಾಗಿ ರೂ.192 ಲಕ್ಷಗಳ ಮೊತ್ತವನ್ನು ಸಹಾಯಧನ ಹಾಗೂ ಪ್ರೋತ್ಸಾಹಧನವನ್ನಾಗಿ ವಿತರಿಸಲಾಗಿದೆ. |
| ಆ | ಪ್ರಸ್ತುತ ನೀಡುತ್ತಿರುವ ಫಲಾನುಭವಿಗಳ ಸಂಖ್ಯೆಯನ್ನು ಹೆಚ್ಚಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ (ಪೂರ್ಣ ಮಾಹಿತಿ ನೀಡುವುದು)? | ರಾಜ್ಯದಲ್ಲಿ ರೇಷ್ಮೆ ಉದ್ಯಮವನ್ನು ಪ್ರೋತ್ಸಾಹಿಸುವ ನಿಟ್ಟಿನಲ್ಲಿ ರೇಷ್ಮೆ ಕೃಷಿಯನ್ನು ಅವಲಂಬಿಸಿರುವ ಎಲ್ಲಾ ರೇಷ್ಮೆ ಬೆಳೆಗಾರರಿಗೆ ರೇಷ್ಮೆ ಇಲಾಖೆಯು ಹಲವಾರು ಸಹಾಯಧನ ಹಾಗೂ ಪ್ರೋತ್ಸಾಹಧನ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಉತ್ತೇಜಿಸಲಾಗುತ್ತಿದೆ. ಆನೇಕಲ್ ದ್ವಿತಳಿ ಬಿತ್ತನೆ ಪ್ರದೇಶವಾಗಿದ್ದು, ಈ ಕ್ಷೇತ್ರವನ್ನು ಆದ್ಯತೆ ಮೇರೆಗೆ ಪರಿಗಣಿಸಲಾಗುತ್ತಿದೆ. |

**ಸಂಖ್ಯೆ: ರೇಷ್ಮೆ 27 ರೇಕೃವಿ 2021**

**(ಆರ್.ಶಂಕರ್)**
**ತೋಟಗಾರಿಕೆ ಮತ್ತು ರೇಷ್ಮೆ ಸಚಿವರು**

## ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ : 1037**

**ಸದಸ್ಯರ ಹೆಸರು : ಶ್ರೀ. ಶ್ರೀನಿವಾಸಮೂರ್ತಿ ಕೆ. ಡಾ||(ನೆಲಮಂಗಲ)**

**ಉತ್ತರಿಸುವ ಸಚಿವರು : ಮಾನ್ಯ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು.**

**ಉತ್ತರಿಸಬೇಕಾದ ದಿನಾಂಕ : 05.02.2021**

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಲ್ಲಿ ನೆಲಮಂಗಲ ವಿಧಾನಸಭಾ ಕ್ಷೇತ್ರಕ್ಕೆ ತೋಟಗಾರಿಕೆ ಇಲಾಖೆಯಿಂದ ಬಿಡುಗಡೆ ಮಾಡಲಾದ ಅನುದಾನ ವೆಷ್ಟು; (ಯೋಜನಾವಾರು, ಆದೇಶ ಪ್ರತಿ ಸಮೇತ ಮಾಹಿತಿ ನೀಡುವುದು) | ಕಳೆದ ಮೂರು ವರ್ಷಗಳಲ್ಲಿ ಅಂದರೆ 2017-18, 2018-19 ಹಾಗೂ 2019-20ನೇ ಸಾಲಿನಲ್ಲಿ ನೆಲಮಂಗಲ ವಿಧಾನಸಭಾ ಕೇತ್ರಕ್ಕೆ ತೋಟಗಾರಿಕೆ ಇಲಾಖೆಯ ವಿವಿಧ ಯೋಜನೆಗಳಡಿಯಲ್ಲಿ ಬಿಡುಗಡೆಯಾದ ಒಟ್ಟಾರೆ ಅನುದಾನವು ಈ ಕೆಳಗಿನಂತಿದೆ; **(ರೂ.ಲಕ್ಷಗಳಲ್ಲಿ)** <br> (see table below) <br> ವರ್ಷವಾರು, ಯೋಜನೆವಾರು ಬಿಡುಗಡೆಯಾದ ಅನುದಾನದ ವಿವರವನ್ನು ಅನುಬಂಧ-1ರಲ್ಲಿ ಒದಗಿಸಲಾಗಿದೆ. ಹಾಗೂ ಬಿಡುಗಡೆ ಆದೇಶದ ಪ್ರತಿಗಳನ್ನು ಸಿ.ಡಿ ಯಲ್ಲಿ ಒದಗಿಸಿದೆ. |
| ಆ) | ಇಲಾಖೆಯಿಂದ ಕಳೆದ ಮೂರು ವರ್ಷಗಳಲ್ಲಿ ರೈತರಿಗೆ ಕೃಷಿ ಹೊಂಡ ನಿರ್ಮಿಸಲು, ಡ್ರಿಪ್ ಸಿಸ್ಟಮ್ ಅಳವಡಿಸಲು ಹಾಗೂ ತೋಟಗಾರಿಕೆ ಬೆಳೆಗಳಿಗೆ ಮತ್ತು ಪರಿಕರಗಳ ಖರೀದಿಗೆ ಸಹಾಯಧನ ನೀಡಲಾಗಿದೆಯೇ; (ರೈತರು, ಗ್ರಾಮವಾರು ಸಹಾಯಧನ ಮಾಹಿತಿಯ ವಿವರ ನೀಡುವುದು) | ಕಳೆದ ಮೂರು ವರ್ಷಗಳಲ್ಲಿ ಅಂದರೆ 2017-18, 2018-19 ಹಾಗೂ 2019-20ನೇ ಸಾಲಿನಲ್ಲಿ ನೆಲಮಂಗಲ ವಿಧಾನಸಭಾ ಕೇತ್ರದ ರೈತರಿಗೆ ಕೃಷಿ ಹೊಂಡ ನಿರ್ಮಿಸಲು, ಡ್ರಿಪ್ ಸಿಸ್ಟಮ್ ಅಳವಡಿಸಲು ಹಾಗೂ ತೋಟಗಾರಿಕೆ ಬೆಳೆಗಳಿಗೆ ಮತ್ತು ಪರಿಕರಗಳ ಖರೀದಿಗೆ ಇಲಾಖೆಯ ಯೋಜನೆಗಳಡಿಯಲ್ಲಿ ಸಹಾಯಧನ ನೀಡಲಾಗಿರುತ್ತದೆ. <br><br> ಗ್ರಾಮವಾರು ಫಲಾನುಭವಿಗಳು ಹಾಗೂ ಸಹಾಯಧನದ ವಿವರವನ್ನು ಅನುಬಂಧ-2ರಲ್ಲಿ ಸಿ.ಡಿ. ಯಲ್ಲಿ ಒದಗಿಸಿದೆ. |

| ಕ್ರ ಸಂ | ವರ್ಷ | ಬಿಡುಗಡೆಯಾದ ಅನುದಾನ |
|---|---|---|
| 1 | 2017-18 | 343.23 |
| 2 | 2018-19 | 669.88 |
| 3 | 2019-20 | 897.23 |
| ಒಟ್ಟು | | **1910.34** |

| | | |
|---|---|---|
| ಇ) | ಇಲಾಖೆಯಿಂದ ನೆಲಮಂಗಲ ಕ್ಷೇತ್ರದಲ್ಲಿ ನಿರ್ಮಿಸಿರುವ ನರ್ಸರಿಗಳೆಷ್ಟು; ಈ ನರ್ಸರಿಗಳಿಂದ ರೈತರಿಗೆ ಉಚಿತವಾಗಿ ಗಿಡಗಳನ್ನು ನೀಡಲಾಗುತ್ತಿದೆಯೇ; | ಇಲಾಖೆಯಿಂದ ನೆಲಮಂಗಲ ಕ್ಷೇತ್ರದಲ್ಲಿ 2 ಸಂಖ್ಯೆ ನರ್ಸರಿಗಳನ್ನು ನಿರ್ಮಿಸಲಾಗಿದೆ. ಈ ನರ್ಸರಿಗಳಲ್ಲಿ ಉತ್ಪಾದಿಸಲಾಗುವ ಕಸಿ/ಸಸಿಗಳನ್ನು ರೈತರಿಗೆ ಉಚಿತವಾಗಿ ನೀಡಲಾಗುವುದಿಲ್ಲ. ಇಲಾಖೆಯಿಂದ ನಿಗದಿಪಡಿಸಿರುವ ರಿಯಾಯಿತಿ ದರದಲ್ಲಿ ಮಾರಾಟ ಮಾಡಲಾಗುತ್ತಿದೆ. |
| ಈ) | ಈ ಕ್ಷೇತ್ರದಲ್ಲಿ ಪಾರ್ಕ್‌ಗಳ ಅಭಿವೃದ್ಧಿಗಾಗಿ ತೋಟಗಾರಿಕೆ ಇಲಾಖೆ ಯಾವ ಕ್ರಮಗಳನ್ನು ಕೈಗೊಂಡಿದೆ; ಪ್ರತಿ ಪಾರ್ಕ್‌ಗಳ ನಿರ್ಮಾಣಕ್ಕೆ ವೆಚ್ಚವಾಗುವ ಹಣವೆಷ್ಟು; (ವಿವರ ನೀಡುವುದು) | ತೋಟಗಾರಿಕೆ ಇಲಾಖೆಯಿಂದ ಈ ಕ್ಷೇತ್ರದಲ್ಲಿ ಯಾವುದೇ ಪಾರ್ಕ್ ಅನ್ನು ಅಭಿವೃದ್ಧಿಪಡಿಸಿರುವುದಿಲ್ಲ. |
| ಉ) | ತೋಟಗಾರಿಕೆ ಇಲಾಖೆಯಲ್ಲಿರುವ ಯೋಜನೆಗಳಾವುವು; ರೈತರಿಗೆ ಆರ್ಥಿಕವಾಗಿ ಸಹಾಯಕವಾಗಿರುವ ಯೋಜನೆಗಳು ಯಾವುವು; ಸದರಿ ಯೋಜನೆಗಳ ಸವಲತ್ತುಗಳನ್ನು ಪಡೆಯಲು ಇರುವ ಮಾನದಂಡಗಳೇನು; | ಪ್ರಸಕ್ತ ಸಾಲಿನಲ್ಲಿ ತೋಟಗಾರಿಕೆ ಇಲಾಖೆಯಿಂದ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳು ಹಾಗೂ ಸದರಿ ಯೋಜನೆಗಳ ಪೈಕಿ ರೈತರಿಗೆ ಆರ್ಥಿಕವಾಗಿ ಸಹಾಯಕ ವಾಗಿರುವ ಯೋಜನೆಗಳ ಪಟ್ಟಿಯನ್ನು ಅನುಬಂಧ-3 ರಲ್ಲಿ ಒದಗಿಸಿದೆ.<br><br>ಇಲಾಖಾ ಯೋಜನೆಗಳಡಿಯಲ್ಲಿ ಸವಲತ್ತು/ಸಹಾಯಧನ ಪಡೆಯಲು ಇರುವ ಮಾನದಂಡಗಳ ವಿವರವನ್ನು ಅನುಬಂಧ-4 ರಲ್ಲಿ ಒದಗಿಸಿದೆ. |

ಸಂಖ್ಯೆ: HORTI 63 HGM 2021

(ಆರ್.ಶಂಕರ್)
ತೋಟಗಾರಿಕೆ ಮತ್ತು ರೇಷ್ಮೆ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ : 1158
ಸದಸ್ಯರ ಹೆಸರು : ಶ್ರೀ. ನಾಗೇಂದ್ರ ಬಿ.)
ಉತ್ತರಿಸುವ ಸಚಿವರು : ಮಾನ್ಯ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು.
ಉತ್ತರಿಸಬೇಕಾದ ದಿನಾಂಕ : 05.02.2021

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ತೋಟಗಾರಿಕೆ ಇಲಾಖೆಯಲ್ಲಿರುವ ಯೋಜನೆಗಳಾವುವು; ಕಳೆದ ಮೂರು ವರ್ಷಗಳಲ್ಲಿ ಇಲಾಖೆಯಲ್ಲಿ ಜಾರಿಯಲ್ಲಿ ರುವ ವಿವಿಧ ಯೋಜನೆಗಳಿಗೆ ಮಂಜೂರಾದ ಅನುದಾನ ಎಷ್ಟು; ಬಿಡುಗಡೆಯಾದ ಅನುದಾನ ಎಷ್ಟು; ಖರ್ಚಾದ ಮತ್ತು ಉಳಿಕೆಯಾದ ಅನುದಾನ ಎಷ್ಟು; (ವರ್ಷಾವಾರು, ಯೋಜನೆ ವಾರು ಮತ್ತು ಕ್ಷೇತ್ರಗಳವಾರು ಪೂರ್ಣ ವಿವರ ನೀಡುವುದು) | 2020-21ನೇ ಸಾಲಿನಲ್ಲಿ ತೋಟಗಾರಿಕೆ ಇಲಾಖೆಯಿಂದ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳ ಪಟ್ಟಿಯನ್ನು ಅನುಬಂಧ-1ರಲ್ಲಿ ನೀಡಲಾಗಿದೆ.<br><br>ಕಳೆದ ಮೂರು ವರ್ಷಗಳಲ್ಲಿ ಅಂದರೆ 2017-18, 2018-19 ಹಾಗೂ 2019-20ನೇ ಸಾಲಿನಲ್ಲಿ ಇಲಾಖೆಯ ವಿವಿಧ ಯೋಜನೆಗಳಡಿಯಲ್ಲಿ ಮಂಜೂರಾದ ಅನುದಾನ, ಬಿಡುಗಡೆಯಾದ ಅನುದಾನ, ಖರ್ಚಾದ ಮತ್ತು ಉಳಿಕೆಯಾದ ಅನುದಾನದ ವಿವರ ಈ ಕೆಳಗಿನಂತಿದೆ; |

**(ರೂ.ಲಕ್ಷಗಳಲ್ಲಿ)**

| ಕ್ರ ಸಂ | ವರ್ಷ | ಮಂಜೂರಾದ ಅನುದಾನ | ಬಿಡುಗಡೆ | ವೆಚ್ಚ | ಉಳಿಕೆ |
|---|---|---|---|---|---|
| 1 | 2017-18 | 105701.07 | 93861.38 | 92492.94 | 1368.44 |
| 2 | 2018-19 | 122935.35 | 113348.92 | 109604.40 | 3744.52 |
| 3 | 2019-20 | 92430.77 | 87039.50 | 84905.84 | 2133.66 |
| | ಒಟ್ಟು | **321067.19** | **294249.8** | **287003.18** | **7246.62** |

ವರ್ಷವಾರು, ಯೋಜನೆವಾರು ಹಾಗೂ ಮತ ಕ್ಷೇತ್ರವಾರು ವಿವರವನ್ನು ಅನುಬಂಧ-2ರಲ್ಲಿ ಸಿ.ಡಿ ಯಲ್ಲಿ ಒದಗಿಸಿದೆ.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಆ) | ಇಲಾಖೆಯ ಜಾರಿಯಲ್ಲಿ ವಿವಿಧ ಯೋಜನೆಗಳಲ್ಲಿ ಕಳೆದ ಮೂರು ವರ್ಷಗಳಲ್ಲಿ ಅನುಕೂಲ ಪಡೆದ ಬಳ್ಳಾರಿ ಜಿಲ್ಲೆಯ ಫಲಾನುಭವಿಗಳ ಸಂಖ್ಯೆ ಎಷ್ಟು; (ಮತ ಕ್ಷೇತ್ರವಾರು, ಯೋಜನೆವಾರು ಫಲಾನುಭವಿ | ಬಳ್ಳಾರಿ ಜಿಲ್ಲೆಯಲ್ಲಿ ಕಳೆದ ಮೂರು ವರ್ಷಗಳಲ್ಲಿ ಅಂದರೆ 2017-18, 2018-19 ಹಾಗೂ 2019-20ನೇ ಸಾಲಿನಲ್ಲಿ ಅನುಕ್ರಮವಾಗಿ ಒಟ್ಟಾರೆ 11310ಸಂಖ್ಯೆ, 7433 ಸಂಖ್ಯೆ ಮತ್ತು 9390 ಸಂಖ್ಯೆ ಫಲಾನುಭವಿಗಳು ತೋಟಗಾರಿಕೆ ಇಲಾಖೆಯ ವಿವಿಧ ಯೋಜನೆಗಳಡಿಯಲ್ಲಿ ಅನುಕೂಲ ಪಡೆದಿರುತ್ತಾರೆ. ಮತ ಕ್ಷೇತ್ರವಾರು, ವರ್ಷವಾರು ಯೋಜನಾವಾರು ಮತ್ತು ಫಲಾನುಭವಿವಾರು |

| | | |
|---|---|---|
| | ವಾರು ಅನುದಾನದೊಂದಿಗೆ ವಿವರ ನೀಡುವುದು) | ಅನುದಾನದ ವಿವರವನ್ನು ಅನುಬಂಧ-3 ರಲ್ಲಿ ಸಿ.ಡಿ ಯಲ್ಲಿ ನೀಡಲಾಗಿದೆ. |
| ಇ) | ಫಲಾನುಭವಿಗಳಿಗೆ ಯೋಜನೆಯ ಪೂರ್ಣ ಪ್ರಮಾಣದ ಅನುಕೂಲ ದೊರಕಿದೆಯೇ;(ವಿವರ ನೀಡುವುದು) | ಹೌದು. ಫಲಾನುಭವಿಗಳಿಗೆ ಇಲಾಖೆಯ ಯೋಜನೆಗಳಡಿಯಲ್ಲಿ ಪೂರ್ಣ ಪ್ರಮಾಣದ ಅನುಕೂಲ ದೊರಕಿರುತ್ತದೆ. ವಿವರಗಳನ್ನು ಸಿ.ಡಿ. ಯಲ್ಲಿ ಒದಗಿಸಲಾಗಿದೆ. |
| ಈ) | ಬಳ್ಳಾರಿ ಗ್ರಾಮಾಂತರ ಮತ ಕ್ಷೇತ್ರಕ್ಕೆ ಪ್ರಸಕ್ತ ಸಾಲಿನಲ್ಲಿ ಮಂಜೂರಾಗಿರುವ ಅನುದಾನ ಎಷ್ಟು; ಸರ್ಕಾರವು ಹೆಚ್ಚುವರಿ ಅನುದಾನವನ್ನು ಬಿಡುಗಡೆಗೊಳಿಸುವುದೇ; (ಯೋಜನೆಗಳವಾರು ವಿವರ ನೀಡುವುದು). | ಪ್ರಸಕ್ತ ಸಾಲಿನಲ್ಲಿ ಬಳ್ಳಾರಿ ಗ್ರಾಮಾಂತರ ಮತ ಕ್ಷೇತ್ರಕ್ಕೆ ಇಲಾಖೆಯ ವಿವಿಧ ಯೋಜನೆಗಳಡಿಯಲ್ಲಿ ಒಟ್ಟಾರೆ ರೂ.486.41 ಲಕ್ಷಗಳ ಅನುದಾನ ನಿಗದಿಯಾಗಿರುತ್ತದೆ. ಪ್ರಸ್ತುತ ಆರ್ಥಿಕ ವರ್ಷಾಂತ್ಯದಲ್ಲಿರುವುದರಿಂದ ಹೆಚ್ಚುವರಿ ಅನುದಾನ ಬಿಡುಗಡೆಗೊಳಿಸುವ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ. (ವಿವರವನ್ನು ಅನುಬಂಧ-4ರಲ್ಲಿ ಒದಗಿಸಿದೆ). |

ಸಂಖ್ಯೆ: HORTI 58 HGM 2021

(ಆರ್.ಶಂಕರ್)
ತೋಟಗಾರಿಕೆ ಮತ್ತು ರೇಷ್ಮೆ ಸಚಿವರು

# ಕರ್ನಾಟಕ ವಿಧಾನಸಭೆ

**ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 1160**
**ಮಾನ್ಯ ಸದಸ್ಯರ ಹೆಸರು : ಶ್ರೀ.ಅಜಯ್ ಧರ್ಮಸಿಂಗ್ ಡಾ|| (ಜೇವರ್ಗಿ)**
**ಉತ್ತರಿಸುವ ಸಚಿವರು : ಮಾನ್ಯ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು**
**ಉತ್ತರಿಸಬೇಕಾದ ದಿನಾಂಕ : 05-02-2021**

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ಹೊರತುಪಡಿಸಿ ರಾಜ್ಯದ ಉಳಿದ ಎಲ್ಲಾ ವಿಧಾನಸಭಾ ಕ್ಷೇತ್ರಗಳಲ್ಲಿ ತೋಟಗಾರಿಕೆ ಇಲಾಖೆಯು ನರ್ಸರಿಗಳನ್ನು ಹೊಂದಿದೆಯೇ; | ಇಲ್ಲ.<br>ರಾಜ್ಯದ 176 ವಿಧಾನ ಸಭಾ ಕ್ಷೇತ್ರಗಳಲ್ಲಿ ಮಾತ್ರ ತೋಟಗಾರಿಕೆ ಇಲಾಖೆಯು ನರ್ಸರಿಗಳನ್ನು ಹೊಂದಿದೆ. |
| ಆ) | ರಾಜ್ಯದಲ್ಲಿ ನರ್ಸರಿಗಳನ್ನು ಹೊಂದಿರುವ ಎಷ್ಟು ವಿಧಾನಸಭಾ ಕ್ಷೇತ್ರಗಳಿವೆ (ಪೂರ್ಣ ಮಾಹಿತಿ ನೀಡುವುದು); | ರಾಜ್ಯದ 176 ವಿಧಾನ ಸಭಾ ಕ್ಷೇತ್ರಗಳಲ್ಲಿ ತೋಟಗಾರಿಕೆ ಇಲಾಖೆಯು ನರ್ಸರಿಗಳನ್ನು ಹೊಂದಿದೆ. (ಮಾಹಿತಿಯನ್ನು ಅನುಬಂಧ-1ರಲ್ಲಿ ನೀಡಲಾಗಿದೆ). |
| ಇ) | ನರ್ಸರಿಗಳಲ್ಲಿ ರೈತರಿಗೆ ಯಾವ ಯಾವ ಜಿಲ್ಲೆಗಳಲ್ಲಿ ಯಾವ ಯಾವ ತೋಟಗಾರಿಕೆ ಸಸಿಗಳನ್ನು ವಿತರಿಸಲಾಗುತ್ತಿದೆ; | ಜಿಲ್ಲಾವಾರು ಮಾಹಿತಿಯನ್ನು ಅನುಬಂಧ-1ರಲ್ಲಿ ನೀಡಲಾಗಿದೆ. |
| ಈ) | ಜೇವರ್ಗಿ ವಿಧಾನಸಭಾ ಕ್ಷೇತ್ರದಲ್ಲಿ ನರ್ಸರಿ ಇಲ್ಲದೆ ರೈತರು ಇಲಾಖೆಯ ಸೌಲಭ್ಯಗಳನ್ನು ಪಡೆಯಲು ತೊಂದರೆಗೊಳಗಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ. | ಜೇವರ್ಗಿ ವಿಧಾನಸಭಾ ಕ್ಷೇತ್ರದಲ್ಲಿ ನರ್ಸರಿ ಇರುವುದಿಲ್ಲ.<br>ಈ ಕ್ಷೇತ್ರದ ರೈತರು ಕಲಬುರಗಿ ತಾಲ್ಲೂಕಿನ ಕೆಸರಟಗಿ ಮತ್ತು ಅಫಜಲಪುರ ತಾಲ್ಲೂಕಿನ ಗುಡೂರು ತೋಟಗಾರಿಕೆ ಕ್ಷೇತ್ರಗಳಿಂದ ಸಸಿ/ಕಸಿಗಳನ್ನು ಖರೀದಿಸುತ್ತಾರೆ. |
| ಉ) | ಹಾಗಿದ್ದಲ್ಲಿ, ಸದರಿ ಮತ ಕ್ಷೇತ್ರದಲ್ಲಿ ನರ್ಸರಿಗಳನ್ನು ತೆರೆಯಲು ಸರ್ಕಾರ ಯಾವ ಕ್ರಮ ಕೈಗೊಳ್ಳಲಿದೆ (ವಿವರ ನೀಡುವುದು)? | ಸದರಿ ಮತ ಕ್ಷೇತ್ರದಲ್ಲಿ ಇಲಾಖೆಯ ವ್ಯಾಪ್ತಿಯಡಿ ಯಾವುದೇ ಜಮೀನು ಇಲ್ಲದೇ ಇರುವುದರಿಂದ ನರ್ಸರಿ ತೆರೆಯಲಾಗಿರುವುದಿಲ್ಲ. |

**ಸಂಖ್ಯೆ: HORTI 57 HGM 2021**

(ಆರ್.ಶಂಕರ್)
ತೋಟಗಾರಿಕೆ ಮತ್ತು ರೇಷ್ಮೆ
ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ವಿಧಾನ ಸಭೆ ಸದಸ್ಯರ ಹೆಸರು | : | ಮಹೇಶ್ ಎನ್ (ಕೊಳ್ಳೇಗಾಲ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1054 |
| ಉತ್ತರಿಸಬೇಕಾದ ದಿನಾಂಕ | : | ದಿನಾಂಕ:05-02-2021 |
| ಉತ್ತರಿಸುವ ಸಚಿವರು | : | ಮಾನ್ಯ ನಗರಾಭಿವೃದ್ಧಿ ಸಚಿವರು |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಳ್ಳೇಗಾಲ ನಗರದಲ್ಲಿ ನಗರೋತ್ಥಾನ ಯೋಜನೆಯ 3ನೇ ಹಂತದ ಕಾಮಗಾರಿಗಳು ನಿಧಾನ ಗತಿಯಲ್ಲಿ ಸಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಕಾಮಗಾರಿಗಳು ವಿಳಂಬವಾಗಿ ಸಾಗಲು ಕಾರಣಗಳೇನು; | ನಗರೋತ್ಥಾನ (ಮುನಿಸಿಪಾಲಿಟಿ)-3ರ ಯೋಜನೆಯಡಿ ಕೊಳ್ಳೇಗಾಲ ನಗರಸಭೆ ವ್ಯಾಪ್ತಿಯಲ್ಲಿ ರಸ್ತೆ ಮತ್ತು ಚರಂಡಿ ಅಭಿವೃದ್ಧಿಪಡಿಸುವ ಕಾಮಗಾರಿಗಳಿಗೆ ಅಂದಾಜು ಮೊತ್ತ ಒಟ್ಟು ರೂ. 18.45 ಕೋಟಿಗಳಿಗೆ ಟೆಂಡರ್ ಕರೆಯಲಾಗಿರುತ್ತದೆ. ಸದರಿ ಟೆಂಡರ್‌ನಲ್ಲಿ 20 ಕಾಮಗಾರಿಗಳನ್ನು ಪ್ಯಾಕೇಜ್ ಮಾಡಿ ಅನುಷ್ಠಾನಗೊಳಿಸಲು ಗುತ್ತಿಗೆದಾರರಾದ ಶ್ರೀ ಕೆ.ಸಿ. ದೊಡ್ಡ ರಂಗಯ್ಯ ರವರಿಗೆ ದಿನಾಂಕ:15.06.2018 ರಂದು ರೂ.19.15 ಕೋಟಿಗಳಿಗೆ ಟೆಂಡರ್ ವಹಿಸಲಾಗಿರುತ್ತದೆ. ಗುತ್ತಿಗೆದಾರರಿಗೆ 18 ತಿಂಗಳು ಕಾಲಾವಧಿ ನೀಡಲಾಗಿರುತ್ತದೆ. ಆದರೆ, ಜನವರಿ-2021 ರ ಅಂತ್ಯದವರೆಗೆ ಅನುಮೋದಿತ 20 ಕಾಮಗಾರಿಗಳ ಪೈಕಿ 06 ಕಾಮಗಾರಿಗಳನ್ನು ನಿರ್ವಹಿಸಲು ಸಾಧ್ಯವಿರುವುದಿಲ್ಲ. ಉಳಿದಂತೆ 14 ಕಾಮಗಾರಿಗಳಲ್ಲಿ 07 ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ ಮತ್ತು 07 ಕಾಮಗಾರಿಗಳನ್ನು ಪೂರ್ಣಗೊಳಿಸಲಾಗಿರುತ್ತದೆ. ಈವರೆಗೂ ಒಟ್ಟಾರೆ ರೂ. 562.17 ಲಕ್ಷಗಳನ್ನು ವೆಚ್ಚ ಮಾಡಲಾಗಿರುತ್ತದೆ.<br><br>ಸದರಿ ಕಾಮಗಾರಿಗಳು ಈ ಕೆಳಕಂಡ ಕಾರಣಗಳಿಂದ ವಿಳಂಬವಾಗಿರುತ್ತದೆ.<br><br>• ಕೊಳ್ಳೇಗಾಲ ನಗರಸಭೆ ವ್ಯಾಪ್ತಿಯಲ್ಲಿ 24*7 ನಿರಂತರ ಸರಬರಾಜು ಯೋಜನೆಯ ಕಾಮಗಾರಿಯನ್ನು ಕೆ.ಯು.ಐ.ಡಿ.ಎಫ್.ಸಿ ವತಿಯಿಂದ ನಿರ್ವಹಿಸಲಾಗಿರುತ್ತದೆ. ಈ ಸಂಬಂಧವಾಗಿ ಕಾಮಗಾರಿಗಳನ್ನು ನಿರ್ವಹಿಸಲು ವಿಳಂಭವಾಗಿರುತ್ತದೆ.<br>• ರೂ. 6.00 ಕೋಟಿಗಳ (ಶೇಕಡ 30 ರಷ್ಟು) ಕಾಮಗಾರಿಗಳನ್ನು ನಿರ್ವಹಿಸಲು ಸ್ಥಳದ ತಕಾರರು ಮತ್ತು ಬೇರೆ ಇಲಾಖೆಯಿಂದ ನಿರ್ವಹಿಸಿರುವುದರಿಂದ ಸದರಿ ಮೊತ್ತದ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಸಾಧ್ಯವಿರುವುದಿಲ್ಲ.<br>• ಗುತ್ತಿಗೆದಾರರು ಕಾಮಗಾರಿಯನ್ನು ಮಂದಗತಿಯಲ್ಲಿ ನಿರ್ವಹಿಸುತ್ತಿರುವುದರಿಂದಾಗಿ, ಈ ಸಂಬಂಧವಾಗಿ ಗುತ್ತಿಗೆದಾರರಿಗೆ ಹಲವು ಬಾರಿ ನೋಟೀಸ್‌ಗಳನ್ನು |

| | | |
|---|---|---|
| | | ನೀಡಲಾಗಿರುತ್ತದೆ ಹಾಗೂ ಗುತ್ತಿಗೆದಾರರ ವಿಳಂಬಕ್ಕೆ ಟೆಂಡರ್ ದಸ್ತಾವೇಜಿನಂತೆ ದಂಡ ವಿಧಿಸಲು ಕ್ರಮವಹಿಸಲಾಗುವುದು.<br><br>ಮುಂದುವರೆದು ಗುತ್ತಿಗೆದಾರರು ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸದೇ ಇದ್ದಲ್ಲಿ, Risk & Cost ಆಧಾರದ ಮೇಲೆ ಟೆಂಡರ್‌ನ್ನು ರದ್ದುಗೊಳಿಸಲು ಕ್ರಮವಹಿಸಲಾಗುವುದು.<br><br>ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಈ ಸಂಬಂಧ ಹಲವು ಸಭೆಗಳನ್ನು ನಡೆಸಲಾಗಿದ್ದು, ಜೂನ್-2021 ರ ವೇಳೆಗೆ ಪೂರ್ಣಗೊಳಿಸುವುದಾಗಿ ಗುತ್ತಿಗೆದಾರರು ತಿಳಿಸಿರುತ್ತಾರೆ. ರೂ. 6.00 ಕೋಟಿಗಳ ಮೊತ್ತದ ಕಾಮಗಾರಿಗಳನ್ನು ಕೈಬಿಟ್ಟು, ಬದಲಿ ಪ್ರಸ್ತಾವನೆಯನ್ನು ನಿಯಮಾನುಸಾರ ತಯಾರಿಸಿ, ಅನುಮೋದನೆಗೆ ಸರ್ಕಾರಕ್ಕೆ ಸಲ್ಲಿಸಲು ಕ್ರಮವಹಿಸಲಾಗುವುದೆಂದು ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯರವರು ತಿಳಿಸಿದ್ದು, ಈ ಬಗ್ಗೆ ಪ್ರಸ್ತಾವನೆ ಸ್ವೀಕೃತವಾದಲ್ಲಿ ಅಗತ್ಯ ಕ್ರಮ ವಹಿಸಲಾಗುವುದು. |
| ಆ) | ಟೆಂಡರ್ ಪ್ರಕ್ರಿಯೆಯಲ್ಲಿ ಸಮಸ್ಯೆಯಾಗಿರುವುದರಿಂದ ಶೀಘ್ರ ಅನುಷ್ಠಾನಕ್ಕೆ ಹಿನ್ನಡೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ಟೆಂಡರ್ ಪ್ರಕ್ರಿಯೆಯಲ್ಲಿ ಯಾವುದೇ ಸಮಸ್ಯೆಯಾಗಿರುವುದಿಲ್ಲ. |
| ಇ) | ಕೊಳ್ಳೇಗಾಲ ನಗರಸಭೆಯ ಕೆಲವು ಬಡಾವಣೆಗಳಲ್ಲಿ ರಸ್ತೆ ಮತ್ತು ಚರಂಡಿಗಳ ವಿಸ್ತರಣೆಗೆ ಹೆಚ್ಚಿನ ಅನುದಾನಕ್ಕೆ ಮನವಿ ಬಂದಿದೆಯೇ; ಬಂದಿದ್ದಲಿಅನುದಾನವನ್ನು ಬಿಡುಗಡೆ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಕೊಳ್ಳೇಗಾಲ ನಗರಸಭೆ ವ್ಯಾಪ್ತಿಯ ರಸ್ತೆ ಮತ್ತು ಚರಂಡಿ ಅಭಿವೃದ್ಧಿ ಕಾಮಗಾರಿಗಳನ್ನು ಸರ್ಕಾರದ ವಿವಿಧ ಯೋಜನೆಗಳಿಂದ ಕೊಳ್ಳೆಗಾಲ ನಗರಸಭೆಗೆ ಮಂಜೂರಾಗುವ ಅನುದಾನದಲ್ಲಿ ಹಂತ ಹಂತವಾಗಿ ಕೈಗೊಳ್ಳಲಾಗುತ್ತಿದೆ. |
| ಈ) | ಪರಿಶಿಷ್ಟ ವರ್ಗದ ಜನರು ಹೆಚ್ಚಾಗಿರುವ ಹಾಗೂ ಪರಿಶಿಷ್ಟ ಜಾತಿ ಮೀಸಲು ವಿಧಾನಸಭಾ ಕ್ಷೇತ್ರ ಕೊಳ್ಳೇಗಾಲ ನಗರಸಭೆಯಲ್ಲಿ ನಗರ ವಿಸ್ತರಣೆಯಿಂದಾಗಿ ಅಸ್ತಿತ್ವಕ್ಕೆ ಬಂದ ಹೊಸ ಬಡಾವಣೆಗಳಿಗೆ ರಸ್ತೆ, ಚರಂಡಿ, (ಯುಜಿಡಿ) ಬೀದಿ ದೀಪ ಮತ್ತು ಕುಡಿಯುವ ನೀರಿನ ವ್ಯವಸ್ಥೆ ಮಾಡಲು ಅಗತ್ಯವಿರುವ ಅನುದಾನವನ್ನು ಈ ಸಾಲಿನಲ್ಲಿಯೇ ಬಿಡುಗಡೆ ಮಾಡಲು ಸರ್ಕಾರ ಕ್ರಮ ಕೈಗೊಳ್ಳುವುದೇ? | ಸರ್ಕಾರದಿಂದ 2016-17ನೇ ಸಾಲಿನಿಂದ ಮಂಜೂರಾಗಿರುವ ನಗರೋತ್ಥಾನ (ಮುನಿಸಿಪಾಲಿಟಿ)-ಹಂತ-3ರ ಯೋಜನೆಯ ಅನುದಾನದಲ್ಲಿ ನಿಗಧಿಪಡಿಸಿರುವ ಮಾರ್ಗಸೂಚಿಗಳಂತೆ ಮೂಲಭೂತ ಸೌಕರ್ಯಗಳನ್ನು ಹಾಗೂ ಅಭಿವೃದ್ಧಿ ಕಾಮಗಾರಿಗಳನ್ನು (ಪ್ರತ್ಯೇಕ ಎಸ್.ಸಿ.ಪಿ-ಟಿ.ಎಸ್.ಪಿ ಘಟಕಗಳಡಿ ಕಾಮಗಾರಿಗಳನ್ನು ನಿಯಮಾನುಸಾರ) ನಗರ ವ್ಯಾಪ್ತಿಯಲ್ಲಿ ಕೈಗೊಳ್ಳಲಾಗುತ್ತಿದೆ. ಕಾಮಗಾರಿಗಳ ಪ್ರಗತಿಗನುಗುಣವಾಗಿ ಅನುದಾನವನ್ನು ಬಿಡುಗಡೆ ಮಾಡಲಾಗುತ್ತಿದೆ. |

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1189 |
| ಸದಸ್ಯರ ಹೆಸರು | : | ಶ್ರೀ ರಾಜೇಗೌಡ ಟಿ.ಡಿ (ಶೃಂಗೇರಿ) |
| ಉತ್ತರಿಸಬೇಕಾದ ದಿನಾಂಕ | : | 05-02-2021 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ ಹಾಗೂ ಸಕ್ಕರೆ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಎಸ್.ಎಫ್.ಸಿ ವಿಶೇಷ ಅನುದಾನದಡಿ ಶೃಂಗೇರಿ ವಿಧಾನಸಭಾ ಕ್ಷೇತ್ರಕ್ಕೆ ಮಂಜೂರಾಗಿದ್ದ ಒಟ್ಟು 5 ಕೋಟಿ ಅನುದಾನವನ್ನು ತಡೆಹಿಡಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ಸರ್ಕಾರದ ಗಮನಕ್ಕೆ ಬಂದಿದೆ.<br><br>ಸರ್ಕಾರವು ಶೃಂಗೇರಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಶೃಂಗೇರಿ ಪಟ್ಟಣ ಪಂಚಾಯಿತಿಗೆ ರೂ.1.00 ಕೋಟಿ, ನರಸಿಂಹರಾಜಪುರ ಪಟ್ಟಣ ಪಂಚಾಯಿತಿಗೆ ರೂ.2.00 ಕೋಟಿ ಹಾಗೂ ಕೊಪ್ಪ ಪಟ್ಟಣ ಪಂಚಾಯಿತಿಗೆ ರೂ.2.00 ಕೋಟಿ ಎಸ್.ಎಫ್.ಸಿ ವಿಶೇಷ ಅನುದಾನವನ್ನು ಸರ್ಕಾರದ ಆದೇಶ ಸಂಖ್ಯೆ: ನಅಇ 03 ಎಸ್‌ಎಫ್‌ಸಿ 2019 ದಿ: 09-01-2019ರನ್ವಯ ಮಂಜೂರು ಮಾಡಿ ಆದೇಶಿಸಲಾಗಿರುತ್ತದೆ.<br><br>ತದನಂತರ, ಆರ್ಥಿಕ ಇಲಾಖೆಯ ನಿರ್ದೇಶನದನ್ವಯ ಸರ್ಕಾರವು ಶೃಂಗೇರಿ ಪಟ್ಟಣ ಪಂಚಾಯಿತಿ, ನರಸಿಂಹರಾಜಪುರ ಪಟ್ಟಣ ಪಂಚಾಯಿತಿ ಹಾಗೂ ಕೊಪ್ಪ ಪಟ್ಟಣ ಪಂಚಾಯಿತಿಗಳಿಗೆ ಮಂಜೂರು ಮಾಡಲಾಗಿದ್ದ ಎಸ್.ಎಫ್.ಸಿ ವಿಶೇಷ ಅನುದಾನದಡಿ ಕೈಗೊಳ್ಳುವ ಕಾಮಗಾರಿಗಳು ಇನ್ನೂ ಆರಂಭವಾಗಬೇಕಿದ್ದ ಹಿನ್ನೆಲೆಯಲ್ಲಿ ಮಂಜೂರು ಮಾಡಲಾದ ಅನುದಾನವನ್ನು ಸರ್ಕಾರದ ಪತ್ರ ಸಂಖ್ಯೆ: ನಅಇ 222 ಎಸ್‌ಎಫ್‌ಸಿ 2019, ದಿನಾಂಕ: 13-09-2019ರನ್ವಯ ತಡೆಹಿಡಿಯಲಾಗಿರುತ್ತದೆ.<br><br>ಈಗಾಗಲೇ ತಡೆ ಹಿಡಿಯಲಾದ ಅನುದಾನದಲ್ಲಿ ಕಾಲಕಾಲಕ್ಕೆ ಹಂತ ಹಂತವಾಗಿ ಅನುದಾನವನ್ನು ಮುಂದುವರೆಸಲು ಕ್ರಮ ಕೈಗೊಳ್ಳಲಾಗಿದ್ದು, ರಾಜ್ಯ ಆರ್ಥಿಕ ಸಂಪನ್ಮೂಲವನ್ನು ಪರಿಗಣಿಸಿ, ತಡೆ ಹಿಡಿಯಲಾದ ಮೊತ್ತವನ್ನು ಹಂತ ಹಂತವಾಗಿ ಬಿಡುಗಡೆಗೊಳಿಸಲು ಕ್ರಮವಹಿಸಲಾಗುತ್ತಿದೆ. |
| ಆ) | ಹಾಗಿದ್ದಲ್ಲಿ, ಮಂಜೂರಾಗಿದ್ದ ಅನುದಾನವನ್ನು ತಡೆ ಹಿಡಿಯಲು ಕಾರಣವೇನು; | |
| ಇ) | ತಡೆ ಹಿಡಿದಿರುವ ಅನುದಾನವನ್ನು ಬಿಡುಗಡೆ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಹಾಗಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಬಿಡುಗಡೆ ಮಾಡಲಾಗುತ್ತದೆ? (ವಿವರ ನೀಡುವುದು) | |

ಕಡತ ಸಂಖ್ಯೆ:ನಅಇ 51 ಎಸ್.ಎಫ್.ಸಿ 2021

(ಎನ್. ನಾಗರಾಜ್, ಎಂ.ಟಿ.ಬಿ)
ಪೌರಾಡಳಿತ ಹಾಗೂ ಸಕ್ಕರೆ ಸಚಿವರು



# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1099 |
| ಸದಸ್ಯರ ಹೆಸರು | ಶ್ರೀ ಸಿ.ಎನ್. ಬಾಲಕೃಷ್ಣ |
| ಉತ್ತರಿಸಬೇಕಾದ ದಿನಾಂಕ | 05.02.2021. |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಅರಕಲಗೂಡು ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯ ಹೊಳೆನರಸೀಪುರ ತಾಲ್ಲೂಕು, ಹಳ್ಳಿಮೈಸೂರು ಹೋಬಳಿ, ಕಲ್ಲೋಡೆಬಾರೆ ಕಾವಲು ಗ್ರಾಮದ ಸರ್ಕಾರಿ ಗೋಮಾಳ ಜಮೀನಿನ ಸರ್ವೆ ನಂ. 1ರಲ್ಲಿ ಒಟ್ಟು 3–15 ಎಕರೆ ವಿಸ್ತೀರ್ಣದಲ್ಲಿ ಶ್ರೀ ಪುಷ್ಪಗಿರಿ ಎಂ–ಸ್ಯಾಂಡ್ ಅಂಡ್ ಕ್ರಷರ್ ಹಲವಾರು ವರ್ಷಗಳಿಂದ ಅನುಮತಿ ಪಡೆದಿರುವ ಜಮೀನನ್ನು ಹೊರತುಪಡಿಸಿ ಸರ್ಕಾರಿ ಜಮೀನನ್ನು ಕಬಳಿಸಿಕೊಂಡು ಅಕ್ರಮವಾಗಿ ನಡೆಸುತ್ತಿದ್ದು, ಗಣಿ ನಿಯಮಗಳನ್ನು ಗಾಳಿಗೆ ತೂರಿ ಯಾವುದೇ ಪರ್ಮಿಟ್ ಇಲ್ಲದೆ ಹಾಗೂ ಸರ್ಕಾರಕ್ಕೆ ಯಾವುದೇ ಜಿ.ಎಸ್.ಟಿ ಹಾಗೂ ಇತರೆ ತೆರಿಗೆ ಪಾವತಿಸದೆ ಪ್ರತಿನಿತ್ಯ ಕೋಟ್ಯಾಂತರ ರೂ.ಗಳ ಮೊತ್ತದ ಎಂ.ಸ್ಯಾಂಡ್ ನ್ನು ಸಾಗಿಸುತ್ತಿರುವುದರಿಂದ ಸರ್ಕಾರಕ್ಕೆ ಕೋಟ್ಯಾಂತರ ರೂಪಾಯಿಗಳ ನಷ್ಟವುಂಟಾಗುತ್ತಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; | ಹಾಸನ ಜಿಲ್ಲೆ, ಹೊಳೆನರಸೀಪುರ ತಾಲ್ಲೂಕು, ಹಳ್ಳಿಮೈಸೂರು ಹೋಬಳಿ, ಕಲ್ಲೋಡೆಬೋರೆಕಾವಲ್ ಗ್ರಾಮದ ಸರ್ವೆ ನಂ. 1/ಪಿ1 ರ 3–15 ಎಕರೆ ಸರ್ಕಾರಿ ಗೋಮಾಳ ಪ್ರದೇಶದಲ್ಲಿ ಶ್ರೀ ಎಂ.ಎ.ರವಿಕುಮಾರ್ ಮೆ॥ ಪುಷ್ಪಗಿರಿ ಸ್ಯಾಂಡ್ ಅಂಡ್ ಕ್ರಷರ್ ಇವರಿಗೆ ದಿನಾಂಕ 07.06.2017 ರಿಂದ 20 ವರ್ಷಗಳ ಅವಧಿಗೆ ಕಲ್ಲುಗಣಿ ಗುತ್ತಿಗೆ ಸಂಖ್ಯೆ 538 ನ್ನು ಮಂಜೂರು ಮಾಡಲಾಗಿರುತ್ತದೆ.<br><br>ಶ್ರೀ ಎಂ.ಎ.ರವಿಕುಮಾರ್, ಮೆ॥ ಪುಷ್ಪಗಿರಿ ಸ್ಯಾಂಡ್ ಅಂಡ್ ಕ್ರಷರ್ ರವರಿಗೆ ಹಾಸನ ಜಿಲ್ಲೆ, ಹೊಳೆನರಸೀಪುರ ತಾಲ್ಲೂಕು, ಕಲ್ಲೋಡೆ ಬೋರೆ ಕಾವಲು ಗ್ರಾಮದ ಸ.ನಂ. 1/ಪಿ1 ರಲ್ಲಿ 2–20ಎಕರೆ ಪ್ರದೇಶದಲ್ಲಿ ಸ್ಟೋನ್ ಕ್ರಷರ್ ಕಾರ್ಯಾಚರಣೆಗೆ ದಿನಾಂಕ 28.03.2017 ರಿಂದ ಜಾರಿಗೆ ಬರುವಂತೆ 05 ವರ್ಷಗಳ ಅವಧಿಗೆ ಕ್ರಷರ್ ಲೈಸೆನ್ಸ್ ಮಂಜೂರು ಮಾಡಲಾಗಿರುತ್ತದೆ.<br><br>ಕಲ್ಲುಗಣಿ ಗುತ್ತಿಗೆದಾರರು ವಾಣಿಜ್ಯ ತೆರಿಗೆ ಇಲಾಖೆಯಿಂದ ಜಿ.ಎಸ್.ಟಿ. ನಂಬರ್ 29 ALPPR4191K2Z6 ನ್ನು ಪಡೆದಿದ್ದು, ಕ್ರಷರ್ ಘಟಕವನ್ನು ಗಣಿ ಮತ್ತು ಭೂವಿಜ್ಞಾನ ಇಲಾಖೆಯ Integrated Lease Management System ತಂತ್ರಾಂಶದಲ್ಲಿ ನೋಂದಾಯಿಸಲಾಗುತ್ತದೆ.<br><br>ಕಲ್ಲುಗಣಿ ಗುತ್ತಿಗೆ ಸಂಖ್ಯೆ 538 ನ್ನು ದಿನಾಂಕ 20.02.2020 ಹಾಗೂ 23.06.2020 ರಂದು ಜಂಟಿ ಸ್ಥಳ ತನಿಖೆ ನಡೆಸಲಾಗಿದ್ದು, ಕಲ್ಲುಗಣಿ ಗುತ್ತಿಗೆದಾರರು ಗುತ್ತಿಗೆ ಪ್ರದೇಶ ಹೊರತುಪಡಿಸಿ, ಒತ್ತುವರಿ ಮಾಡಿ ಗಣಿಗಾರಿಕೆ ನಡೆಸಿರುವುದು ಕಂಡುಬಂದಿರುವುದಿಲ್ಲ.<br><br>ಕಲ್ಲುಗಣಿ ಗುತ್ತಿಗೆ ಸಂಖ್ಯೆ 538ರ ಪ್ರದೇಶವನ್ನು 2018–19 ನೇ ಸಾಲಿನಲ್ಲಿ ಡ್ರೋಣ್ ಉಪಕರಣದಿಂದ ಸರ್ವೆ ಕಾರ್ಯ ನಡೆಸಲಾಗಿದ್ದು, ಗುತ್ತಿಗೆದಾರರು ಸಂಚಿತ ಆಡಿಟ್ ಪ್ರಮಾಣಕ್ಕಿಂತ ಅಧಿಕವಾಗಿ 7377 ಮೆಟ್ರಿಕ್ ಟನ್ ಕಟ್ಟಡ ಕಲ್ಲನ್ನು ಖನಿಜ ರವಾನೆ– |

| | | |
|---|---|---|
| | | -ಪರವಾನಗಿ ಇಲ್ಲದೆ ನಿಯಮ ಉಲ್ಲಂಘಿಸಿ ಸಾಗಾಣಿಕೆ ಮಾಡಿರುವುದು ಕಂಡುಬಂದಿದ್ದು, ಸದರಿ ಪ್ರಮಾಣಕ್ಕೆ ರಾಜಧನದ 05 ಪಟ್ಟು ದಂಡದ ಮೊತ್ತ ರೂ.22,13,100/-ಗಳನ್ನು ವಿಧಿಸಿ ಪಾವತಿಸುವಂತೆ ದಿನಾಂಕ 25.10.2019, 15.02.2020 ಹಾಗೂ 09.09.2020 ರಂದು ನೋಟೀಸ್ ಜಾರಿ ಮಾಡಲಾಗಿರುತ್ತದೆ.<br>ಸರ್ಕಾರದ ಆದೇಶ ಸಂಖ್ಯೆ ಸಿಐ 70 ಎಂಜಿಎಸ್ 2020, ದಿನಾಂಕ 10.09.2020 ರಂತೆ, ಚಾಲ್ತಿಯಲ್ಲಿರುವ ಕಲ್ಲುಗಣಿ ಗುತ್ತಿಗೆ ಪ್ರದೇಶಗಳಲ್ಲಿ ಗುತ್ತಿಗೆದಾರರು ಸಂಚಿತ ಆಡಿಟ್ ಪ್ರಮಾಣಕ್ಕಿಂತ ಅಧಿಕವಾಗಿ ತೆಗೆದಿರುವ ಉಪಖನಿಜದ ಪ್ರಮಾಣವನ್ನು ಡ್ರೋಣ್ / ಡಿಜಿಪಿಎಸ್ ಸಮೀಕ್ಷೆಯಿಂದ ಅಂದಾಜಿಸಿ, ಕ್ವಾರಿ ಪಿಟ್ಟಿನ Reduced Level ಗಳನ್ನು ನಿಗದಿಪಡಿಸುವ ಸಂಬಂಧ 2020-21 ನೇ ಸಾಲಿನಲ್ಲಿ ಡ್ರೋಣ್ / ಡಿಜಿಪಿಎಸ್ ಸರ್ವೆ ಕಾರ್ಯ ನಡೆಸುವ ಸೇವಾದಾರರನ್ನು ಇ-ಟೆಂಡರ್ ಮೂಲಕ ಆಯ್ಕೆ ಮಾಡಲು ದಿನಾಂಕ 18.12.2020 ರಂದು ನಡೆದ ಜಿಲ್ಲಾ ಟಾಸ್ಕ್ ಫೋರ್ಸ್ ಸಮಿತಿ ಸಭೆಯಲ್ಲಿ ಚರ್ಚಿಸಿ, ಟೆಂಡರ್ ಆಹ್ವಾನ ಸಮಿತಿ ಹಾಗೂ ಟೆಂಡರ್ ಮೌಲ್ಯಮಾಪನ ಸಮಿತಿಯನ್ನು ರಚನೆ ಮಾಡಲಾಗಿರುತ್ತದೆ.<br>ಅದರಂತೆ ಡ್ರೋಣ್ / ಡಿಜಿಪಿಎಸ್ ಸರ್ವೆ ಕಾರ್ಯ ನಡೆಸುವ ಸೇವಾದಾರರನ್ನು ಇ-ಟೆಂಡರ್ ಮೂಲಕ ಆಯ್ಕೆ ಮಾಡಲು ಇ-ಟೆಂಡರ್ ಪ್ರಕ್ರಿಯೆ ಕೈಗೊಳ್ಳಲಾಗುತ್ತಿದೆ. ಡ್ರೋಣ್ ಸರ್ವೆ ಕಾರ್ಯ ಕೈಗೊಂಡು ವರದಿಯನ್ನು ಪಡೆದು ಪರಿಶೀಲಿಸಿ, ಪರವಾನಗಿ ಪ್ರಮಾಣಕ್ಕಿಂತ ಹೆಚ್ಚುವರಿಯಾಗಿ ಕಟ್ಟಡ ಕಲ್ಲು ಸಾಗಾಣಿಕೆ ಮಾಡಿರುವ ಬಗ್ಗೆ ದೃಢಪಟ್ಟಲ್ಲಿ ನಿಯಮಾನುಸಾರ ಕ್ರಮವಹಿಸಲಾಗುವುದು. |
| ಆ) | ಶ್ರೀ ಪುಷ್ಪಗಿರಿ ಎಂ-ಸ್ಯಾಂಡ್ ಅಂಡ್ ಕ್ರಷರ್ ವಿರುದ್ಧ ಗಣಿಗಾರಿಕೆಯಲ್ಲಿ ರಿಗ್ ಬ್ಲಾಸ್ಟಿಂಗ್ ಮಾಡಿ ಅಕ್ಕ-ಪಕ್ಕದ ಗ್ರಾಮಗಳಲ್ಲಿನ ಮನೆಗಳು ಬಿರುಕು ಬಿಟ್ಟಿರುವುದರಿಂದ ಸದರಿ ಕ್ರಷರ್ ಗೆ ನೀಡಿರುವ ಎನ್.ಓ.ಸಿ.ಯನ್ನು ಕೂಡಲೇ ರದ್ದುಪಡಿಸುವಂತೆ ಸಾರ್ವಜನಿಕರಿಂದ ಹಲವಾರು ದೂರುಗಳು ಹಾಸನ | ಶ್ರೀ ಎಂ.ಎ.ರವಿಕುಮಾರ್ ಬಿನ್ ಅಣ್ಣೇಗೌಡ, ರವರಿಗೆ ಹೊಳೆನರಸೀಪುರ ತಾಲ್ಲೂಕು ಕಲ್ಲೋಡೆಬೋರೆ ಕಾವಲ್ ಗ್ರಾಮದ ಸರ್ವೆ ನಂ. 1/ಪಿ1ರ 3-15ಎಕರೆ ಪ್ರದೇಶದಲ್ಲಿ ಕಂದಾಯ ಇಲಾಖೆ ಹಾಗೂ ಅರಣ್ಯ ಇಲಾಖೆಗಳಿಂದ ನಿರಾಕ್ಷೇಪಣಾ ಪತ್ರಗಳನ್ನು ಪಡೆದು ಮಂಜೂರು ಮಾಡಿರುವ ಕಟ್ಟಡ ಕಲ್ಲುಗಣಿ ಗುತ್ತಿಗೆ ಸಂಖ್ಯೆ 538ನ್ನು ದಿನಾಂಕ 07.06.2017 ರಿಂದ 20 ವರ್ಷಗಳಿಗೆ ಮಂಜೂರು ಮಾಡಿದ್ದು, ಸದರಿ ಕಲ್ಲುಗಣಿ ಗುತ್ತಿಗೆದಾರರು ಕಂದಾಯ ಇಲಾಖೆಯ ಅನುಮತಿ ನೀಡಿರುವ ಪ್ರದೇಶಕ್ಕೆ ಗಡಿ ಉಲ್ಲಂಘನೆ ಮಾಡಿ ಅಕ್ಕಪಕ್ಕದ ಭೂಮಿ ಒತ್ತುವರಿ ಮಾಡಿರುವುದರಿಂದ ಕಲ್ಲುಗಣಿ ಗುತ್ತಿಗೆ- |



# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1171 |
| ಸದಸ್ಯರ ಹೆಸರು | ಶ್ರೀ ಈಶ್ವರ್ ಖಂಡ್ರೆ |
| ಉತ್ತರಿಸಬೇಕಾದ ದಿನಾಂಕ | 05.02.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯಾದ್ಯಂತ ಎಷ್ಟು ಕಲ್ಲು ಗಣಿಗಾರಿಕೆಗಳಿಗೆ ಲೈಸೆನ್ಸ್ ನೀಡಲಾಗಿದೆ. (ಜಿಲ್ಲಾವಾರು ವಿವರ ಒದಗಿಸುವುದು) | (ಕೆಳಗಿನ ಕೋಷ್ಟಕ ನೋಡಿ) ಜಿಲ್ಲಾವಾರು ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ. |
| ಆ) | ರಾಜ್ಯಾದ್ಯಂತ ಅಕ್ರಮವಾಗಿ ನೂರಾರು ಸ್ಟೋನ್ ಕ್ರಷರ್‌ಗಳು ಕಾರ್ಯ ನಿರ್ವಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುತ್ತದೆ. |
| ಇ) | ಬಂದಿದ್ದಲ್ಲಿ ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಕಳೆದ ಮೂರು ವರ್ಷಗಳಲ್ಲಿ ರಾಜ್ಯದಲ್ಲಿ ಲೈಸೆನ್ಸ್ ಪಡೆಯದೆ ಸ್ಟೋನ್ ಕ್ರಷರ್ ಚಾಲನೆ ಮಾಡುತ್ತಿದ್ದ 313 ಪ್ರಕರಣಗಳನ್ನು ಪತ್ತೆ ಹಚ್ಚಿದ್ದು, ಕರ್ನಾಟಕ ಕಲ್ಲುಮಡಿ ಮಾಡುವ ಘಟಕಗಳ ನಿಯಂತ್ರಣ ಅಧಿನಿಯಮ, 2011 ಮತ್ತು ನಿಯಮಗಳು, 2012 ರಂತೆ 42 ಪ್ರಕರಣಗಳಲ್ಲಿ ಮೊಕದ್ದಮೆಗಳನ್ನು ದಾಖಲಿಸಲಾಗಿದ್ದು, 271 ಪ್ರಕರಣಗಳಲ್ಲಿ, ರೂ.183.9 ಲಕ್ಷಗಳ ಮೊತ್ತದ ದಂಡವನ್ನು ಸಂಗ್ರಹ ಮಾಡಲಾಗಿರುತ್ತದೆ. |

ಅ) ಉತ್ತರದ ಕೋಷ್ಟಕ:

| ಕ್ರ.ಸಂ. | ಉಪ ಖನಿಜ ಗಣಿ ಗುತ್ತಿಗೆಗಳ ಸಂಖ್ಯೆ | | ವಿಸ್ತೀರ್ಣ (ಎಕರೆಗಳಲ್ಲಿ) |
|---|---|---|---|
| 1 | ನಿರ್ದಿಷ್ಟಪಡಿಸಿದ | 517 | 2353.06 |
| 2 | ನಿರ್ದಿಷ್ಟವಲ್ಲದ | 2493 | 10567 |

ಸಂಖ್ಯೆ ಸಿಐ 61 ಎಂಎಂಎನ್ 2021

(ಮುರುಗೇಶ್ ಆರ್. ನಿರಾಣಿ)
ಗಣಿ ಮತ್ತು ಭೂವಿಜ್ಞಾನ ಸಚಿವರು.

## ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1029 |
| ಸದಸ್ಯರ ಹೆಸರು | : | ಶ್ರೀ ಅಬ್ಬಯ್ಯ ಪ್ರಸಾದ್ (ಹುಬ್ಬಳ್ಳಿ-ಧಾರವಾಡ ಪೂರ್ವ) |
| ಉತ್ತರಿಸುವ ದಿನಾಂಕ | : | 05-02-2021 |
| ಉತ್ತರಿಸಬೇಕಾದವರು | : | ನಗರಾಭಿವೃದ್ಧಿ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| 1. | ಹುಬ್ಬಳ್ಳಿ-ಧಾರವಾಡ ನಗರಾಭಿವೃದ್ಧಿ ಪ್ರಾಧಿಕಾರ ವ್ಯಾಪ್ತಿಯಲ್ಲಿ ಕಳೆದ ಮೂರು ವರ್ಷಗಳಲ್ಲಿ ಅನಧಿಕೃತವಾಗಿ ನಿರ್ಮಾಣ ಮಾಡಿರುವ ಬಡಾವಣೆಗಳೆಷ್ಟು (ಪಟ್ಟಿ ಸಹಿತ ವಿವರ ನೀಡುವುದು. | ಹುಬ್ಬಳ್ಳಿ-ಧಾರವಾಡ ನಗರಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯಲ್ಲಿ ಅನಧೀಕೃತ ಬಡಾವಣೆಗಳ ಬಗ್ಗೆ ಸರ್ವೆಕ್ಷಣ ಮಾಡಲಾಗುತ್ತಿದ್ದು, ಕಳೆದ 03 ವರ್ಷಗಳಲ್ಲಿ ಹುಬ್ಬಳ್ಳಿ ಹಾಗೂ ಧಾರವಾಡ ನಗರದಲ್ಲಿ ಒಟ್ಟು 24 ಅನಧೀಕೃತ ಬಡಾವಣೆಗಳನ್ನು ಗುರುತಿಸಲಾಗಿದೆ. ಸದರಿ ಬಡಾವಣೆಗಳ ವಿವರ ಈ ಕೆಳಕಂಡಂತೆ ಇರುತ್ತದೆ. |

| ಕ್ರ.ಸಂ. | ಗ್ರಾಮ | ಬಡಾವಣೆ ಸಂಖ್ಯೆ |
|---|---|---|
| 1 | ಎತ್ತಿನಗುಡ್ಡ | 02 |
| 2 | ಗುಲಗಂಜಿಕೊಪ್ಪ | 01 |
| 3 | ಮಾಳಾಪೂರ | 02 |
| 4 | ಉಣಕಲ್ | 01 |
| 5 | ಅಯೋಧ್ಯ | 01 |
| 6 | ಹೊಸಯಲ್ಲಾಪೂರ | 02 |
| 7 | ರಾಯನಾಳ | 01 |
| 8 | ಅಗ್ರಹಾರ ತಿಮ್ಮಸಾಗರ | 02 |
| 9 | ಗಬ್ಬೂರ | 02 |
| 10 | ಕೆಲಗೇರಿ | 02 |
| 11 | ಧಾರವಾಡ(ವಿ) | 01 |
| 12 | ಯತ್ತಿನಗುಡ್ಡ | 02 |
| 13 | ಅತ್ತಿಕೊಳ್ಳ | 01 |
| 14 | ನವಲೂರ | 01 |
| 15 | ಬಮ್ಮಾಪೂರ | 02 |
| 16 | ಯಲ್ಲಾಪೂರ (ವಿ) | 01 |
| | ಒಟ್ಟು | 24 |

ಸಂಖ್ಯೆ: ನಅಇ 27 ಎಲ್‌ಎಕ್ಯೂ 2021(ಇ-ಕಡತ)

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು

# ಕರ್ನಾಟಕ ವಿಧಾನಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1040**
**ಮಾನ್ಯ ಸದಸ್ಯರ ಹೆಸರು : ಶ್ರೀ.ಬಸವರಾಜ್ ದಢೆಸುಗೂರ್ (ಕನಕಗಿರಿ)**
**ಉತ್ತರಿಸುವ ಸಚಿವರು : ಮಾನ್ಯ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು**
**ಉತ್ತರಿಸಬೇಕಾದ ದಿನಾಂಕ : 05-02-2021**

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಲ್ಯಾಣ ಕರ್ನಾಟಕದ ಭಾಗದ 10 ಜಿಲ್ಲೆಗಳಿಗೆ ಅನುಕೂಲವಾಗುವ ದೃಷ್ಟಿಯಿಂದ ಡಾ: ನಂಜುಂಡಪ್ಪ ವರದಿಯನ್ವಯ ಅತೀ ಹಿಂದುಳಿದ ಪ್ರದೇಶವಾದ ಕನಕಗಿರಿ ತಾಲ್ಲೂಕಿನ, ಶಿರವಾರ ಗ್ರಾಮದ 200 ಎಕರೆ ಪ್ರದೇಶದಲ್ಲಿ ಹೈಟೆಕ್ ತೋಟಗಾರಿಕೆ ಟೆಕ್ನಾಲಜಿ ಪಾರ್ಕ್ ನಿರ್ಮಾಣ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಕನಕಗಿರಿ ತಾಲ್ಲೂಕಿನ, ಶಿರವಾರ ಗ್ರಾಮದ 200 ಎಕರೆ ಪ್ರದೇಶದಲ್ಲಿ ಹೈಟೆಕ್ ತೋಟಗಾರಿಕೆ ಟೆಕ್ನಾಲಜಿ ಪಾರ್ಕ್ ನಿರ್ಮಾಣ ಮಾಡುವ ಪ್ರಸ್ತಾವನೆ ಸರ್ಕಾರದ ಗಮನಕ್ಕೆ ಬಂದಿದ್ದು, ಪರಿಶೀಲನೆ ಹಂತದಲ್ಲಿರುತ್ತದೆ. |
| ಆ) | ಹಾಗಿದ್ದಲ್ಲಿ, ಈ ಬಗ್ಗೆ ಸರ್ಕಾರವು ತೆಗೆದುಕೊಂಡ ಕ್ರಮಗಳೇನು? | |

ಸಂಖ್ಯೆ: HORTI 66 HGM 2021

(ಆರ್.ಶಂಕರ್)
ತೋಟಗಾರಿಕೆ ಮತ್ತು ರೇಷ್ಮೆ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1116
ವಿಧಾನ ಸಭೆಯ ಸದಸ್ಯರ ಹೆಸರು : ಶ್ರೀ ನಾಗೇಂದ್ರ ಎಲ್. (ಚಾಮರಾಜ)
ಉತ್ತರಿಸುವವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು
ಉತ್ತರಿಸುವ ದಿನಾಂಕ : 05.02.2021
ವಿಷಯ : ಫಾಲ್‌ಕಾನ್ ಕಾರ್ಖಾನೆ ಮುಚ್ಚಿರುವುದು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಮೈಸೂರಿನಲ್ಲಿರುವ ಫಾಲ್‌ಕಾನ್ ಕಾರ್ಖಾನೆಯನ್ನು ಮುಚ್ಚಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಕಾರ್ಖಾನೆ ಮುಚ್ಚಿರುವುದಕ್ಕೆ ಕಾರಣವೇನು; | ಹೌದು, ಆಡಳಿತ ಮಂಡಳಿಯ ನಿರ್ಲಕ್ಷತೆಯಿಂದ ಮುಚ್ಚಿರುತ್ತದೆ. |
| ಆ | ಈ ಕಾರ್ಖಾನೆಯನ್ನು ಮುಚ್ಚಿರುವುದರಿಂದ ಸಾವಿರಾರು ಕಾರ್ಮಿಕರು ಕೆಲಸವಿಲ್ಲದೆ ಬೀದಿ ಪಾಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ; ಬಂದಿದ್ದಲ್ಲಿ, ಕಾರ್ಮಿಕರಿಗೆ ಯಾವ ಪರಿಹಾರ ನೀಡಲಾಗಿದೆ; | ಈ ಕಾರ್ಖಾನೆಯನ್ನು ಮುಚ್ಚಿರುವುದರಿಂದ 555 ಮಂದಿ ಕಾರ್ಮಿಕರು ಕೆಲಸ ಕಳೆದುಕೊಂಡಿರುತ್ತಾರೆ.<br>ಇಲಾಖೆಯಲ್ಲಿರುವ ಮಾಹಿತಿಯಂತೆ, ಸದರಿ ಪ್ರಕರಣವು NCLT ಯಲ್ಲಿದ್ದು, NCLT ಯು ಕಂಪನಿಯನ್ನು Liquidate ಮಾಡಲು ಆದೇಶಿಸಿದ್ದು, ಅದರಂತೆ Official Liquidator ಮುಂದಿನ ಕ್ರಮ ತೆಗೆದುಕೊಳ್ಳುತ್ತಿದ್ದಾರೆ. |
| ಇ | ಈ ಕಾರ್ಖಾನೆಯನ್ನು ಪುನರ್ ಪ್ರಾರಂಭಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ? (ಇಲ್ಲದಿದ್ದಲ್ಲಿ ಕಾರಣವೇನು) | |

ಸಿಐ 59 ಎಸ್‌ಪಿಐ 2021

(ಜಗದೀಶ್ ಶೆಟ್ಟರ)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1098
2. ಸದಸ್ಯರ ಹೆಸರು : ಶ್ರೀ ಬಾಲಕೃಷ್ಣ ಸಿ.ಎನ್. (ಶ್ರವಣಬೆಳಗೊಳ)
3. ಉತ್ತರಿಸುವ ದಿನಾಂಕ : 05.02.2021
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಹಾಸನ ಜಿಲ್ಲೆಯಲ್ಲಿ ಇರುವ ಕೈಗಾರಿಕಾ ವಲಯಗಳು ಎಷ್ಟು ಹಾಗೂ ಕೈಗಾರಿಕಾ ವಲಯದ ಒಟ್ಟು ವಿಸ್ತೀರ್ಣ ಎಷ್ಟು; (ವಿಧಾನಸಭಾ ಕ್ಷೇತ್ರವಾರು ಸಂಪೂರ್ಣ ಮಾಹಿತಿ ನೀಡುವುದು) | ಹಾಸನ ಜಿಲ್ಲೆಯಲ್ಲಿ ಒಟ್ಟು 10 ಕೈಗಾರಿಕಾ ವಲಯಗಳಿದ್ದು, ಒಟ್ಟು 2594.28 ಎಕರೆ ವಿಸ್ತೀರ್ಣವಿರುತ್ತದೆ.<br><br>ವಿಧಾನಸಭಾ ಕ್ಷೇತ್ರವಾರು ಸಂಪೂರ್ಣ ಮಾಹಿತಿಯನ್ನು ಅನುಬಂಧ-1 ರಲ್ಲಿ ಒದಗಿಸಿದೆ. |
| (ಆ) | ಕೈಗಾರಿಕಾ ವಲಯವನ್ನು ಅಭಿವೃದ್ಧಿಪಡಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | 10 ಕೈಗಾರಿಕಾ ವಲಯಗಳ ಪೈಕಿ 7 ಕೈಗಾರಿಕಾ ವಲಯಗಳನ್ನು ಅಭಿವೃದ್ಧಿಪಡಿಸಿದ್ದು, ಮೂಲ ಭೂತ ಸೌಕರ್ಯಗಳನ್ನು ಕಲ್ಪಿಸಲಾಗಿದೆ.<br><br>1 ಕೈಗಾರಿಕಾ ವಲಯದ ಲೇಔಟ್ ನಿರ್ಮಾಣ ಮಾಡಬೇಕಾಗಿರುತ್ತದೆ.<br><br>ಉಳಿದ 2 ಕೈಗಾರಿಕಾ ವಲಯಗಳ ಪೈಕಿ ಉಪಬಡಾವಣೆ-3 ರಲ್ಲಿ ಚಿಕ್ಕಬಸವನಹಳ್ಳಿ ಗ್ರಾಮಸ್ಥರು ಮಾನ್ಯ ಕರ್ನಾಟಕ ಉಚ್ಚ ನ್ಯಾಯಲಯದಲ್ಲಿ ಪ್ರಕರಣ ದಾಖಲಿಸಿರುತ್ತಾರೆ. |

| | | |
|---|---|---|
| | | ಉಪಬಡಾವಣೆ-4 ರಲ್ಲಿ ಕೌಶಿಕ ಗ್ರಾಮಸ್ಥರು ಗ್ರಾಮಕ್ಕೆ ಗೋಮಾಳದ ಜಮೀನು ಬಿಟ್ಟುಕೊಡುಂತೆ ಕೋರಿ ಅಭಿವೃದ್ಧಿ ಕಾಮಗಾರಿಗಳಗೆ ಅಡ್ಡಿಪಡಿಸಿದ ಕಾರಣ, ಮೂಲ ಭೂತ ಸೌಕರ್ಯಗಳನ್ನು ಕಲ್ಪಿಸಿರುವುದಿಲ್ಲ. |
| (ಇ) | ಕೈಗಾರಿಕಾ ವಲಯಗಳಲ್ಲಿ ಇದುವರೆವಿಗೂ ಹಂಚಿಕೆಯಾಗದೆ ಉಳದಿರುವ ನಿವೇಶನಗಳೆಷ್ಟು; (ವಿಧಾನಸಭಾ ಕ್ಷೇತ್ರವಾರು ಸಂಪೂರ್ಣ ಮಾಹಿತಿ ನೀಡುವುದು) | ಕೈಗಾರಿಕಾ ವಲಯದಲ್ಲಿ ಒಟ್ಟು 34 ನಿವೇಶನಗಳು ಇದುವರೆವಿಗೂ ಹಂಚಿಕೆಯಾಗದೆ ಬಾಕಿ ಉಳದಿರುತ್ತವೆ.<br>ವಿಧಾನಸಭಾ ಕ್ಷೇತ್ರವಾರು ಸಂಪೂರ್ಣ ಮಾಹಿತಿಯನ್ನು ಅನುಬಂಧ-2 ರಲ್ಲಿ ಒದಗಿಸಿದೆ. |
| (ಈ) | ಕೈಗಾರಿಕಾ ವಲಯಗಳನ್ನು ಅಭಿವೃದ್ಧಿಪಡಿಸಲು ನಿರುದ್ಯೋಗಿ ಯುವಕ / ಯುವತಿಯರಿಗೆ ಉದ್ಯೋಗ ನೀಡುವ ಸಂಬಂಧ ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ನಿವೇಶನ ಹಂಚಿಕೆ ಪಡೆದ ಕೈಗಾರಿಕಾ ಘಟಕಗಳು ಕಡ್ಡಾಯವಾಗಿ ಸ್ಥಳೀಯರಿಗೆ ಮತ್ತು ಕನ್ನಡಿಗರಿಗೆ ಉದ್ಯೋಗವನ್ನು ಒದಗಿಸುವ ಷರತ್ತುಗಳನ್ನೊಳಪಟ್ಟ ಒಡಂಬಡಿಕೆಯಂತೆ ಉದ್ಯೋಗಾವಕಾಶವನ್ನು ಕಲ್ಪಿಸಲಾಗುತ್ತಿದೆ. |
| (ಉ) | ಕೈಗಾರಿಕಾ ವಲಯದಲ್ಲಿ ಎಷ್ಟು ಕೈಗಾರಿಕೆಗಳು ಕಾರ್ಯನಿರ್ವಹಿಸುತ್ತಿವೆ; (ಸಂಪೂರ್ಣ ಮಾಹಿತಿ ನೀಡುವುದು) | ಕೈಗಾರಿಕಾ ವಲಯದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕೈಗಾರಿಕಾ ಘಟಕಗಳ ವಿವರಗಳನ್ನು ಅನುಬಂಧ-3 ರಲ್ಲಿ ಒದಗಿಸಿದೆ. |
| (ಊ) | ಕೈಗಾರಿಕಾ ವಲಯದಲ್ಲಿ ನಿವೇಶನ ಹಂಚಿಕೆಯಾಗಿ ಕೈಗಾರಿಕಾ ಘಟಕಗಳನ್ನು ಸ್ಥಾಪನೆ ಮಾಡದೆ ಇರುವವರ ಸಂಖ್ಯೆ | ಒಟ್ಟು 112 ಕೈಗಾರಿಕಾ ಘಟಕಗಳು ನಿವೇಶನ ಹಂಚಿಕೆ ಪಡೆದಿದ್ದು, ಈ ಪೈಕಿ 18 ಕೈಗಾರಿಕಾ ಘಟಕಗಳು ಯೋಜನೆಯನ್ನು ಅನುಷ್ಠಾನಗೊಳಸಿರುವುದಿಲ್ಲ. |

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1065
2. ಸದಸ್ಯರ ಹೆಸರು : ಶ್ರೀ ಕೃಷ್ಣಾರೆಡ್ಡಿ ಎಂ
3. ಉತ್ತರಿಸಬೇಕಾದ ದಿನಾಂಕ : 05.02.2021
4. ಉತ್ತರಿಸುವ ಸಚಿವರು : ಸಹಕಾರ ಸಚಿವರು

***

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | 2014-15ನೇ ಸಾಲಿನ ನಬಾರ್ಡ್ ಸಂಸ್ಥೆಯ ಡಬ್ಲ್ಯೂ.ಐ.ಎಫ್ ಯೋಜನೆಯಡಿ ಚಿಕ್ಕಬಳ್ಳಾಪುರ ಜಿಲ್ಲೆ ಚಿಂತಾಮಣಿ ತಾಲ್ಲೂಕಿನ ಮುಖ್ಯ ಕೃಷಿ ಮಾರುಕಟ್ಟೆ ಪ್ರಾಂಗಣದಲ್ಲಿ ಸಿಮೆಂಟ್ ರಸ್ತೆ ಹಾಗೂ ಚರಂಡಿ ಕಾಮಗಾರಿಗಳನ್ನು ಕೈಗೊಳ್ಳಲು ರೂ.483.00 ಲಕ್ಷ ಅನುದಾನವನ್ನು ಮೀಸಲಿರಿಸಿದ್ದು, ಸದರಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದೆಯೇ ; | ಹೌದು, ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದೆ. |
| ಆ | ಕಾಮಗಾರಿಯನ್ನು ಕೈಗೆತ್ತಿಕೊಂಡಿದ್ದಲ್ಲಿ, ಅದು ಯಾವ ಹಂತದಲ್ಲಿದೆ (ವಿವರ ನೀಡುವುದು) ; | ಟೆಂಡರ್ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. |
| ಇ | ಕೈಗೊಳ್ಳದಿದ್ದಲ್ಲಿ, ಇದುವರೆವಿಗೂ ಕಾಮಗಾರಿ ಪ್ರಾರಂಭವಾಗದಿರಲು ಕಾರಣಗಳೇನು ; | ಉದ್ಭವಿಸುವುದಿಲ್ಲ. |
| ಈ | ಕಾಮಗಾರಿಯನ್ನು ಕೈಗೆತ್ತಿಕೊಳ್ಳಲು ಉದಾಸೀನತೆ ತೋರಿದ ಸಂಬಂಧಪಟ್ಟ ಅಧಿಕಾರಿ/ನೌಕರರ ವಿರುದ್ಧ ಕ್ರಮ ಜರುಗಿಸಲಾಗಿದೆಯೇ (ವಿವರ ನೀಡುವುದು) ? | ಉದ್ಭವಿಸುವುದಿಲ್ಲ. |

**ಸಂಖ್ಯೆ:ಸಿಓ 51 ಎಂಆರ್ಇ 2021**

(ಎಸ್.ಟಿ.ಸೋಮಶೇಖರ್)
ಸಹಕಾರ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1092
ಸದಸ್ಯರ ಹೆಸರು : ಶ್ರೀ ಶಿವಾನಂದ ಎಸ್ ಪಾಟೀಲ್ (ಬಸವನಬಾಗೇವಾಡಿ)
ಉತ್ತರಿಸುವ ಸಚಿವರು : ಮಾನ್ಯ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು
ಉತ್ತರಿಸಬೇಕಾದ ದಿನಾಂಕ : 05-02-2021

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಮರುವಿನ್ಯಾಸಗೊಳಿಸಲಾದ ಹವಾಮಾನ ಆಧಾರಿತ ಬೆಳೆ ವಿಮೆ ಯೋಜನೆ ಜಾರಿಯಲ್ಲಿದೆಯೇ; | ಹೌದು. |
| (ಆ) | ರಾಜ್ಯದಲ್ಲಿ ಮರುವಿನ್ಯಾಸಗೊಳಿಸಲಾದ ಹವಾಮಾನ ಬೆಳೆ ವಿಮೆ ಯೋಜನೆಯಡಿಯಲ್ಲಿ, 2019-20 ನೇ ಸಾಲಿಗೆ ಎಷ್ಟು ರೈತರು ವಿಮಾ ಕಂತು ( premium amount) ಭರಿಸಿರುತ್ತಾರೆ ; (ಜಿಲ್ಲಾವಾರು ಮತ್ತು ಬೆಳೆವಾರು ಮಾಹಿತಿಯನ್ನು ಒದಗಿಸುವುದು) | ರಾಜ್ಯದಲ್ಲಿ ಮರುವಿನ್ಯಾಸಗೊಳಿಸಲಾದ ಹವಾಮಾನ ಆಧಾರಿತ ಬೆಳೆ ವಿಮೆ ಯೋಜನೆಯಡಿಯಲ್ಲಿ 2019-20 ನೇ ಸಾಲಿನಲ್ಲಿ ಒಟ್ಟು 1,61,457 ರೈತರು (ಒಂದು ಪ್ರಸ್ತಾವನೆಯಲ್ಲಿ ಒಂದಕ್ಕಿಂತ ಹೆಚ್ಚು ಸರ್ವೆ ನಂಬರ್ ಇರಬಹುದಾಗಿದ್ದು, ಇದರನ್ವಯ ರೈತ ಪ್ರಕರಣಗಳೆಂದು 2,56,490 ಪರಿಗಣಿಸಲಾಗಿರುತ್ತದೆ) ವಿಮಾ ಕಂತು ಭರಿಸಿರುತ್ತಾರೆ.<br>ಜಿಲ್ಲಾವಾರು ಮತ್ತು ಬೆಳೆವಾರು ಮಾಹಿತಿಯನ್ನು ಅನುಬಂಧ-1 ರಲ್ಲಿ ಒದಗಿಸಿದೆ. |
| ಇ) | ಮರುವಿನ್ಯಾಸಗೊಳಿಸಲಾದ ಹವಾಮಾನ ಬೆಳೆ ವಿಮೆ ಯೋಜನೆಯಡಿಯಲ್ಲಿ ವಿಜಯಪುರ ಜಿಲ್ಲೆಯಲ್ಲಿ 2019-20 ನೇ ಸಾಲಿಗೆ ಪ್ರತಿ ತಾಲ್ಲೂಕಿನಲ್ಲಿ ಬೆಳೆವಾರು ಎಷ್ಟು ರೈತರು ವಿಮಾ ಕಂತು (premium amount) ಭರಿಸಿರುತ್ತಾರೆ; | ಮರುವಿನ್ಯಾಸಗೊಳಿಸಲಾದ ಹವಾಮಾನ ಆಧಾರಿತ ಬೆಳೆ ವಿಮೆ ಯೋಜನೆಯಡಿಯಲ್ಲಿ ವಿಜಯಪುರ ಜಿಲ್ಲೆಯಲ್ಲಿ 2019-20 ನೇ ಸಾಲಿಗೆ ಒಟ್ಟು 8,039 ರೈತರು (8384 ಪ್ರಕರಣಗಳು) ವಿಮಾ ಕಂತು (premium amount) ಪಾವತಿಸಿರುತ್ತಾರೆ.<br>ತಾಲ್ಲೂಕುವಾರು ಮತ್ತು ಬೆಳೆವಾರು ರೈತರ ವಿವರವನ್ನು ಅನುಬಂಧ-2 ರಲ್ಲಿ ಒದಗಿಸಿದೆ. |
| ಈ) | 2019-20 ನೇ ಸಾಲಿನಲ್ಲಿ ರಾಜ್ಯದಲ್ಲಿ ಮರುವಿನ್ಯಾಸಗೊಳಿಸಲಾದ ಬೆಳೆ ವಿಮೆ ಯೋಜನೆಯಡಿ ವಿಮಾ ಕಂತು ಪಾವತಿಸಿರುವ ಎಷ್ಟು ರೈತರು ಹವಾಮಾನ ಕಾರಣ ಬೆಳೆ ಹಾನಿಗೆ ಒಳಗಾಗಿರುತ್ತಾರೆ; | 2019-20 ನೇ ಸಾಲಿನಲ್ಲಿ ರಾಜ್ಯದಲ್ಲಿ ಮರುವಿನ್ಯಾಸಗೊಳಿಸಲಾದ ಹವಾಮಾನ ಆಧಾರಿತ ಬೆಳೆ ವಿಮೆ ಯೋಜನೆಯಡಿ ವಿಮಾ ಕಂತು ಪಾವತಿಸಿರುವ ಒಟ್ಟು 2,09,079 ರೈತ ಪ್ರಕರಣಗಳು ಹವಾಮಾನ ಕಾರಣ ವಿಮಾ ಪರಿಹಾರ ಪಡೆಯಲು ಅರ್ಹರಿರುತ್ತಾರೆ. |
| ಉ) | ಸದರಿ ರೈತರಿಗೆ ಬೆಳೆ ವಿಮೆ ಪರಿಹಾರ ಧನವನ್ನು ಸರ್ಕಾರದಿಂದ ಪಾವತಿಸಲಾಗಿದೆಯೇ; | ವಿಮಾ ಪರಿಹಾರವನ್ನು ಸಂಬಂಧಿತ ವಿಮಾ ಸಂಸ್ಥೆಗಳು ಪಾವತಿಸುತ್ತವೆ. ಸರ್ಕಾರದಿಂದ ವಿಮಾ ಪರಿಹಾರ ಧನವನ್ನು ಪಾವತಿಸಲಾಗುವುದಿಲ್ಲ. |

| | | |
|---|---|---|
| ಊ) | ವಿಮೆ ಪಾಲಿಸಿಯಂತೆ ವಿಮಾ ಕಂತು ಪಾವತಿಸಿದ ನಂತರದ ದಿನದಿಂದ ವಿಮಾ ಅವಧಿ ಪ್ರಾರಂಭವಾಗಿದ್ದು, ವಿಮಾ ಪರಿಹಾರ ಅವಧಿ ಮುಕ್ತಾಯವಾದರೂ ಯಾವ ಕಾರಣಕ್ಕಾಗಿ ಪರಿಹಾರವನ್ನು ರೈತರಿಗೆ ಪಾವತಿಸಿರುವುದಿಲ್ಲ ; | 2019-20 ನೇ ಸಾಲಿಗೆ ಸಂಬಂಧಿಸಿದಂತೆ, ಒಟ್ಟು 1,86,796 ರೈತ ಪ್ರಕರಣಗಳಿಗೆ ಒಟ್ಟು ರೂ.364.97 ಕೋಟಿಗಳ ವಿಮಾ ಪರಿಹಾರ ಮೊತ್ತವನ್ನು ಪಾವತಿಸಲಾಗಿರುತ್ತದೆ.<br><br>ಫಲಾನುಭವಿಗಳ ಖಾತೆಗೆ ಆಧಾರ್ ಜೋಡಣೆ ಆಗದಿರುವ ಮತ್ತು ಬ್ಯಾಂಕ್ ಸಂಬಂಧಿತ ಕಾರಣಗಳಿಂದ ವಾಪಸ್ಸಾಗಿರುವ ವಿಮಾ ಪರಿಹಾರವನ್ನು ಸಂಬಂಧಪಟ್ಟ ವಿಮಾ ಕಂಪನಿವತಿಗಳವತಿಯಿಂದ ಪಾವತಿಸುವ ಕಾರ್ಯ ಪ್ರಗತಿಯಲ್ಲಿದೆ. |
| ಋ) | ಯಾವ ನಿರ್ದಿಷ್ಟ ಕಾಲಮಿತಿಯೊಳಗೆ 2019-20 ನೇ ಸಾಲಿನ ಬೆಳೆ ವಿಮೆ ಪರಿಹಾರ ವನ್ನು ರೈತರಿಗೆ ಪಾವತಿಸಲಾಗುವುದು? | |

**Horti 56 HGM 2021**

(ಆರ್.ಶಂಕರ್)
ತೋಟಗಾರಿಕೆ ಮತ್ತು ರೇಷ್ಮೆ
ಸಚಿವರು



# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1197
ಸದಸ್ಯರ ಹೆಸರು : ಡಾ॥ ಶ್ರೀನಿವಾಸಮೂರ್ತಿ ಕೆ (ನೆಲಮಂಗಲ)
ಉತ್ತರಿಸುವ ದಿನಾಂಕ : 05/02/2021
ಉತ್ತರಿಸುವ ಸಚಿವರು : ಮಾನ್ಯ ಪೌರಾಡಳಿತ ಮತ್ತು ಸಕ್ಕರೆ ಸಚಿವರು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ನೆಲಮಂಗಲ ನಗರ ಸಭೆಯನ್ನು ಮೇಲ್ದರ್ಜೆಗೇರಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ನೆಲಮಂಗಲ ನಗರಸಭೆಯ ಪ್ರದೇಶದ ವಿಸ್ತೀರ್ಣವೆಷ್ಟು ಯಾವ ಯಾವ ಗ್ರಾಮ ಪಂಚಾಯಿತಿಗಳನ್ನು ಒಳಗೊಂಡು ನಗರಸಭೆಯನ್ನಾಗಿ ಮಾಡಲಾಗಿದೆ; (ಹಳ್ಳಿ ಹಾಗೂ ಗ್ರಾಮಗಳ ಹೆಸರು ಸಮೇತ ವಿವರ ನೀಡುವುದು) | ಹೌದು.<br><br>ಅಧಿಸೂಚನೆ ಸಂಖ್ಯೆ:ನಅಇ 65 ಎಂಎಲ್ಆರ್ 2016, ದಿನಾಂಕ:26.12.2019 ರಂತೆ ನೆಲಮಂಗಲ ಪುರಸಭೆಯನ್ನು ನಗರಸಭೆಯನ್ನಾಗಿ ಮೇಲ್ದರ್ಜೆಗೇರಿಸಲಾಗಿದೆ.<br><br>ನೆಲಮಂಗಲ ನಗರಸಭೆಯ ಪ್ರದೇಶದ ಒಟ್ಟು ಭೌಗೋಳಿಕ ವಿಸ್ತೀರ್ಣ 24.49 ಚ.ಕಿ.ಮೀ ಆಗಿರುತ್ತದೆ.<br><br>ಈ ಕೆಳಕಂಡ ಗ್ರಾಮ ಪಂಚಾಯಿತಿ ಪ್ರದೇಶಗಳನ್ನು ಒಳಗೊಂಡು ನಗರಸಭೆಯನ್ನಾಗಿ ಮಾಡಲಾಗಿದೆ:<br>1. ಅರಿಶಿನಕುಂಟೆ ಸಂಪೂರ್ಣ ಗ್ರಾಮ ಪಂಚಾಯಿತಿ<br>2. ವಾಜರಹಳ್ಳಿ ಗ್ರಾಮ ಪಂಚಾಯಿತಿ ವ್ಯಾಪ್ತಿಯ ಭಾಗಶಃ<br>* ವಾಜರಹಳ್ಳಿ ಸಂಪೂರ್ಣ ಕಂದಾಯ ಗ್ರಾಮ<br>* ಮಲ್ಲಾಪುರ ಸಂಪೂರ್ಣ ಕಂದಾಯ ಗ್ರಾಮ<br>* ಕೂಲಿಪುರ ಸಂಪೂರ್ಣ ಕಂದಾಯ ಗ್ರಾಮ<br>3. ವಿಶ್ವೇಶ್ವರಪುರ ಗ್ರಾಮ ಪಂಚಾಯಿತಿ ವ್ಯಾಪ್ತಿಯ ಭಾಗಶಃ<br>* ವಿಶ್ವೇಶ್ವರಪುರ ಸಂಪೂರ್ಣ ಕಂದಾಯ ಗ್ರಾಮ<br>* ಕೆಂಪಲಿಂಗನಹಳ್ಳಿ ಸಂಪೂರ್ಣ ಕಂದಾಯ ಗ್ರಾಮ<br>* ಬ್ಯಾಡರಹಳ್ಳಿ ಸಂಪೂರ್ಣ ಕಂದಾಯ ಗ್ರಾಮ<br>4. ಬಸವನಹಳ್ಳಿ ಸಂಪೂರ್ಣ ಗ್ರಾಮ ಪಂಚಾಯ್ತಿ ವ್ಯಾಪ್ತಿ. |
| (ಆ) | ನೆಲಮಂಗಲ ಪುರಸಭೆಯಿಂದ ನಗರ ಸಭೆಯ ಪ್ರದೇಶವೆಂದು ಘೋಷಣೆ ಮಾಡಿದ್ದರೂ ಸಹ ಪುರಸಭೆಯ ಸದಸ್ಯರು ಅಧಿಕಾರ ನಡೆಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಪುರಸಭೆಯ ಸದಸ್ಯರು ಯಾವ ಯಾವ ದಂಡದಡಿ ಸದಸ್ಯರಾಗುತ್ತಾರೆ; ಯಾವ ಕಾರಣಕ್ಕಾಗಿ ಇವರನ್ನು ನಗರಸಭಾ ಸದಸ್ಯರೆಂದು ಘೋಷಣೆ ಮಾಡಲಾಗಿರುತ್ತದೆ; (ವಿವರ ನೀಡುವುದು) | ಪ್ರಸ್ತುತ ನೆಲಮಂಗಲ ನಗರಸಭೆಯ ಕೌನ್ಸಿಲ್ ಅಸ್ತಿತ್ವದಲ್ಲಿ ಇರುವುದಿಲ್ಲ. ಆಡಳಿತಾತ್ಮಕ ಹಿತದೃಷ್ಟಿಯಿಂದ ದೈನಂದಿನ ಕಾರ್ಯನಿರ್ವಹಣೆಗಾಗಿ ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ.<br><br>ನೆಲಮಂಗಲ ಪುರಸಭೆ ಇದ್ದಂತಹ ಸಂದರ್ಭದಲ್ಲಿ ದಿನಾಂಕ 01.06.2019ರಂದು ವಾರ್ಡವಾರು ಚುನಾವಣೆ ನಡೆದಿದ್ದು, 23 ಜನ ಸದಸ್ಯರು ಚುನಾಯಿತರಾಗಿರುತ್ತಾರೆ ಹಾಗೂ ಸದರಿ ಸದಸ್ಯರುಗಳನ್ನು ಆಯ್ಕೆಯಾಗಿರುವ ಚುನಾಯಿತ ಸದಸ್ಯರೆಂದು |

# ಕರ್ನಾಟಕ ವಿಧಾನ ಸಭೆ

ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ನಾಗೇಶ್.ಬಿ.ಸಿ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1206

ಉತ್ತರಿಸಬೇಕಾದ ದಿನಾಂಕ : 05.02.2021

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಸಹಕಾರ ಸಂಘಗಳ ಸಂಖ್ಯೆಗಳೆಷ್ಟು; ಅವುಗಳ ಪೈಕಿ 2019-20ರ ಅಂತ್ಯಕ್ಕೆ ಲೆಕ್ಕ ಪರಿಶೋಧನೆ ಪೂರ್ಣಗೊಂಡಿರುವ ಸಹಕಾರ ಸಂಘಗಳ ಸಂಖ್ಯೆಗಳೆಷ್ಟು; (ಜಿಲ್ಲಾವಾರು, ತಾಲ್ಲೂಕುವಾರು ವಿವರ ನೀಡುವುದು) | ದಿನಾಂಕ: 31-03-2020ರ ಅಂತ್ಯಕ್ಕೆ ರಾಜ್ಯದಲ್ಲಿ ಒಟ್ಟು 43597 ಸಹಕಾರ ಸಂಘಗಳಿದ್ದು, ಈ ಪೈಕಿ 2019-20ರ ಅಂತ್ಯಕ್ಕೆ 28270 ಸಹಕಾರ ಸಂಘಗಳ ಲೆಕ್ಕಪರಿಶೋಧನೆ ಪೂರ್ಣಗೊಂಡಿದ್ದು, ಜಿಲ್ಲಾವಾರು ಹಾಗೂ ತಾಲ್ಲೂಕಾವಾರು ವಿವರ ಅನುಬಂಧ-1ರಲ್ಲಿ ನೀಡಲಾಗಿದೆ. |
| ಆ) | ಹಾಗಿದ್ದಲ್ಲಿ, ಲೆಕ್ಕ ಪರಿಶೋಧನೆ ಪೂರ್ಣಗೊಳ್ಳದಿರುವುದಕ್ಕೆ ಕಾರಣವೇನು; (ವಿವರ ನೀಡುವುದು) | ದಿನಾಂಕ: 31-03-2020ರ ಅಂತ್ಯಕ್ಕೆ ಒಟ್ಟು 15327 ಸಹಕಾರ ಸಂಘಗಳು ಈ ಕೆಳಕಂಡ ಕಾರಣಗಳಿಂದಾಗಿ ಲೆಕ್ಕಪರಿಶೋಧನೆಯಾಗದೆ ಬಾಕಿ ಉಳಿದಿರುತ್ತದೆ. ವಿವರ ಅನುಬಂಧ-2ರಲ್ಲಿ ನೀಡಲಾಗಿದೆ.<br>1. ನೋಂದಾಯಿತ ವಿಳಾಸದಲ್ಲಿ ಪುಸ್ತಕ ಮತ್ತು ದಾಖಲಾತಿಗಳು ಲಭ್ಯವಿಲ್ಲದಿರುವುದು.<br>2. ಸಂಘದ ಪುಸ್ತಕಗಳು ನ್ಯಾಯಾಲಯದಲ್ಲಿ / ಆರಕ್ಷಕ ಠಾಣೆಯಲ್ಲಿದ್ದು, ಲೆಕ್ಕಪರಿಶೋಧನೆಗೆ ಹಾಜರು ಪಡಿಸಲು ಸಾಧ್ಯವಾಗದಿರುವುದು.<br>3. ಲೆಕ್ಕ ಪತ್ರಗಳು ಅಪೂರ್ಣವಾಗಿದ್ದು, ಲೆಕ್ಕಪರಿಶೋಧನೆಗೆ ಹಾಜರು ಪಡಿಸದೇ ಇರುವುದು.<br>4. ಲೆಕ್ಕಪರಿಶೋಧನೆ ಪ್ರಗತಿಯಲ್ಲಿರುವುದು.<br>5. ಸಹಕಾರ ಸಂಘಗಳು ಲೆಕ್ಕಪರಿಶೋಧನೆಗೆ ಆಯ್ಕೆ ಮಾಡಿಕೊಂಡ ಸನ್ನದು ಲೆಕ್ಕಪರಿಶೋಧಕರು ಲೆಕ್ಕಪರಿಶೋಧನೆ ನಿರ್ವಹಿಸದಿರುವುದು.<br>6. ಸಮಾಪನೆಗೊಂಡ ಸಹಕಾರ ಸಂಘಗಳು ಲೆಕ್ಕಪರಿಶೋಧನೆಯಾಗದೇ ಇರುವುದು ಇತ್ಯಾದಿ. |
| ಇ) | ಲೆಕ್ಕ ಪರಿಶೋಧನೆ ಪೂರ್ಣಗೊಳ್ಳದಿರುವ ಸಹಕಾರ ಸಂಘಗಳ ಲೆಕ್ಕ ಪರಿಶೋಧನೆಯನ್ನು ಯಾವ ಅವಧಿಯೊಳಗೆ ಪೂರ್ಣಗೊಳಿಸಲಾಗುವುದು, (ಜಿಲ್ಲಾವಾರು, ತಾಲ್ಲೂಕುವಾರು ವಿವರ ನೀಡುವುದು) | ಲೆಕ್ಕಪರಿಶೋಧನೆಗೆ ಬಾಕಿ ಇರುವ ಸಹಕಾರ ಸಂಘಗಳ ಲೆಕ್ಕಪರಿಶೋಧನೆಯನ್ನು ಆದ್ಯತೆ ಮೇಲೆ ಪೂರೈಸಲು ಕ್ರಮ ಕೈಗೊಳ್ಳಲಾಗುತ್ತಿದೆ. |

| | | |
|---|---|---|
| ಈ) | ಲೆಕ್ಕಪರಿಶೋಧನೆ ಪೂರ್ಣಗೊಂಡಿರುವ ಸಹಕಾರ ಸಂಘಗಳಲ್ಲಿ ಹಣದುರುಪಯೋಗ ಕಂಡು ಬಂದಿದ್ದಲ್ಲಿ ಅಂತಹ ಸಹಕಾರ ಸಂಘಗಳ ವಿರುದ್ಧ ತೆಗೆದುಕೊಂಡ ಕ್ರಮಗಳೇನು? (ಜಿಲ್ಲಾವಾರು, ತಾಲ್ಲೂಕುವಾರು ವಿವರ ನೀಡುವುದು) | ಸಹಕಾರ ಸಂಘಗಳ ಲೆಕ್ಕಪರಿಶೋಧನಾ ವೇಳೆಯಲ್ಲಿ ಹಣದುರುಪಯೋಗ ಕಂಡುಬಂದಲ್ಲಿ ಹಣದುರುಪಯೋಗದ ಕುರಿತು ಲೆಕ್ಕಪರಿಶೋಧನಾ ವರದಿಯಲ್ಲಿ ದಾಖಲಿಸುತ್ತಿದ್ದು, ವರದಿ ಆಧರಿಸಿ ಇಲಾಖಾ ವತಿಯಿಂದ ದುರುಪಯೋಗದ ಮೊತ್ತ ವಸೂಲಾತಿಗೆ ಸಿವಿಲ್ ಹಾಗೂ ಕ್ರಿಮಿನಲ್ ಕ್ರಮಗಳನ್ನು ಇಡಲಾಗುತ್ತಿದೆ. ಆಡಳಿತ ಮಂಡಳಿ ದುರುಪಯೋಗದಲ್ಲಿ ಬಾಗಿಯಾಗಿದಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959 ಕಲಂ 29 (ಸಿ) ರೀತ್ಯಾ ಆಡಳಿತ ಮಂಡಳಿ ಸದಸ್ಯರನ್ನು ಅನರ್ಹಗೊಳಿಸಲು ಕ್ರಮವಿಡಲಾಗುತ್ತಿದೆ. |

ಸಂಖ್ಯೆ: ಸಿಒ 06 ಸಿಎಲ್‌ಎಂ 2021 (ಇ)

(ಎಸ್.ಟಿ. ಸೋಮಶೇಖರ್)
ಸಹಕಾರ ಸಚಿವರು

# ಕರ್ನಾಟಕ ವಿಧಾನ ಸಭೆ

ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ಲಿಂಗೇಶ್ ಕೆ.ಎಸ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1104

ಉತ್ತರಿಸಬೇಕಾದ ದಿನಾಂಕ : 05.02.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಸಹಕಾರ ಬ್ಯಾಂಕುಗಳ ಮೂಲಕ ಸ್ವಸಹಾಯ ಸಂಘಗಳಿಗೆ ಶೇ. 3ರ ಬಡ್ಡಿದರದಲ್ಲಿ 'ಕಾಯಕ' ಯೋಜನೆಯನ್ನು ರೂಪಿಸಲಾಗಿದ್ದು, ಈ ಯೋಜನೆಯಲ್ಲಿ ಜಿಲ್ಲಾವಾರು ಎಷ್ಟು ಸ್ವಸಹಾಯ ಸಂಘಗಳಿಗೆ 'ಕಾಯಕ' ಯೋಜನೆಯ ಫಲಾನುಭವಿಗಳಾಗಿ ಆಯ್ಕೆ ಮಾಡಲಾಗಿದೆ; ಹಾಗೂ 2020-21 ನೇ ಸಾಲಿನ ಆಯವ್ಯಯದಲ್ಲಿ ಎಷ್ಟು ಹಣವನ್ನು ಸದರಿ ಯೋಜನೆಗೆ ಮೀಸಲಿಡಲಾಗಿದೆ; ಹಾಗೂ ಬ್ಯಾಂಕುಗಳಿಂದ ಎಷ್ಟು ಸಾಲ ನೀಡಲಾಗಿದೆ; (ಜಿಲ್ಲಾವಾರು ಸಂಪೂರ್ಣ ಮಾಹಿತಿ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ: ಸಿಒ 146 ಸಿಎಲ್ಎಸ್ 2018, ಬೆಂಗಳೂರು, ದಿನಾಂಕ: 20.09.2018 ರಂತೆ ಸಹಕಾರ ಸಂಸ್ಥೆಗಳಿಂದ ರಚಿಸಲ್ಪಡುವ ಸ್ವ-ಸಹಾಯ ಗುಂಪುಗಳ ಸದಸ್ಯರ ಕೌಶಲ್ಯಾಭಿವೃದ್ಧಿ ಮತ್ತು ಉದ್ಯಮಶೀಲತೆಯನ್ನು ವೃದ್ಧಿಗೊಳಿಸುವುದರ ಮೂಲಕ ಸ್ವ-ಉದ್ಯೋಗವನ್ನು ಪ್ರೋತ್ಸಾಹಿಸಿ, ಆದಾಯವನ್ನು ಹೆಚ್ಚಿಸುವ ನಿಟ್ಟಿನಲ್ಲಿ ಡಿ.ಸಿ.ಸಿ. ಬ್ಯಾಂಕುಗಳು ಮತ್ತು ಪಟ್ಟಣ ಬ್ಯಾಂಕುಗಳ ಮೂಲಕ ಗರಿಷ್ಠ ರೂ.10.00 ಲಕ್ಷದವರೆಗೆ ಸ್ವಸಹಾಯ ಗುಂಪುಗಳು ಸಾಲವನ್ನು ಪಡೆಯಲು ಅವಕಾಶವಿದ್ದು, ರೂ.5.00 ಲಕ್ಷದವರೆಗಿನ ಸಾಲಕ್ಕೆ ಶೂನ್ಯ ಬಡ್ಡಿ ಮತ್ತು ರೂ.5.00 ರಿಂದ ರೂ.10.00 ಲಕ್ಷದವರೆಗಿನ ಸಾಲಕ್ಕೆ ಶೇ.4 ರ ಬಡ್ಡಿದರ ಅನ್ವಯವಾಗುವಂತೆ 'ಕಾಯಕ' ಯೋಜನೆಯನ್ನು ಜಾರಿಗೆ ತರಲಾಗಿದ್ದು, ಬಡ್ಡಿ ಸಹಾಯಧನ ಸರ್ಕಾರದಿಂದ ಭರಿಸಲಾಗುತ್ತಿದೆ. 2020-21 ನೇ ಸಾಲಿನಲ್ಲಿ ಈ ಯೋಜನೆ ಮುಂದುವರೆದಿದ್ದು ಬಡ್ಡಿ ಸಹಾಯಧನವಾಗಿ ರೂ.90.00 ಲಕ್ಷಗಳ ಆಯವ್ಯಯ ಅವಕಾಶ ಕಲ್ಪಿಸಲಾಗಿದೆ.<br>ಈ ಯೋಜನೆಯಡಿಯಲ್ಲಿ 2020-21 ನೇ ಸಾಲಿನಲ್ಲಿ ರಾಜ್ಯದಲ್ಲಿರುವ ಜಿಲ್ಲೆಗಳ ವ್ಯಾಪ್ತಿಯಲ್ಲಿನ ಡಿ.ಸಿ.ಸಿ ಬ್ಯಾಂಕುಗಳಿಂದ ಒಟ್ಟು 540 ಸ್ವ-ಸಹಾಯ ಸಂಘಗಳನ್ನು ಫಲಾನುಭವಿಗಳಾಗಿ ಆಯ್ಕೆ ಮಾಡಿದ್ದು, ಈ ಪೈಕಿ 245 ಸ್ವ-ಸಹಾಯ ಸಂಘಗಳಿಗೆ ರೂ.1081.21 ಲಕ್ಷಗಳ ಮೊತ್ತದ ಸಾಲವನ್ನು ವಿತರಿಸಲಾಗಿರುತ್ತದೆ. ಜಿಲ್ಲಾವಾರು ವಿವರವನ್ನು **ಅನುಬಂಧದಲ್ಲಿ** ನೀಡಲಾಗಿದೆ. |
| (ಆ) | 'ಕಾಯಕ' ಯೋಜನೆಯಲ್ಲಿ ಎಷ್ಟು ಹಣವನ್ನು ಸಹಕಾರಿ ಬ್ಯಾಂಕುಗಳಿಗೆ ಬಿಡುಗಡೆ ಮಾಡಲಾಗಿದೆ; ಬಿಡುಗಡೆ ಮಾಡಲು ಬಾಕಿ ಎಷ್ಟಿರುತ್ತದೆ; ಸದರಿ ಯೋಜನೆಯಡಿಯಲ್ಲಿ ಫಲಾನುಭವಿಗಳಿಗೆ ಸಾಲ ನೀಡಲು ಸರ್ಕಾರಕ್ಕೆ ಇರುವ ತೊಂದರೆಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಜಿಲ್ಲಾ ಸಹಕಾರಿ ಕೇಂದ್ರ ಬ್ಯಾಂಕುಗಳು 'ಕಾಯಕ' ಯೋಜನೆಯಡಿ ಸ್ವ-ಸಹಾಯ ಸಂಘಗಳಿಗೆ ವಿತರಿಸಿದ್ದ ಸಾಲಕ್ಕೆ ರೂ.67.50 ಲಕ್ಷಗಳ ಬಡ್ಡಿ ಸಹಾಯಧನ ಬಿಡುಗಡೆಯಾಗಿದೆ. ಈ ಪೈಕಿ ರೂ.46.91 ಲಕ್ಷಗಳನ್ನು ಬ್ಯಾಂಕುಗಳಿಗೆ ಬಿಡುಗಡೆ ಮಾಡಲಾಗಿದ್ದು, ರೂ.20.59 ಲಕ್ಷಗಳನ್ನು ಬಿಡುಗಡೆ ಮಾಡಲು ಕ್ರಮವಿಡಲಾಗಿದೆ. ವಿವರವನ್ನು **ಅನುಬಂಧದಲ್ಲಿ** ನೀಡಲಾಗಿದೆ. |

**ಸಂಖ್ಯೆ: ಸಿಒ 29 ಸಿಎಲ್ಎಸ್ 2021**

(ಎಸ್.ಟಿ. ಸೋಮಶೇಖರ್)

ಸಹಕಾರ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1136

ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ಬಸನಗೌಡ ಆರ್ ಪಾಟೀಲ್ (ಯತ್ನಾಳ್) (ವಿಜಯಪುರ ನಗರ)

ಉತ್ತರಿಸಬೇಕಾದ ದಿನಾಂಕ : 05.02.2021

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ಜನವರಿ 15, 2021ರ ಅಂತ್ಯದವರೆಗೆ ರಾಜ್ಯಾದ್ಯಂತ ಬಿ.ಪಿ.ಎಲ್. ಪಡಿತರ ಚೀಟಿಗಾಗಿ ಅರ್ಜಿ ಸಲ್ಲಿಸಿರುವವರ ಸಂಖ್ಯೆ ಎಷ್ಟು; (ಜಿಲ್ಲಾವಾರು ಮಾಹಿತಿ ನೀಡುವುದು)</td><td>ಕಳೆದ ಮೂರು ವರ್ಷಗಳಲ್ಲಿ ರಾಜ್ಯದಾದ್ಯಂತ ಆದ್ಯತಾ (ಬಿ.ಪಿ.ಎಲ್) ಪಡಿತರ ಚೀಟಿ ಕೋರಿ ಒಟ್ಟು 36,40,143 ಅರ್ಜಿಗಳು ಸ್ವೀಕೃತವಾಗಿರುತ್ತದೆ.<br>(ಜಿಲ್ಲಾವಾರು ಮಾಹಿತಿಯನ್ನು ಅನುಬಂಧ-1ರಲ್ಲಿ ಒದಗಿಸಲಾಗಿದೆ)</td></tr>
<tr><td>ಆ</td><td>ಈ ಪೈಕಿ ಎಷ್ಟು ಜನರಿಗೆ ಪಡಿತರ ಚೀಟಿ ವಿತರಿಸಲಾಗಿದೆ; (ಜಿಲ್ಲಾವಾರು ಮಾಹಿತಿ ನೀಡುವುದು)</td><td>ರಾಜ್ಯದಾದ್ಯಂತ ಆದ್ಯತಾ (ಬಿ.ಪಿ.ಎಲ್) ಪಡಿತರ ಚೀಟಿ ಕೋರಿ ಒಟ್ಟು 36,40,143 ಅರ್ಜಿಗಳು ಸ್ವೀಕೃತವಾಗಿದ್ದು, ಅದರಲ್ಲಿ 26,87,148 ಪಡಿತರ ಚೀಟಿಗಳನ್ನು ವಿತರಿಸಲಾಗಿರುತ್ತದೆ.<br>(ಜಿಲ್ಲಾವಾರು ಮಾಹಿತಿಯನ್ನು ಅನುಬಂಧ-1ರಲ್ಲಿ ಒದಗಿಸಲಾಗಿದೆ)</td></tr>
<tr><td>ಇ</td><td>ಬಿಜಾಪುರ ಮತ್ತು ಬಾಗಲಕೋಟೆ ಜಿಲ್ಲೆಗಳಲ್ಲಿ ಬಿ.ಪಿ.ಎಲ್. ಪಡಿತರ ಚೀಟಿ ಕೋರಿ ಅರ್ಜಿ ಸಲ್ಲಿಸಿರುವವರ ಸಂಖ್ಯೆ ಎಷ್ಟು; ಈ ಪೈಕಿ ಎಷ್ಟು ಜನರಿಗೆ ಪಡಿತರ ಚೀಟಿ ವಿತರಿಸಲಾಗಿದೆ; (ತಾಲ್ಲೂಕುವಾರು ಮಾಹಿತಿ ನೀಡುವುದು)</td><td>ಕಳೆದ ಮೂರು ವರ್ಷಗಳಲ್ಲಿ ವಿಜಯಪುರ ಮತ್ತು ಬಾಗಲಕೋಟೆ ಜಿಲ್ಲೆಗಳಲ್ಲಿ ಆದ್ಯತಾ (ಬಿ.ಪಿ.ಎಲ್) ಪಡಿತರ ಚೀಟಿ ಕೋರಿ ಸಲ್ಲಿಸಿರುವ ಅರ್ಜಿಗಳು ಹಾಗೂ ಪಡಿತರ ಚೀಟಿ ವಿತರಿಸಿರುವ ಮಾಹಿತಿ ಈ ಕೆಳಕಂಡಂತಿದೆ<br><table><tr><th>ಜಿಲ್ಲೆ</th><th>ಅರ್ಜಿಗಳ ಸಂಖ್ಯೆ</th><th>ಪಡಿತರ ಚೀಟಿ ಸಂಖ್ಯೆ</th></tr><tr><td>ವಿಜಯಪುರ</td><td>2,15,537</td><td>1,56,387</td></tr><tr><td>ಬಾಗಲಕೋಟೆ</td><td>1,43,424</td><td>1,04,108</td></tr></table>(ತಾಲ್ಲೂಕುವಾರು ಮಾಹಿತಿಯನ್ನು ಅನುಬಂಧ-2ರಲ್ಲಿ ಒದಗಿಸಲಾಗಿದೆ)</td></tr>
<tr><td>ಈ</td><td>ಬಾಕಿ ಇರುವವರಿಗೆ ಯಾವ ಕಾಲಮಿತಿಯೊಳಗೆ ಬಿ.ಪಿ.ಎಲ್ ಪಡಿತರ ಚೀಟಿ ವಿತರಿಸಲಾಗುವುದು; ಇದಕ್ಕಾಗಿ ಸರ್ಕಾರ ಕೈಗೊಂಡಿರುವ ಕ್ರಮಗಳೇನು?</td><td>ದಿನಾಂಕ: 01.01.2021 ರಿಂದ ಜಾರಿಗೆ ಬರುವಂತೆ ಹೊಸ ಪಡಿತರ ಚೀಟಿ ಕೋರಿ ಸಲ್ಲಿಸಿರುವ ಬಾಕಿ ಅರ್ಜಿಗಳನ್ನು ಪರಿಶೀಲಿಸಿ ಆದ್ಯತಾ (ಬಿಪಿಎಲ್) ಪಡಿತರ ಚೀಟಿ ವಿತರಿಸಲಾಗುತ್ತಿದೆ.</td></tr>
</table>

ಆನಾಸ 48 ಡಿಆರ್ಎ 2021 (ಇ-ಆಫೀಸ್)

(ಉಮೇಶ್ ವಿ. ಕತ್ತಿ)

ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1172

ಸದಸ್ಯರ ಹೆಸರು : ಶ್ರೀ ಈಶ್ವರ್ ಖಂಡ್ರೆ (ಭಾಲ್ಕಿ)

ಉತ್ತರಿಸುವವರು : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು

ಉತ್ತರಿಸುವ ದಿನಾಂಕ : 05.02.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಬೀದರ್ ಜಿಲ್ಲೆಯಲ್ಲಿ ಎಷ್ಟು ಬೃಹತ್ ಕೈಗಾರಿಕೋದ್ಯಮಗಳಿವೆ; ಇವುಗಳಿಂದ ಬೀದರ್ ಜಿಲ್ಲೆಯಲ್ಲಿ ಎಷ್ಟು ಉದ್ಯೋಗ ಸೃಷ್ಟಿಯಾಗಿದೆ (ಸಂಪೂರ್ಣ ವಿವರ ಒದಗಿಸುವುದು) | ಬೀದರ್ ಜಿಲ್ಲೆಯಲ್ಲಿ 12 ಬೃಹತ್ ಕೈಗಾರಿಕೋದ್ಯಮಗಳಿವೆ. ಇವುಗಳಿಂದ ಬೀದರ್ ಜಿಲ್ಲೆಯಲ್ಲಿ 3121 ಉದ್ಯೋಗ ಸೃಷ್ಟಿಯಾಗಿದ್ದು, ರೂ. 653 ಕೋಟಿ ಬಂಡವಾಳ ಹೂಡಿಕೆಯಾಗಿದೆ **(ವಿವರಗಳನ್ನು ಅನುಬಂಧದಲ್ಲಿ ಒದಗಿಸಿದೆ)**. |
| ಆ | ಕಲ್ಯಾಣ ಕರ್ನಾಟಕದ ಕೈಗಾರಿಕೆಗಳಿಗೆ ವಿಶೇಷ ಪ್ರೋತ್ಸಾಹ ನೀಡಲು ಸರ್ಕಾರ ಯಾವ ನೀತಿಯನ್ನು ಅನುಸರಿಸುತ್ತಿದೆ; | 1. ಸರ್ಕಾರವು ಕೈಗರಿಕಾಭಿವೃದ್ಧಿಗೆ ಹೊಸ ಕೈಗಾರಿಕಾ ನೀತಿ 2020-25ನ್ನು ಜಾರಿಗೆ ತಂದಿದ್ದು, ಸದರಿ ನೀತಿಯಡಿ ಕಲ್ಯಾಣ ಕರ್ನಾಟಕ ಭಾಗದ ಎಲ್ಲಾ ಜಿಲ್ಲೆಗಳ ಎಲ್ಲಾ ತಾಲ್ಲೂಕುಗಳನ್ನು **ವಲಯ-1** ರಲ್ಲಿ ವರ್ಗೀಕರಿಸಿ ಹೆಚ್ಚಿನ ಪ್ರೋತ್ಸಾಹ ಮತ್ತು ರಿಯಾಯಿತಿಗಳನ್ನು ನೀಡಲು ಅವಕಾಶ ಕಲ್ಪಿಸಿದೆ.<br>2. ಕಲ್ಯಾಣ ಕರ್ನಾಟಕದ ಎಲ್ಲಾ ಜಿಲ್ಲೆಗಳನ್ನು ಒಳಗೊಂಡಂತೆ ಕಲಬುರಗಿಯಲ್ಲಿ Special Investment Region (SIR) ಸ್ಥಾಪನೆ ಮಾಡಲು ಹೊಸ ಕೈಗಾರಿಕಾ ನೀತಿಯಲ್ಲಿ ಪ್ರಸ್ತಾಪಿಸಿದೆ.<br>3. ಕಲಬುರಗಿ, ಕೊಪ್ಪಳ, ಬೀದರ್ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ವಿವಿಧ ಉತ್ಪನ್ನಗಳ ಕ್ಲಸ್ಟರ್ ಅಭಿವೃದ್ಧಿಪಡಿಸಲಾಗುತ್ತಿದೆ. |
| ಇ | ಈ ನೀತಿ ಅನುಸಾರ ಬೀದರ್ ಜಿಲ್ಲೆಯಲ್ಲಿ ಎಷ್ಟು ಬೃಹತ್ ಕೈಗಾರಿಕೋದ್ಯಮಗಳು ಸ್ಥಾಪನೆಯಾಗಿವೆ; ಎಷ್ಟು ಉದ್ಯೋಗ ಸೃಷ್ಟಿಯಾಗಿದೆ (ವಿವರ ನೀಡುವುದು) | ಹೊಸ ಕೈಗಾರಿಕಾ ನೀತಿ 2020-25ನ್ನು ದಿನಾಂಕ 13.08.2020 ರಿಂದ ಅನ್ವಯವಾಗುವಂತೆ 5 ವರ್ಷಗಳ ಅವಧಿಗೆ ಅಥವಾ ಮುಂದಿನ ಕೈಗಾರಿಕಾ ನೀತಿ ಜಾರಿಗೊಳ್ಳುವವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ. ಸದರಿ ಅವಧಿಯಲ್ಲಿ ಈ ನೀತಿ ಅನುಸಾರ ಬೃಹತ್ ಕೈಗಾರಿಕೆಗಳ ಪ್ರಸ್ತಾವನೆಗಳನ್ನು ನಿರೀಕ್ಷಿಸಲಾಗಿದೆ.<br><br>ಮೇಲಿನ ಉಪಪ್ರಶ್ನೆ (ಅ) ರಲ್ಲಿ ವಿವರಿಸಿರುವಂತೆ ಬೀದರ್ ಜಿಲ್ಲೆಯಲ್ಲಿ ಪ್ರಸ್ತುತ 12 ಬೃಹತ್ ಕೈಗಾರಿಕೆಗಳಿರುತ್ತವೆ. |

| | | |
|---|---|---|
| ಈ | ಇವುಗಳಲ್ಲಿ ಎಷ್ಟು ಉದ್ಯಮಗಳು ಲಾಭದಾಯಕವಾಗಿವೆ ಹಾಗೂ ಇನ್ನೂ ಹೆಚ್ಚಿನ ಉದ್ಯೋಗ ಸೃಷ್ಟಿ ಮಾಡಲು ಸರ್ಕಾರ ಏನು ಕ್ರಮ ಕೈಗೊಂಡಿದೆ? | ವಿವರಗಳನ್ನು ಮೇಲಿನ ಉಪಪ್ರಶ್ನೆ (ಆ) ರಲ್ಲಿ ಒದಗಿಸಿದೆ. |

ಸಿಐ 61 ಎಸ್‌ಪಿಐ 2021

**(ಜಗದೀಶ್ ಶೆಟ್ಟರ)**
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1056 |
| ವಿಧಾನ ಸಭೆ ಸದಸ್ಯರ ಹೆಸರು | : | ಶ್ರೀ ಯತೀಂದ್ರ ಸಿದ್ದರಾಮಯ್ಯ ಡಾ॥ (ವರುಣ) |
| ಉತ್ತರಿಸಬೇಕಾದ ದಿನಾಂಕ | : | 05.02.2021 |
| ಉತ್ತರಿಸುವ ಸಚಿವರು | : | ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | 2019-20 ಮತ್ತು 2020-21ನೇ ಸಾಲಿನ ಆಯವ್ಯಯದಲ್ಲಿ ಆಹಾರ ಮತ್ತು ನಾಗರೀಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಇಲಾಖೆಗೆ ಒದಗಿಸಿದ ಅನುದಾನವೆಷ್ಟು; ಸದರಿ ಅನುದಾನದಲ್ಲಿ ಇಲಾಖೆಯ ನೌಕರರಿಗೆ ವೇತನ ಮತ್ತು ಭತ್ಯೆಗಳಿಗೆ ಎಷ್ಟು ಹಣ ಮೀಸಲಿರಿಸಲಾಗಿದೆ; (ವಿವರ ನೀಡುವುದು) | ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಗೆ 2019-20 ನೇ ಸಾಲಿನ ಆಯವ್ಯಯದಲ್ಲಿ ರೂ.3,930.19 ಕೋಟಿಗಳನ್ನು ಹಾಗೂ 2020-21 ನೇ ಸಾಲಿನ ಆಯವ್ಯಯದಲ್ಲಿ ರೂ.3,257.62 ಕೋಟಿಗಳ ಅನುದಾನವನ್ನು ಒದಗಿಸಲಾಗಿದೆ.<br>ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಇಲಾಖೆಯ ನೌಕರರ ವೇತನಕ್ಕಾಗಿ 2019-20 ನೇ ಸಾಲಿನಲ್ಲಿ ರೂ.48.62 ಕೋಟಿಗಳನ್ನು ಹಾಗೂ 2020-21 ನೇ ಸಾಲಿನಲ್ಲಿ ರೂ.52.83 ಕೋಟಿಗಳನ್ನು ಕಾಯ್ದಿರಿಸಲಾಗಿದೆ. |
| ಆ | ಇಲಾಖೆಯಿಂದ ಅಕ್ಕಿಯನ್ನು ಯಾವ ದರದಲ್ಲಿ ಖರೀದಿಸಲಾಗುತ್ತಿದೆ; ಯಾವ ಸಂಸ್ಥೆಗಳಿಂದ ಖರೀದಿಸಲಾಗುತ್ತಿದೆ; (ವಿವರ ನೀಡುವುದು) | ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆಯಡಿ ಕೇಂದ್ರ ಸರ್ಕಾರದಿಂದ ಪ್ರತಿ ಮಾಹೆ ರಾಜ್ಯಕ್ಕೆ ಹಂಚಿಕೆ ಮಾಡಲಾಗುವ 217403 ಮೆ.ಟನ್ ಅಕ್ಕಿ ಯನ್ನು ಪ್ರತಿ ಕೆ.ಜಿ. ಗೆ ರೂ. 3.00 ರ ದರದಲ್ಲಿ ಖರೀದಿಸಿ ಪಡಿತರ ಫಲಾನುಭವಿಗಳಿಗೆ ಉಚಿತವಾಗಿ ಹಂಚಿಕೆ ಮಾಡಲಾಗುತ್ತಿದೆ. ಕೇಂದ್ರ ಸರ್ಕಾರವು ನಿಗಧಿಪಡಿಸಿರುವ ಸಂಖ್ಯೆಗಿಂತ ರಾಜ್ಯದಲ್ಲಿ ಹೆಚ್ಚುವರಿಯಾಗಿ ವಿತರಿಸುವ ಪಡಿತರ ಚೀಟಿಗಳಿಗೆ ಅಗತ್ಯವಿರುವ ಅಕ್ಕಿಯನ್ನು ಭಾರತೀಯ ಆಹಾರ ನಿಗಮದಿಂದ ಪ್ರತಿ ಕ್ವಿಂಟಾಲ್‌ಗೆ ಸರಾಸರಿ ರೂ. 2500 ರ ದರದಲ್ಲಿ ಖರೀದಿಸಿ ಫಲಾನುಭವಿಗಳಿಗೆ ಉಚಿತವಾಗಿ ಹಂಚಿಕೆ ಮಾಡಲಾಗುತ್ತಿದೆ. |
| ಇ | ಇಲಾಖೆಯಿಂದ ನೀಡುವ ಆಹಾರ ಪದಾರ್ಥಗಳಿಗೆ ನಿಗದಿಪಡಿಸಿದ ಮೊತ್ತ ಮತ್ತು ವ್ಯಯಿಸಿದ ಮೊತ್ತವೆಷ್ಟು? (ಜಿಲ್ಲಾವಾರು ಮಾಹಿತಿ ನೀಡುವುದು) | 2020-21ನೇ ಸಾಲಿನ ಆಯವ್ಯಯದಲ್ಲಿ ಅನ್ನಭಾಗ್ಯ ಯೋಜನೆಯ ಲೆಕ್ಕಶೀರ್ಷಿಕೆಗಳಡಿ ಒಟ್ಟು ರೂ.3,257.62 ಕೋಟಿಗಳ ಅನುದಾನವನ್ನು ಒದಗಿಸಲಾಗಿರುತ್ತದೆ. ಸದರಿ ಅನುದಾನದಲ್ಲಿ ಇದುವರೆಗೂ ರೂ.2090.46 ಕೋಟಿಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಜಿಲ್ಲಾವರು ಮಾಹಿತಿಯನ್ನು ಅನುಬಂಧ-1ರಲ್ಲಿ ಲಗತ್ತಿಸಿದೆ. |

**ಸಂಖ್ಯೆ: ಆನಾಸ 16 ಎಫ್‌ಪಿಪಿ 2021 (ಇ-ಆಫೀಸ್)**

(ಉಮೇಶ್.ವಿ.ಕತ್ತಿ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1034
2. ಸದಸ್ಯರ ಹೆಸರು : ಶ್ರೀ ದೇವಾನಂದ್ ಫುಲಸಿಂಗ್ ಚವಾಣ್ (ನಾಗಠಾಣ)
3. ಉತ್ತರಿಸುವ ದಿನಾಂಕ : 05.02.2021
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಕಳೆದ ಮೂರು ವರ್ಷಗಳಲ್ಲಿ ಎಷ್ಟು ಕೈಗಾರಿಕಾ ವಲಯಗಳನ್ನು ಸ್ಥಾಪಿಸಲಾಗಿದೆ (ಜಿಲ್ಲಾವಾರು ಮಾಹಿತಿ ನೀಡುವುದು); | ರಾಜ್ಯದಾದ್ಯಂತ ಕಳೆದ ಮೂರು ವರ್ಷಗಳಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ವತಿಯಿಂದ ಒಟ್ಟು 15 ಕೈಗಾರಿಕಾ ಪ್ರದೇಶಗಳನ್ನು ಅಭಿವೃದ್ಧಿಪಡಿಸಲಾಗಿದೆ.<br><br>ಜಿಲ್ಲಾವಾರು ಕೈಗಾರಿಕಾ ಪ್ರದೇಶಗಳ ವಿವರಗಳನ್ನು ಅನುಬಂಧ-1 ರಲ್ಲಿ ಒದಗಿಸಿದೆ. |
| (ಆ) | ಕಳೆದ ಮೂರು ವರ್ಷಗಳಲ್ಲಿ ಕೈಗಾರಿಕಾ ವಲಯಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಉದ್ದಿಮೆದಾರರಿಗೆ ಯಾವ ಪ್ರಮಾಣದಲ್ಲಿ ಕೈಗಾರಿಕಾ ನಿವೇಶನಗಳನ್ನು ಮೀಸಲಿರಿಸಿ ಹಂಚಿಕೆ ಮಾಡಲಾಗಿದೆ (ಜಿಲ್ಲಾವಾರು ವಿವರ ನೀಡುವುದು)? | ದಿನಾಂಕ: 21.03.2009ರಿಂದ ಈವರೆಗೆ ಹೊಸದಾಗಿ ಅಭಿವೃದ್ಧಿಪಡಿಸುತ್ತಿರುವ ಕೈಗಾರಿಕಾ ಪ್ರದೇಶಗಳಲ್ಲಿ ಹಂಚಿಕೆ ಪ್ರದೇಶದ ಶೇಕಡಾ 22.65ರಷ್ಟು ಜಮೀನನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಉದ್ದಿಮೆದಾರರಿಗೆ ಮೀಸಲಿರಿಸಿ ಹಂಚಿಕೆ ಮಾಡಲಾಗುತ್ತಿದೆ.<br><br>ಕಳೆದ ಮೂರು ವರ್ಷಗಳಲ್ಲಿ ಕೆ.ಐ.ಎ.ಡಿ.ಬಿ. ವತಿಯಿಂದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಸೇರಿದ 1103 ಉದ್ದಿಮೆದಾರರಿಗೆ 833.16 ಎಕರೆ ಜಮೀನು ಹಂಚಿಕೆ ಮಾಡಲಾಗಿದೆ.<br><br>ಜಿಲ್ಲಾವಾರು ವಿವರಗಳನ್ನು ಅನುಬಂಧ-2 ರಲ್ಲಿ ಒದಗಿಸಿದೆ. |

ಸಂಖ್ಯೆ: ಸಿಐ 28 ಐಎಪಿ (ಇ) 2021

(ಜಗದೀಶ ಶೆಟ್ಟರ)

ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1204

ವಿಧಾನ ಸಭೆ ಸದಸ್ಯರ ಹೆಸರು : ಶ್ರೀಮತಿ ಲಕ್ಷ್ಮೀ ಆರ್.ಹೆಬ್ಬಾಳ್ಕರ್ (ಬೆಳಗಾಂ ಗ್ರಾಮಾಂತರ)

ಉತ್ತರಿಸಬೇಕಾದ ದಿನಾಂಕ : 05.02.2021

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಉತ್ತರ ಕರ್ನಾಟಕ ಭಾಗದ ವಿವಿಧ ಜಿಲ್ಲೆಗಳಲ್ಲಿ ನ್ಯಾಯಬೆಲೆ ಅಂಗಡಿಗಳ ಮೂಲಕ ವಿತರಿಸುತ್ತಿರುವ ಆಹಾರ ಧಾನ್ಯಗಳಾವುವು; ಅದರ ಪ್ರಮಾಣವೆಷ್ಟು; | ರಾಜ್ಯದ್ಯಾದಂತ ಸಾರ್ವಜನಿಕ ಪಡಿತರ ವಿತರಣಾ ಪದ್ಧತಿಯಲ್ಲಿ ಪ್ರತಿ ಮಾಹೆ ಪ್ರತಿ ಅಂತ್ಯೋದಯ ಪಡಿತರ ಚೀಟಿಗೆ 35 ಕೆ.ಜಿ, ಪ್ರತಿ ಆದ್ಯತಾ(ಪಿಹೆಚ್‌ಹೆಚ್) ಫಲಾನುಭವಿಗೆ 5 ಕೆ.ಜಿ. ಅಕ್ಕಿಯನ್ನು ಹಾಗೂ ಪ್ರತಿ ಆದ್ಯತಾ (ಪಿ.ಹೆಚ್.ಹೆಚ್) ಪಡಿತರ ಚೀಟಿಗೆ 2 ಕೆ.ಜಿ ಗೋಧಿಯನ್ನು ವಿತರಿಸಲಾಗುತ್ತಿದೆ. ಎಪಿಎಲ್ ಏಕ ಸದಸ್ಯ ಪಡಿತರ ಚೀಟಿಗೆ 5 ಕೆ.ಜಿ ಅಕ್ಕಿ ಮತ್ತು ಇಬ್ಬರಿಗಿಂತ ಹೆಚ್ಚಿನ ಸದಸ್ಯರಿರುವ ಪಡಿತರ ಚೀಟಿಗೆ 10 ಕೆ.ಜಿ ಯಂತೆ ಪ್ರತಿ ಕೆ.ಜಿ ಗೆ ರೂ. 15/-ರ ಸಬ್ಸಿಡಿ ದರದಲ್ಲಿ ವಿತರಿಸಲಾಗುತ್ತಿದೆ. |
| ಆ | ಪಡಿತರದಾರರಿಗೆ ಉಚಿತವಾಗಿ ಅನ್ನಭಾಗ್ಯ ಯೋಜನೆಯ ಅಕ್ಕಿ ವಿತರಿಸಲಾಗುವುದಿಲ್ಲವೇ; ಪ್ರತಿ ಕೆ.ಜಿ.ಗೆ 2 ರಿಂದ 3 ರೂ ದರ ನಿಗದಿಗೆ ಸರ್ಕಾರದ ಸ್ಪಷ್ಟನೆಯೇನು; ಇದಕ್ಕೆ ಪರ್ಯಾಯವಾಗಿ ನೀಡಬಹುದಾದ ಇನ್ನಿತರ ವಸ್ತುಗಳಾವುವು; | ಅನ್ನಭಾಗ್ಯ ಯೋಜನೆಯಡಿ ಅಂತ್ಯೋದಯ ಮತ್ತು ಆದ್ಯಾತ ಪಡಿತರ ಚೀಟಿದಾರರಿಗೆ ಉಚಿತವಾಗಿ ಪಡಿತರ ವಿತರಿಸಲಾಗುತ್ತಿದೆ. |
| ಇ | ಆಹಾರ ಸೋರಿಕೆ ಹಾಗೂ ಕಳ್ಳ ಸಾಗಾಣಿಕೆಯನ್ನು ತಡೆಗಟ್ಟಲು ಸರ್ಕಾರ ಕೈಗೊಂಡ ಕ್ರಮಗಳೇನು? | ರಾಜ್ಯದ ಸಾರ್ವಜನಿಕ ವಿತರಣಾ ಪದ್ಧತಿಯಡಿ ವಿತರಿಸುತ್ತಿರುವ ಪಡಿತರ ಪದಾರ್ಥಗಳು ಸಂಪೂರ್ಣವಾಗಿ ಫಲಾನುಭವಿಗಳಿಗೆ ತಲುಪಲು ವ್ಯವಸ್ಥೆಯಲ್ಲಿ ಕೆಳಗೆ ವಿವರಿಸಿರುವಂತೆ ಹಲವಾರು ಸುಧಾರಣೆಗಳನ್ನು ಜಾರಿಗೆ ತಂದು ಪಡಿತರ ವ್ಯವಸ್ಥೆಯಲ್ಲಿ ನ್ಯಾಯಬೆಲೆ ಅಂಗಡಿಗಳಲ್ಲಿ ಪಾರದರ್ಶಕವಾಗಿ ಪಡಿತರ ಹಂಚಿಕೆ ಜಾರಿಗೊಳಿಸಲು ಕ್ರಮ ವಹಿಸಲಾಗಿದೆ.<br>1.ರಾಜ್ಯದ ಎಲ್ಲಾ ಪಡಿತರ ಚೀಟಿಗಳು ಮತ್ತು ಫಲಾನುಭವಿಗಳನ್ನು ಅವರ ಆಧಾರ್ ನೊಂದಿಗೆ ಜೋಡಣೆ ಮಾಡಲಾಗಿರುತ್ತದೆ.<br>2. ಪ್ರತಿ ಮಾಹೆ ಪಡಿತರ ಪದಾರ್ಥಗಳನ್ನು ನೇರವಾಗಿ ಫಲಾನಿಭವಿಗಳಿಗೆ ತಲುಪಿಸಲು ಬಯೋಮೆಟ್ರಿಕ್ ವ್ಯವಸ್ಥೆಯನ್ನು ಜಾರಿಗೆ ತರಲಾಗಿದೆ.<br>3. ಎಲ್ಲಾ ನ್ಯಾಯಬೆಲೆ ಅಂಗಡಿಗಳಲ್ಲಿ ಪಿ.ಓ.ಎಸ್ ವ್ಯವಸ್ಥೆ ಜಾರಿಗೊಳಿಸಿದ್ದು, ನೈಜ ಫಲಾನುಭವಿಗೆ ಬಯೋಮೆಟ್ರಿಕ್ ಮೂಲಕ |

| | | |
|---|---|---|
| | | ಪಾರದರ್ಶಕವಾಗಿ ಪಡಿತರ ವಿತರಣೆಯಗುವುದನ್ನು ಖಾತರಿಪಡಿಸಲಾಗುತ್ತದೆ.<br>4. ಪಡಿತರ ಪದಾರ್ಥಗಳನ್ನು ಸಗಟು ಮಳಿಗೆಗಳಲ್ಲಿ ದಾಸ್ತಾನಿರಿಸುವುದು ಹಾಗೂ ನ್ಯಾಯಬೆಲೆ ಅಂಗಡಿಗಳಿಗೆ ಬಿಲ್ಲಿಂಗ್ ಮಾಡುವ ವ್ಯವಸ್ಥೆಯನ್ನು ಕೂಡ ಸಂಪೂರ್ಣ ಗಣಕೀಕರಣಗೊಳಿಸಿ ಆನ್‌ಲೈನ್ ವ್ಯವಸ್ಥೆ ಜಾರಿಯಲ್ಲಿದೆ.<br>5. ಪಡಿತರ ವ್ಯವಸ್ಥೆಯಲ್ಲಿ ಪಾರದರ್ಶಕತೆಯನ್ನು ಜಾರಿಗೆ ತರುವುದರೊಂದಿಗೆ ಫಲಾನುಭವಿಗಳ ಕುಂದುಕೊರತೆ ನಿವಾರಣಾ ವ್ಯವಸ್ಥೆಯನ್ನು ಕೂಡ ಜಾರಿಗೆ ತರಲು ಆಹಾರ ಅಧಾಲತ್, ಜಾಗೃತ ಸಮಿತಿಗಳು, ಸಹಾಯವಾಣಿ, ಹಂಚಿಕೆ ಬಗ್ಗೆ ಪಡಿತರ ಚೀಟಿದಾರರಿಗೆ ಎಸ್.ಎಂ.ಎಸ್ ರವಾನೆ ಇತ್ಯಾದಿ ಕ್ರಮಗಳೂ ಕೂಡ ಜಾರಿಯಲ್ಲಿವೆ.<br>6. ನ್ಯಾಯಬೆಲೆ ಅಂಗಡಿಗಳಲ್ಲಿ ಪಿ.ಓ.ಎಸ್ ವ್ಯವಸ್ಥೆಯಲ್ಲಿ ಪಡಿತರ ಚೀಟಿದಾರರಿಗೆ ಆಧಾರ್ ಬಯೋಮೆಟ್ರಿಕ್ ಮುಖಾಂತರ ಪಡಿತರ ವಿತರಣೆ ಮಾಡಲಾಗುತ್ತಿರುವುದರಿಂದ ಅಂಗಡಿಯಲ್ಲಿ ಉಳಿಕೆಯಾಗುವ ಪದಾರ್ಥವನ್ನು ಲೆಕ್ಕಕ್ಕೆ ತೆಗೆದುಕೊಂಡು ಮುಂದಿನ ಮಾಹೆಯ ಹಂಚಿಕೆಯಲ್ಲಿ ಆರಂಭಿಕ ದಾಸ್ತಾನಾಗಿ ಕಡಿತಗೊಳಿಸಲಾಗುತ್ತದೆ. ಇದರಿಂದಾಗಿ ನ್ಯಾಯಬೆಲೆ ಅಂಗಡಿಯಲ್ಲಿ ಉಳಿಕೆಯಾಗುವ ಪದಾರ್ಥಗಳನ್ನು ದುರುಪಯೋಗವಾಗದಂತೆ ತಡೆಗಟ್ಟಿ ಎಲ್ಲವನ್ನೂ ಹಂಚಿಕೆಗೆ ಬಳಸಲು ಕ್ರಮ ಕೈಗೊಳ್ಳಲಾಗಿದೆ.<br>7. ದುರುಪಯೋಗ ಅಥವಾ ಫಲಾನುಭವಿಗಳಿಗೆ ಮೋಸ/ತೊಂದರೆ ಮಾಡುವ ನ್ಯಾಯಬೆಲೆ ಅಂಗಡಿಗಳ ಮೇಲೆ ಸಾರ್ವಜನಿಕ ಪಡಿತರ ವಿತರಣಾ ನಿಯಂತ್ರಣ ಆದೇಶ ಮತ್ತು ಅಗತ್ಯ ವಸ್ತುಗಳ ಕಾಯ್ದೆಯಡಿ ಪ್ರಕರಣಗಳನ್ನು ದಾಖಲಿಸಿ ಕ್ರಮ ಕೈಗೊಳ್ಳಲಾಗುತ್ತಿದೆ. |

ಆನಾಸ 54 ಡಿಆರ್‌ಎ 2021 (ಇ-ಆಫೀಸ್)

(ಉಮೇಶ .ವಿ. ಕತ್ತಿ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1185

ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ನರೇಂದ್ರ ಆರ್. (ಹನೂರು)

ಉತ್ತರಿಸಬೇಕಾದ ದಿನಾಂಕ : 05.02.2021

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ, ಕಡುಬಡವರಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಮೇಲ್ ವರ್ಗದವರಿಗೆ ಬಿ.ಪಿ.ಎಲ್. ಪಡಿತರ ಚೀಟಿಯನ್ನು ಹೊಂದಿರುವುದು ಹಾಗೂ ಕಾಳಸಂತೆಯಲ್ಲಿ ಪಡಿತರ ಧವಸ ಧಾನ್ಯಗಳು ದುರುಪಯೋಗ (ಮಾರಾಟ) ವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುತ್ತದೆ. |
| ಆ | ಬಂದಿದ್ದಲ್ಲಿ, ಇವರ ವಿರುದ್ಧ ಸರ್ಕಾರ ತೆಗೆದುಕೊಂಡಿರುವ ಕಠಿಣ ಕ್ರಮಗಳೇನು; (ಸಂಪೂರ್ಣ ವಿವರ ನೀಡುವುದು) | ಅನರ್ಹ ಪಡಿತರ ಚೀಟಿಗಳನ್ನು ಪತ್ತೆ ಹಚ್ಚುವ ಕಾರ್ಯ ನಿರಂತರವಾಗಿ ನಡೆಯುತ್ತಿದ್ದು, ರಾಜ್ಯದಲ್ಲಿ ಕಳೆದ 3 ವರ್ಷಗಳಲ್ಲಿ ಒಟ್ಟು 2,28,188 ಅನರ್ಹ ಬಿಪಿಎಲ್ ಪಡಿತರ ಚೀಟಿಗಳನ್ನು ಪತ್ತೆ ಹಚ್ಚಿ ರದ್ದು ಪಡಿಸಲಾಗಿರುತ್ತದೆ.<br><br>ಕಾಳಸಂತೆಯಲ್ಲಿ ಪಡಿತರ ದವಸ ಧಾನ್ಯಗಳನ್ನು ಅಕ್ರಮ ಮಾರಾಟ ಮಾಡುವವರ ವಿರುದ್ಧ ಏಪ್ರಿಲ್-2020 ರಿಂದ ಡಿಸೆಂಬರ್-2020 ರವರೆಗೆ ಒಟ್ಟು 430 ದಾಳಿಗಳು ನಡೆಸಿದ್ದು, 425 ಮಂದಿಯನ್ನು ಬಂಧಿಸಲಾಗಿದೆ, 156 ಜನರ ಮೇಲೆ ಕಾನೂನು ರೀತ್ಯಾ ಕ್ರಮ ಕೈಗೊಂಡಿದ್ದು, ಒಟ್ಟು 973.50 ಲಕ್ಷ ಮೌಲ್ಯದ ವಸ್ತುಗಳನ್ನು ವಶಪಡಿಸಿಕೊಳ್ಳಲಾಗಿರುತ್ತದೆ. |
| ಇ | ಪ್ರಸ್ತುತ ಬಡವರಿಗೆ ಪಡಿತರದಲ್ಲಿ ವಿತರಿಸುವ (ಧವಸಧಾನ್ಯಗಳು) ಪಡಿತರಗಳು ಯಾವುವು; ಹಾಗೂ ಅವುಗಳಿಗೆ ಸರ್ಕಾರ ವಿಧಿಸಿರುವ ದರಗಳೆಷ್ಟು; | ಅನ್ನ ಭಾಗ್ಯ ಯೋಜನೆಯಡಿ ಪ್ರತಿ ತಿಂಗಳು ಆದ್ಯತಾ(ಬಿ.ಪಿ.ಎಲ್) ಪಡಿತರ ಚೀಟಿಯ ಪ್ರತಿ ಸದಸ್ಯರಿಗೆ 5 ಕೆ.ಜಿ ಅಕ್ಕಿ ಹಾಗೂ ಪ್ರತಿ ಪಡಿತರ ಚೀಟಿಗೆ 2 ಕೆ.ಜಿ ಗೋಧಿ, ಅಂತ್ಯೋದಯ ಪಡಿತರ ಚೀಟಿಗೆ 35 ಕೆ.ಜಿ ಅಕ್ಕಿಯನ್ನು ಉಚಿತವಾಗಿ ವಿತರಿಸಲಾಗುತ್ತಿದೆ.<br>ಪ್ರತಿ ತಿಂಗಳು ಏಕ ಸದಸ್ಯ ಆದ್ಯತೇತರ(ಎ.ಪಿ.ಎಲ್) ಪಡಿತರ ಚೀಟಿಗೆ 5 ಕೆ.ಜಿ |

| | | |
|---|---|---|
| | | ಅಕ್ಕಿ, ಎರಡು ಮತ್ತು ಅದಕ್ಕಿಂತ ಹೆಚ್ಚು ಸದಸ್ಯರಿರುವ ಪಡಿತರ ಚೀಟಿಗೆ ಪ್ರತಿ ಕೆ.ಜಿಗೆ ರೂ.15/- ರ ಸಬ್ಸಿಡಿ ದರದಲ್ಲಿ ವಿತರಿಸಲಾಗುತ್ತಿದೆ. |
| ಈ | ಈ ಅಕ್ರಮ ಪಡಿತರ ಚೀಟಿಗಳನ್ನು ಪತ್ತೆ ಹಚ್ಚಲು ಹಾಗೂ ಅವುಗಳನ್ನು ವಶಪಡಿಸಿಕೊಳ್ಳಲು ಸರ್ಕಾರ ಅನುಸರಿಸುವ ಮಾನದಂಡಗಳೇನು; (ವಿವರ ನೀಡುವುದು) | ಈ ಕೆಳಕಂಡ ಅರ್ಹತೆಗಳನ್ನು ಹೊಂದಿದವರು ಆದ್ಯತಾ ಪಡಿತರ ಚೀಟಿಯನ್ನು (ಬಿ.ಪಿ.ಎಲ್) ಪಡೆಯಲು ಅರ್ಹರಿರುವುದಿಲ್ಲ.<br>1. ವೇತನವನ್ನು ಗಣನೆಗೆ ತೆಗೆದುಕೊಳ್ಳದೆ ಎಲ್ಲಾ ಖಾಯಂ ನೌಕರರು ಅಂದರೆ, ಸರ್ಕಾರದ ಅಥವಾ ಸರ್ಕಾರದಿಂದ ಅನುದಾನವನ್ನು ಪಡೆಯುತ್ತಿರುವ ಸಂಸ್ಥೆಗಳು ಅಥವಾ ಸರ್ಕಾರಿ ಪ್ರಾಯೋಜಿತ, ಸರ್ಕಾರಿ ಸ್ವಾಮ್ಯದ ಸಂಸ್ಥೆಗಳು/ ಮಂಡಳಿಗಳು/ ನಿಗಮಗಳು/ ಸ್ವಾಯತ್ತ ಸಂಸ್ಥೆಗಳೂ ಇತ್ಯಾದಿ: ಒಳಗೊಂಡಂತೆ ಆದಾಯ ತೆರಿಗೆ/ಸೇವಾ ತೆರಿಗೆ/ವ್ಯಾಟ್/ವೃತ್ತಿ ತೆರಿಗೆ ಪಾವತಿಸುವ ಎಲ್ಲಾ ಕುಟುಂಬಗಳು.<br>2. ಗ್ರಾಮೀಣ ಪ್ರದೇಶದಲ್ಲಿ 3 ಹೆಕ್ಟೇರ್ ಒಣಭೂಮಿ ಅಥವಾ ತತ್ಸಮಾನ ನೀರಾವರಿ ಭೂಮಿ ಹೊಂದಿರುವ ಕುಟುಂಬಗಳು ಅಥವಾ ಗ್ರಾಮೀಣ ಪ್ರದೇಶವನ್ನು ಹೊರತುಪಡಿಸಿ ನಗರ ಪ್ರದೇಶಗಳಲ್ಲಿ 1000 ಚದರ ಅಡಿಗಿಂತಲೂ ಹೆಚ್ಚಿನ ವಿಸ್ತೀರ್ಣದ ಪಕ್ಕಾ ಮನೆಯನ್ನು ಸ್ವಂತವಾಗಿ ಹೊಂದಿರುವ ಕುಟುಂಬಗಳು.<br>3. ಜೀವನೋಪಾಯಕ್ಕಾಗಿ ಸ್ವತಃ ಓಡಿಸುವ ಒಂದು ವಾಣಿಜ್ಯ ವಾಹನವನ್ನು ಅಂದರೆ ಟ್ರಾಕ್ಟರ್, ಮ್ಯಾಕ್ಸಿ ಕ್ಯಾಬ್ ಟ್ಯಾಕ್ಸಿ ಇತ್ಯಾದಿಗಳನ್ನು ಹೊಂದಿದ ಕುಟುಂಬವನ್ನು ಹೊರತುಪಡಿಸಿ, ನಾಲ್ಕು ಚಕ್ರದ ವಾಹನಗಳನ್ನು ಹೊಂದಿರುವ ಎಲ್ಲಾ ಕುಟುಂಬಗಳು.<br>4. ಕುಟುಂಬದ ವಾರ್ಷಿಕ ಆದಾಯವು ರೂ.1.20 ಲಕ್ಷಗಳಿಗಿಂತ ಹೆಚ್ಚು ಇರುವ ಕುಟುಂಬಗಳು.<br>ಸದರಿ ಮಾನದಂಡಗಳನ್ವಯ ಪರಿಶೀಲಿಸಿ ಅನರ್ಹ ಪಡಿತರ ಚೀಟಿಯನ್ನು ರದ್ದು ಪಡಿಸಲಾಗುತ್ತಿದೆ. |
| ಉ | ರಾಜ್ಯದಲ್ಲಿ ಕಳೆದ ಮೂರು ವರ್ಷಗಳಿಂದ ಇದುವರೆಗೂ ಎಷ್ಟು ಅಕ್ರಮ ಪಡಿತರ ಚೀಟಿಗಳನ್ನು ವಶಪಡಿಸಿಕೊಳ್ಳಲಾಗಿದೆ; ಅವರಿಗೆ ವಿಧಿಸಿದರುವ ಶಿಕ್ಷೆ ಹಾಗೂ ದಂಡದ ಮೊತ್ತವೆಷ್ಟು; (ಜಿಲ್ಲಾವಾರು ವಿವರ ನೀಡುವುದು) | ರಾಜ್ಯದಲ್ಲಿ ಕಳೆದ ಮೂರು ವರ್ಷಗಳಿಂದ ಇದುವರೆಗೂ 2,28,188 ಆದ್ಯತಾ (ಬಿ.ಪಿ.ಎಲ್) ಪಡಿತರ ಚೀಟಿಗಳಲ್ಲಿ ಅನರ್ಹ ಪಡಿತರ ಚೀಟಿಗಳನ್ನು ಪತ್ತೆ ಹಚ್ಚಿ ರದ್ದುಪಡಿಸಲಾಗಿದೆ ಹಾಗೂ ರೂ.3,07,36,170/- ದಂಡದ ಮೊತ್ತವನ್ನು ಸರ್ಕಾರಕ್ಕೆ ಪಾವತಿಸಲಾಗಿದೆ. (ಜಿಲ್ಲಾವಾರು ಮಾಹಿತಿ ಲಗತ್ತಿಸಿದೆ) |
| ಊ | ಚಾಮರಾಜನಗರ ಜಿಲ್ಲೆಯ ಹನೂರು | ಹೌದು |

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1088
2. ಸದಸ್ಯರ ಹೆಸರು : ಶ್ರೀ ಶಿವಣ್ಣ ಬಿ. (ಆನೇಕಲ್)
3. ಉತ್ತರಿಸುವ ದಿನಾಂಕ : 05.02.2021
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | 2020-21ನೇ ಸಾಲಿಗೆ ಅನೇಕಲ್ ತಾಲ್ಲೂಕಿನಲ್ಲಿರುವ ಕೈಗಾರಿಕಾ ಪ್ರದೇಶಗಳಲ್ಲಿ ಮೂಲಭೂತ ಸೌಕರ್ಯಗಳ ಅಭಿವೃದ್ಧಿಗೆ ಮಂಜೂರು ಮಾಡಿರುವ ಅನುದಾನವೆಷ್ಟು (ಮಾಹಿತಿಯನ್ನು ನೀಡುವುದು); | 2020-21ನೇ ಸಾಲಿನಲ್ಲಿ ಆನೇಕಲ್ ತಾಲ್ಲೂಕಿನ ಕೈಗಾರಿಕಾ ಪ್ರದೇಶಗಳ ಮೂಲಭೂತ ಸೌಕರ್ಯಗಳ ಅಭಿವೃದ್ಧಿಗೆ ಯಾವುದೇ ಅನುದಾನ ಮಂಜೂರಾಗಿರುವುದಿಲ್ಲ.<br><br>2019-20ನೇ ಸಾಲಿನಲ್ಲಿ ಕೈಗಾರಿಕಾ ಪ್ರದೇಶಗಳ ಕ್ಲಿಷ್ಟಕರ ಮೂಲಭೂತ ಸೌಕರ್ಯ ಯೋಜನೆಯಡಿ ಆನೇಕಲ್ ತಾಲ್ಲೂಕಿನ ಬೊಮ್ಮಸಂದ್ರ 1, 2 ಮತ್ತು 3ನೇ ಹಂತದ ಕೈಗಾರಿಕಾ ಪ್ರದೇಶದ ರಸ್ತೆಗಳನ್ನು ಅಭಿವೃದ್ಧಿಪಡಿಸಲು ರೂ.9.50 ಕೋಟಿ ಅನುದಾನ ಮಂಜೂರಾಗಿರುತ್ತದೆ.<br><br>ಒಟ್ಟು 9.5 ಕಿ.ಮೀ. ಉದ್ದದ ರಸ್ತೆಗಳಿಗೆ ಡಾಂಬರೀಕರಣ, ಚರಂಡಿಗಳ ಹೂಳು ತೆಗೆಯುವುದು, Culvert ಗಳ ನಿರ್ಮಾಣ, ಆಯ್ದ ಭಾಗಗಳಲ್ಲಿ ಆರ್.ಸಿ.ಸಿ ಚರಂಡಿ ನಿರ್ಮಾಣ ಕಾಮಗಾರಿಗಳು ಪ್ರಗತಿಯಲ್ಲಿದ್ದು, ಪ್ರಸ್ತುತ 7.50 ಕಿ.ಮೀ ಉದ್ದದ ರಸ್ತೆ ಕಾಮಗಾರಿ ಕಾರ್ಯವು ಪೂರ್ಣಗೊಂಡಿರುತ್ತದೆ. ಉಳಿಕೆ ಕಾಮಗಾರಿ ಪ್ರಗತಿಯಲ್ಲಿದೆ. |
| (ಆ) | ಈ ಸಾಲಿನಲ್ಲಿ ಕೈಗಾರಿಕಾ ಪ್ರದೇಶಗಳಲ್ಲಿ ಕೈಗೊಳ್ಳಲು ಪ್ರಸ್ತಾಪಿಸಿರುವ ಕಾಮಗಾರಿಗಳು ಯಾವುವು (ಪೂರ್ಣ ಮಾಹಿತಿಯನ್ನು ನೀಡುವುದು)? | |

ಸಂಖ್ಯೆ: ಸಿಐ 32 ಐಎಪಿ (ಇ) 2021

(ಜಗದೀಶ ಶೆಟ್ಟರ)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **1125**
ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ರಾಜಾ ವೆಂಕಟಪ್ಪ ನಾಯಕ್ (ಮಾನ್ವಿ)
ಉತ್ತರಿಸಬೇಕಾದ ದಿನಾಂಕ : 05.02.2021.
ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ, ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆಯಲ್ಲಿ ಉಪ ನಿರ್ದೇಶಕರು, ಸಹಾಯಕ ನಿರ್ದೇಶಕರು, ಆಹಾರ ನಿರೀಕ್ಷಕರು, ಆಹಾರ ಶಿರಸ್ತೇದಾರರ ಹುದ್ದೆಗಳು ಹಲವಾರು ವರ್ಷಗಳಿಂದ ಖಾಲಿಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಈ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು.) | ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯಲ್ಲಿ ಗ್ರೂಪ್ ಎ, ಬಿ, ಸಿ ಮತ್ತು ಡಿ ವೃಂದದಲ್ಲಿ ಒಟ್ಟು 1566 ಮಂಜೂರಾದ ಹುದ್ದೆಗಳಿದ್ದು, 809 ಹುದ್ದೆಗಳನ್ನು ನೇರನೇಮಕಾತಿ ಮತ್ತು ಮುಂಬಡ್ತಿ ಮೂಲಕ ಭರ್ತಿ ಮಾಡಲಾಗಿದೆ. 757 ಖಾಲಿ ಹುದ್ದೆಗಳು ಇರುತ್ತವೆ.<br><br>2019-20ನೇ ಸಾಲಿನಲ್ಲಿ ಈ ಕೆಳಕಂಡಂತೆ ಪದೋನ್ನತಿಯಿಂದ ತುಂಬಬಹುದಾದ ಹುದ್ದೆಗಳನ್ನು ಭರ್ತಿ ಮಾಡಲಾಗಿದೆ.<br><br>ಕ್ರ.ಸಂ / ಹುದ್ದೆಯ ವಿವರ / ಮುಂಬಡ್ತಿ ನೀಡಲಾದ ಒಟ್ಟು ಸಂಖ್ಯೆ<br>1. / ಉಪ ನಿರ್ದೇಶಕರು / 4<br>2. / ಸಹಾಯಕ ನಿರ್ದೇಶಕರು / 25<br>3. / ವ್ಯವಸ್ಥಾಪಕರು/ಆಹಾರ ಶಿರಸ್ತೇದಾರರು / 149<br>4. / ಪ್ರಥಮ ದರ್ಜೆ ಸಹಾಯಕರು/ಆಹಾರ ನಿರೀಕ್ಷಕರು / 10<br><br>ಪ್ರಸ್ತುತ ಆರ್ಥಿಕ ಇಲಾಖೆಯ ಸುತ್ತೋಲೆ ಸಂಖ್ಯೆ: ಆಇ 03 ಬಿಇಎಂ 2020, ದಿನಾಂಕ: 06.07.2020ರಲ್ಲಿ ನೀಡಿರುವ ನಿರ್ದೇಶನದನ್ವಯ ನೇರನೇಮಕಾತಿ ಹುದ್ದೆಗಳನ್ನು ಭರ್ತಿ ಮಾಡುವ ಪ್ರಕ್ರಿಯೆಯನ್ನು ಸ್ಥಗಿತಗೊಳಿಸಲಾಗಿದೆ. |
| ಆ) | ಇಲಾಖೆಯಲ್ಲಿ ಅನ್ಯ ಇಲಾಖೆಗಳಿಂದ ನಿಯೋಜನೆ ಮೇರೆಗೆ ಅಧಿಕಾರಿಗಳು/ಸಿಬ್ಬಂದಿ ವರ್ಗದವರು ಕಾರ್ಯ ನಿರ್ವಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇದರಿಂದಾಗಿ ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆಯಲ್ಲಿ ದಕ್ಷತೆ ಕಡಿಮೆಯಾಗುತ್ತಿದ್ದು, ಅನ್ಯ ಇಲಾಖೆಗಳ ನಿಯೋಜನೆಯನ್ನು ತಪ್ಪಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ? (ಸಂಪೂರ್ಣ ಮಾಹಿತಿ ನೀಡುವುದು.) | ಬಂದಿದೆ.<br><br>ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮ 2012ರನ್ವಯ ವ್ಯವಸ್ಥಾಪಕರು/ಆಹಾರ ಶಿರಸ್ತೇದಾರರ ವೃಂದದಲ್ಲಿ ಶೇಕಡ 25%ರಷ್ಟು ಹಾಗೂ ಪ್ರಥಮ ದರ್ಜೆ ಸಹಾಯಕರು/ಆಹಾರ ನಿರೀಕ್ಷಕರ ವೃಂದದಲ್ಲಿ ಶೇಕಡ 5%ರಷ್ಟು ಹುದ್ದೆಗಳಿಗೆ ಕಂದಾಯ ಇಲಾಖೆಯ ನೌಕರರನ್ನು ನಿಯೋಜನೆ ಮೇಲೆ ನೇಮಿಸಲು ಅವಕಾಶ ಕಲ್ಪಿಸಲಾಗಿದೆ. ಆಹಾರ ಇಲಾಖೆಯಲ್ಲಿ ಅಧಿಕಾರಿ/ಸಿಬ್ಬಂದಿಗಳ ಕೊರತೆ ಇರುವ ಕಾರಣದಿಂದ ಅನ್ಯ ಇಲಾಖೆಯ ಸಿಬ್ಬಂದಿ/ಅಧಿಕಾರಿಗಳನ್ನು ನಿಯೋಜನೆ ಮೇಲೆ ನೇಮಿಸಲಾಗುತ್ತದೆ. |

ಆನಾಸ 17 ಆಇಸೇ 2021 (ಇ-ಆಫೀಸ್)

(ಉಮೇಶ ವಿ. ಕತ್ತಿ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ, ಇಲಾಖಾ ಸಚಿವರು.

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1113
ಸದಸ್ಯರ ಹೆಸರು : ಶ್ರೀ ಅಭಯ್ ಪಾಟೀಲ್ (ಬೆಳಗಾಂ ದಕ್ಷಿಣ)
ಉತ್ತರಿಸಬೇಕಾದ ದಿನಾಂಕ : 05.02.2021.
ಉತ್ತರಿಸುವವರು : ಮಾನ್ಯ ಸಣ್ಣ ಕೈಗಾರಿಕೆ ಹಾಗೂ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆಯಲ್ಲಿರುವ ವಿವಿಧ ಬಗೆಯ ಕೈಗಾರಿಕೆಗಳು ಯಾವುವು; ಅವುಗಳ ಸಂಪೂರ್ಣ ವಿವರ ನೀಡುವುದು (ಮತಕ್ಷೇತ್ರವಾರು, ತಾಲ್ಲೂಕುವಾರು ವಿವರ ನೀಡುವುದು) | ಜಿಲ್ಲೆಯಲ್ಲಿ ನೋಂದಣಿಯಾಗಿರುವ ವಿವಿಧ ಬಗೆಯ ಕೈಗಾರಿಕೆಗಳ ತಾಲ್ಲೂಕುವಾರು ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ. |
| ಆ) | ಬೆಳಗಾವಿಯ ಉದ್ಯಮಬಾಗ, ಮಚ್ಚೆ, ಅನಗೋಳ ಕೈಗಾರಿಕಾ ಪ್ರದೇಶದಲ್ಲಿ Critical Infrastructure Development Scheme ಯೋಜನೆಯಲ್ಲಿ ಮೂಲ ಸೌಲಭ್ಯಗಳನ್ನು ಒದಗಿಸಲು ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ; ಸಲ್ಲಿಸಿದ್ದಲ್ಲಿ, ಈ ಕುರಿತು ಸರ್ಕಾರದ ನಿಲುವೇನು; | ಬೆಳಗಾವಿ ದಕ್ಷಿಣ ಮತ ಕ್ಷೇತ್ರದ ಉದ್ಯಮಭಾಗ, ಮಚ್ಛೆ, ಅನಗೋಳ ಕೈಗಾರಿಕಾ ಪ್ರದೇಶದಲ್ಲಿ Critical Infrastructure Development Scheme ಯೋಜನೆಯಡಿ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಕೇಂದ್ರಕಛೇರಿಯು ದಿನಾಂಕ 23/9/2019 ರಂದು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತದೆ. ಸದರಿ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಗೆ ಸಲ್ಲಿಸಲಾಗಿರುತ್ತದೆ. |
| ಇ) | ಬೆಳಗಾವಿ ದಕ್ಷಿಣ ಮತಕ್ಷೇತ್ರದ ವಿವಿಧ ಕೈಗಾರಿಕಾ ಪ್ರದೇಶಗಳಲ್ಲಿ ಅತೀವೃಷ್ಟಿಯಿಂದ ರಸ್ತೆಗಳು ಹಾನಿಗೊಳಗಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಕುರಿತು ಸರ್ಕಾರಕ್ಕೆ ಅನುದಾನ ಒದಗಿಸಲು ಕೋರಲಾಗಿದೆಯೇ; ಹಾಗಿದ್ದಲ್ಲಿ, ಅನುದಾನ ಬಿಡುಗಡೆಗಾಗಿ ಸರ್ಕಾರದ ನಿರ್ಧಾರವೇನು; | ಬೆಳಗಾವಿ ದಕ್ಷಿಣ ಮತಕ್ಷೇತ್ರದ ವಿವಿಧ ಕೈಗಾರಿಕಾ ಪ್ರದೇಶಗಳಲ್ಲಿ ಅತೀವೃಷ್ಟಿಯಿಂದ ರಸ್ತೆಗಳು ಹಾನಿಗೊಳಗಾಗಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br>• ಈ ಕುರಿತು ಶ್ರೀ ಅಭಯಪಾಟೀಲ್, ಮಾನ್ಯ ಶಾಸಕರು, ಬೆಳಗಾವಿ ದಕ್ಷಿಣ ವಿಧಾನಸಭಾ ಕ್ಷೇತ್ರ ಇವರು ತಮ್ಮ ಪತ್ರ ದಿನಾಂಕ ದಿನಾಂಕ 1/7/2019 ಮತ್ತು 2/8/2019 ರನ್ವಯ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.<br>• ಸದರಿ ಪ್ರಸ್ತಾವನೆಯನ್ನು ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಬೆಳಗಾವಿ ಇವರು ಕೇಂದ್ರ ಕಛೇರಿಗೆ ತಮ್ಮ ಪತ್ರ ದಿನಾಂಕ 23/8/2019 ರನ್ವಯ ಕೇಂದ್ರ ಕಛೇರಿಗೆ ಸಲ್ಲಿಸಿರುತ್ತಾರೆ.<br>• ಕೇಂದ್ರ ಕಛೇರಿಯು ದಿನಾಂಕ: 23/9/2019ರಂದು ಉದ್ಯಮ ಬಾಗದ ಅನಗೋಳ, ಮಜಗಾಂವ (ಬೆಮಸಿಲ್) ಕೈಗಾರಿಕಾ ಪ್ರದೇಶಗಳಲ್ಲಿ ಮೂಲಭೂತ ಸೌಲಭ್ಯ ಕಲ್ಪಿಸಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತದೆ.<br>• ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯು ಸದರಿ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಯ ಅನುಮೋದನೆಗೆ ಸಲ್ಲಿಸಿತ್ತು. ಆದರೆ ಆರ್ಥಿಕ ಇಲಾಖೆಯು ತನ್ನ ಟಿಪ್ಪಣಿ ಸಂಖ್ಯೆ: ಎಫ್‌ಡಿ 22 ವೆಚ್ಚ–1/2019, ದಿ: 17.02.2020ರಲ್ಲಿ ಯಾವುದೇ ಹೊಸ ಪ್ರಸ್ತಾವನೆಗಳನ್ನು ಕೈಗೆತ್ತಿಕೊಳ್ಳಲು ಅನುಮೋದನೆ ನೀಡಬಾರದೆಂದು ಮತ್ತು 2019–20ನೇ ಸಾಲಿನಲ್ಲಿ ಹಂಚಿಕೆಯಾಗಿರುವ ಅನುದಾನವನ್ನು ಈ ಹಿಂದೆ ಸರ್ಕಾರದಿಂದ ಅನುಮೋದನೆಯಾಗಿರುವ ಕಾಮಗಾರಿಗಳಿಗೆ ಮಾತ್ರವೇ ವಿನಿಯೋಗಿಸಬೇಕೆಂದು ತಿಳಿಸಿರುತ್ತದೆ ಮತ್ತು BEMSIL ಕೈಗಾರಿಕಾ ವಸಾಹತುವು ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕಾ ಅಭಿವೃದ್ಧಿ ನಿಗಮದ ಕೈಗಾರಿಕಾ ವಸಾಹತು ಆಗಿರದ ಕಾರಣ ಸದರಿ ಪ್ರಸ್ತಾವನೆಯು ತಿರಸ್ಕೃತವಾಗಿರುತ್ತದೆ. |

| | | |
|---|---|---|
| ಈ) | ಪ್ರಸ್ತಾಪಿತ ಅಂದಾಜು ಮೊತ್ತದ ಪ್ರತಿಶತ 25 ರಷ್ಟು ವಂತಿಕೆಯನ್ನು ಬೆಳಗಾವಿ ಮಹಾನಗರ ಪಾಲಿಕೆಯು ಒದಗಿಸಲು ಒಪ್ಪಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಉದ್ಯಮಭಾಗ, ಅನಗೋಳ, ಮಜಗಾಂವ, ಮಚ್ಛೆ ಕೈಗಾರಿಕಾ ಪ್ರದೇಶಗಳಲ್ಲಿ ಮೂಲಭೂತ ಸೌಲಭ್ಯ ಕಲ್ಪಿಸಲು ಬೆಳಗಾವಿ ಮಹಾನಗರ ಪಾಲಿಕೆ ಮತ್ತು ಮಾನ್ಯ ಶಾಸಕರು ಈ ಕೆಳಗಿನಂತೆ ತಮ್ಮ ಪಾಲಿನ ಅನುದಾನ ನೀಡಲು ಒಪ್ಪಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |

| ಕೈಗಾರಿಕಾ ಪ್ರದೇಶ | ಅಂದಾಜು ಯೋಜನಾ ವೆಚ್ಚ (ರೂ.ಲಕ್ಷಗಳಲ್ಲಿ) | ಸರ್ಕಾರದ ಪಾಲು ಶೇ 75% (ರೂ.ಲಕ್ಷಗಳಲ್ಲಿ) | ಪಾಲಿಕೆ/ಇತರೆ ಪಾಲು ಶೇ 25% (ರೂ.ಲಕ್ಷಗಳಲ್ಲಿ) | ಅಂದಾಜು ವೆಚ್ಚದ ಶೇ 25% ಅನುದಾನ ಭರಿಸುವವರ ವಿವರ |
|---|---|---|---|---|
| ಮಚ್ಛೆ (ಬೆಮಸಿಲ್) ಕೈಗಾರಿಕಾ ಪ್ರದೇಶ | 100.00 | 75.00 | 25.00 | ಮಾನ್ಯ ಶಾಸಕರು, ಬೆಳಗಾವಿ ದಕ್ಷಿಣ ವಿಧಾನಸಭಾ ಕ್ಷೇತ್ರ, ಬೆಳಗಾವಿ |
| ಅನಗೋಳ, ಮಜಗಾಂವ ಕೈಗಾರಿಕಾ ಪ್ರದೇಶ | 480.00 | 360.00 | 120.00 | ಬೆಳಗಾವಿ ಮಹಾನಗರ ಪಾಲಿಕೆ, ಬೆಳಗಾವಿ |
| ಒಟ್ಟು | 580.00 | 435.00 | 1450.00 | |

| | | |
|---|---|---|
| ಉ) | ಸರ್ಕಾರಕ್ಕೆ ಅನುದಾನ ಕೊರತೆ ಇದೆಯೇ; ಇಲ್ಲವಾದಲ್ಲಿ ಯಾವ ಕಾರಣಕ್ಕೆ ಆರ್ಥಿಕ ಇಲಾಖೆಯಿಂದ ತಿರಸ್ಕೃತವಾಗಿದೆ? | ಆರ್ಥಿಕ ಇಲಾಖೆಯು ತನ್ನ ಟಿಪ್ಪಣಿ ಸಂಖ್ಯೆ: ಎಫ್‌ಡಿ 22 ವೆಚ್ಚ-1/2019, ದಿ: 17.02.2020ರಲ್ಲಿ ಯಾವುದೇ ಹೊಸ ಪ್ರಸ್ತಾವನೆಗಳನ್ನು ಕೈಗೆತ್ತಿಕೊಳ್ಳಲು ಅನುಮೋದನೆ ನೀಡಬಾರದೆಂದು ಮತ್ತು 2019-20ನೇ ಸಾಲಿನಲ್ಲಿ ಹಂಚಿಕೆಯಾಗಿರುವ ಅನುದಾನವನ್ನು ಈ ಹಿಂದೆ ಸರ್ಕಾರದಿಂದ ಅನುಮೋದನೆಯಾಗಿರುವ ಕಾಮಗಾರಿಗಳಿಗೆ ಮಾತ್ರವೇ ವಿನಿಯೋಗಿಸಬೇಕೆಂದು ತಿಳಿಸಿರುತ್ತದೆ ಮತ್ತು BEMSIL ಕೈಗಾರಿಕಾ ವಸಾಹತುವು ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕಾ ಅಭಿವೃದ್ಧಿ ನಿಗಮದ ಕೈಗಾರಿಕಾ ವಸಾಹತು ಆಗಿರದ ಕಾರಣ ಸದರಿ ಪ್ರಸ್ತಾವನೆಯು ತಿರಸ್ಕೃತವಾಗಿರುತ್ತದೆ. |

**ಸಿಐ 05 ಸಿಎಸ್‌ಸಿ 2021**

(ಸಿ.ಸಿ. ಪಾಟೀಲ್)
**ಸಣ್ಣ ಕೈಗಾರಿಕೆ ಹಾಗೂ**
**ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಸಚಿವರು.**

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1149

ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ಖಾದರ್ ಯು.ಟಿ. (ಮಂಗಳೂರು)

ಉತ್ತರಿಸಬೇಕಾದ ದಿನಾಂಕ : 05.02.2021

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಹಿಂದಿನ ಸರ್ಕಾರದಲ್ಲಿ ಜಾರಿಯಾಗಿದ್ದ ಒಂದು ರಾಜ್ಯ- ಒಂದು ರೇಷನ್ ಕಾರ್ಡ್ ಯೋಜನೆಯು ಸಮರ್ಪಕವಾಗಿ ಜಾರಿಯಾಗದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲ್ಲ. |
| ಆ | ಹಾಗಿದ್ದಲ್ಲಿ, ವಲಸಿಗ ಕಾರ್ಮಿಕರಿಗೆ ಪಡಿತರ ದೊರಕಿಸಿಕೊಡಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ? (ವಿವರಗಳನ್ನು ಒದಗಿಸುವುದು) | ಕೇಂದ್ರ ಸರ್ಕಾರವು ಜಾರಿಗೆ ತಂದಿರುವ "ಒಂದು ರಾಷ್ಟ್ರ ಒಂದು ಪಡಿತರಚೀಟಿ" (One Nation One Ration Card) ಯೋಜನೆಯನ್ನು ಕರ್ನಾಟಕದಲ್ಲಿ ವಿಧಿವತ್ತಾಗಿ ಜಾರಿಗೊಳಿಸಲಾಗಿದೆ. ಈ ಯೋಜನೆಯ ಪ್ರಕಾರ ರಾಷ್ಟ್ರದ ಯಾವುದೇ ರಾಜ್ಯದ ಪಡಿತರ ಚೀಟಿದಾರರು ನಮ್ಮ ರಾಜ್ಯದಲ್ಲಿ ಪಡಿತರ ಪಡೆಯಬಹುದು ಅಥವಾ ನಮ್ಮ ರಾಜ್ಯದ ಪಡಿತರ ಚೀಟಿದಾರರು ಪೋರ್ಟೆಬಿಲಿಟಿ ಯೋಜನೆಯನ್ನು ಅಳವಡಿಸಿಕೊಂಡಿರುವ ರಾಷ್ಟ್ರದ ಇತರೆ ರಾಜ್ಯಗಳಲ್ಲಿ ಪಡಿತರ ಪಡೆಯಬಹುದು. ಯಾವುದೇ ರಾಜ್ಯದ ಪಡಿತರ ಚೀಟಿದಾರರಿಗೆ ಪ್ರತಿ ತಿಂಗಳು ರಾಷ್ಟ್ರೀಯ ಆಹಾರ ಭದ್ರತಾ ಕಾಯಿದೆ 2013ರಲ್ಲಿ ವಿಧಿತವಾಗಿರುವಂತೆ ಪ್ರತಿ ವ್ಯಕ್ತಿಗೆ 5 ಕೆ.ಜಿ. ಅಕ್ಕಿಯನ್ನು ಪ್ರತಿ ಕೆ.ಜಿ.ಗೆ ರೂ. 3 ರಂತೆ ವಿತರಿಸಲಾಗುತ್ತಿದೆ. |

ಆನಾಸ 49 ಡಿಆರ್‌ಎ 2021 (ಇ-ಆಫೀಸ್)

(ಉಮೇಶ.ವಿ.ಕತ್ತಿ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1119
2. ಸದಸ್ಯರ ಹೆಸರು : ಶ್ರೀ ಹೂಲಗೇರಿ ಡಿ.ಎಸ್. (ಲಿಂಗಸಗೂರು)
3. ಉತ್ತರಿಸುವ ದಿನಾಂಕ : 05.02.2021
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಗೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಯಚೂರು ಜಿಲ್ಲೆಯ ಲಿಂಗಸಗೂರು ತಾಲ್ಲೂಕಿನಲ್ಲಿ ಕೈಗಾರಿಕಾ ವಸಾಹತು ಸ್ಥಾಪನೆಗಾಗಿ ಲ್ಯಾಂಡ್.ಬ್ಯಾಂಕಿಂಗ್ ಮಾಡಿಕೊಳ್ಳಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ರಾಯಚೂರು ಜಿಲ್ಲೆ, ಲಿಂಗಸಗೂರು ತಾಲ್ಲೂಕಿನಲ್ಲಿ ಕೈಗಾರಿಕಾ ಪ್ರದೇಶ / ಲ್ಯಾಂಡ್.ಬ್ಯಾಂಕ್ ಸ್ಥಾಪನೆಗಾಗಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ವತಿಯಿಂದ ಪ್ರಸ್ತುತ ಯಾವುದೇ ಜಮೀನನ್ನು ಭೂಸ್ವಾಧೀನಪಡಿಸಿರುವುದಿಲ್ಲ. |
| (ಆ) | ಲಿಂಗಸಗೂರು ಪಟ್ಟಣದಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಲು ನಿವೇಶನಗಳಿಗೆ ಬೇಡಿಕೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಎಷ್ಟು ಎಕರೆ ನಿವೇಶನ ಬೇಡಿಕೆಗೆ ಸರ್ಕಾರದಲ್ಲಿ ಪ್ರಸ್ತಾವನೆ ಇದೆ; | ಉದ್ಭವಿಸುವುದಿಲ್ಲ |
| (ಇ) | ಈ ಪಟ್ಟಣದಲ್ಲಿ ಬೃಹತ್ ಮತ್ತು ಮಧ್ಯಮ ಕೈಗಾರಿಕೆಗಳನ್ನು ಸ್ಥಾಪಿಸಲು ಸರ್ಕಾರದ ತೆಗೆದುಕೊಂಡ ಕ್ರಮಗಳೇನು? | ಉದ್ಭವಿಸುವುದಿಲ್ಲ |

ಸಂಖ್ಯೆ: ಸಿಐ 35 ಐಎಪಿ (ಇ) 2021

(ಜಗದೀಶ ಶೆಟ್ಟರ)
ಬೃಹತ್ ಮತ್ತು ಮಧ್ಯಮ ಕೈಗಾರಿಗೆ ಸಚಿವರು

# ಕರ್ನಾಟಕ ಸರ್ಕಾರ

ಸಂಖ್ಯೆ: ಜಸಂಇ 165 ಎಂಎಲ್‌ಎ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 05.02.2021

ಇಂದ,

ಸರ್ಕಾರದ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ,
ವಿಕಾಸ ಸೌಧ

ಇವರಿಗೆ:

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ
ವಿಧಾನ ಸೌಧ
ಬೆಂಗಳೂರು.

ಮಾನ್ಯರೇ,

ವಿಷಯ:- ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ರಾಮಪ್ಪ ಎಸ್. (ಹರಿಹರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1350 ಕ್ಕೆ ಉತ್ತರಿಸುವ ಬಗ್ಗೆ.

*****

ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ರಾಮಪ್ಪ ಎಸ್. (ಹರಿಹರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1350 ಕ್ಕೆ ಸಂಬಂಧಿಸಿದಂತೆ ದಿನಾಂಕ:15.12.2020 ರ ಉತ್ತರದ 10 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲಾಗಿದೆ.

ತಮ್ಮ ನಂಬುಗೆಯ,

5/2/21

(ಶ್ರೀಹರಿ ಎಸ್. ಆರ್)
ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ -1)
ಜಲಸಂಪನ್ಮೂಲ ಇಲಾಖೆ.

ಪ್ರತಿಯನ್ನು:-

1. ಮಾನ್ಯ ಜಲಸಂಪನ್ಮೂಲ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನ ಸೌಧ, ಬೆಂಗಳೂರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ.
3. ಸರ್ಕಾರದ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ.
4. ಸರ್ಕಾರದ ಹೆಚ್ಚುವರಿ ಕಾರ್ಯದರ್ಶಿಯವರ/ಉಪ ಕಾರ್ಯದರ್ಶಿ( ಕೆಬಿಜೆಎನ್‌ಎಲ್)ರವರ ಆಪ್ತ ಸಹಾಯಕರು, ಜಲಸಂಪನ್ಮೂಲ ಇಲಾಖೆ.
5. ಸರ್ಕಾರದ ಉಪಕಾರ್ಯದರ್ಶಿಯವರ ಆಪ್ತ ಸಹಾಯಕರು, (ಸೇವೆಗಳು) ಜಲಸಂಪನ್ಮೂಲ ಇಲಾಖೆ.
6. ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಬಿ) ಜಲಸಂಪನ್ಮೂಲ ಇಲಾಖೆ.

Recd
05-02/21

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1350
ಸದಸ್ಯರ ಹೆಸರು : ಶ್ರೀ ರಾಮಪ್ಪ ಎಸ್. (ಹರಿಹರ)
ಉತ್ತರಿಸುವ ದಿನಾಂಕ : 15.12.2020
ಉತ್ತರಿಸುವ ಸಚಿವರು : ಮಾನ್ಯ ಜಲಸಂಪನ್ಮೂಲ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ದಾವಣಗೆರೆ ಜಿಲ್ಲೆ ಹರಿಹರ ತಾಲ್ಲೂಕಿನ ಭೈರನಪಾದ ಏತ ನೀರಾವರಿ ಯೋಜನೆಯ ಪರಿಷ್ಕೃತ ಅಂದಾಜು ಮೊತ್ತ 58.13 (ಕೋಟಿ) ಕ್ಕೆ ಆಡಳಿತಾತ್ಮಕ ಅನುಮೋದನೆ ನೀಡುವಲ್ಲಿ ವಿಳಂಬ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಭದ್ರಾ ಯೋಜನೆಯ ಬಲದಂಡೆ ನಾಲೆಯ, ಮಲೇಬೆನ್ನೂರು ಶಾಖಾ ಕಾಲುವೆಯಡಿ 23774 ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಕಲ್ಪಿಸಲು ಯೋಜಿಸಲಾಗಿರುತ್ತದೆ. ಭದ್ರಾ ಆಧುನೀಕರಣ ಪೂರ್ವದಲ್ಲಿ ಸುಮಾರು 3357 ಹೆಕ್ಟೇರ್ ಪ್ರದೇಶವು ನೀರಾವರಿ ಸೌಲಭ್ಯದಿಂದ ಭಾದಿತವಾಗಿದ್ದು, ನಾಲಾ ಆಧುನೀಕರಣದಿಂದ ಸುಮಾರು 1725 ಹೆಕ್ಟೇರ್ ಪ್ರದೇಶಕ್ಕೆ ನೀರನ್ನು ಒದಗಿಸಲಾಗುತ್ತಿದೆ. ಆಧುನೀಕರಣದ ನಂತರವು ಸಹ ಕೊನೆಭಾಗದ ಸುಮಾರು 1632 ಹೆಕ್ಟೇರ್‌ನಷ್ಟು ಪ್ರದೇಶಕ್ಕೆ ಸಮರ್ಪಕವಾಗಿ ನೀರಾವರಿ ಸೌಲಭ್ಯ ಕಲ್ಪಿಸಲು ಕಷ್ಟವಾಗುತ್ತಲಿದೆ. ಈ ಪ್ರದೇಶಗಳು ಭದ್ರಾ ಅಚ್ಚುಕಟ್ಟಿಗೆ ಸೇರಿದ್ದು ಅಧಿಕೃತವಾಗಿ ನೀರಾವರಿ ಪ್ರದೇಶವೆಂದು ಪ್ರಕಟಣೆಗೊಂಡು ಭದ್ರಾ ಯೋಜನೆಯ ನೀರನ್ನು ಅವಲಂಬಿಸಿರುತ್ತದೆ. ಈ ಹಿನ್ನಲೆಯಲ್ಲಿ ಭಾದಿತ ಅಚ್ಚುಕಟ್ಟು ಪ್ರದೇಶಕ್ಕೆ ಏತ ನೀರಾವರಿ ಯೋಜನೆ ಮೂಲಕ ನೀರಾವರಿ ಸೌಲಭ್ಯ ಕಲ್ಪಿಸಲು ಭೈರನಪಾದ ಏತ ನೀರಾವರಿ ಯೋಜನೆಯನ್ನು ಕೈಗೆತ್ತಿಕೊಳ್ಳಲು ದಿನಾಂಕ:11.01.2013 ರಲ್ಲಿ ರೂ.43.73 ಕೋಟಿಗಳ ಮೊತ್ತಕ್ಕೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿರುತ್ತದೆ.<br><br>ಪ್ರಸ್ತುತ ಯೋಜನೆ ಕೈಗೆತ್ತಿಕೊಳ್ಳುವ ಸಲುವಾಗಿ ಯೋಜನೆಗೆ ಅವಶ್ಯಕವಿರುವ 0.72 ಟಿ.ಎಂ.ಸಿ ನೀರಿನ ಹಂಚಿಕೆಯೊಂದಿಗೆ 2018-19ನೇ ಸಾಲಿನ ದರಪಟ್ಟಿ ದರಗಳನ್ವಯ ಪರಿಷ್ಕೃತ ವಿವರವಾದ ಯೋಜನಾ ವರದಿಯನ್ನು ರೂ.58.13 ಕೋಟಿಗಳ ಮೊತ್ತಕ್ಕೆ ತಯಾರಿಸಿದ್ದು, ಸರ್ಕಾರದ ಪರಿಶೀಲನೆಯಲ್ಲಿದೆ. |
| ಆ) | ಈ ಯೋಜನೆಗೆ ಕರ್ನಾಟಕ ನೀರಾವರಿ ನಿಗಮವು ವಿಸ್ತೃತ ಯೋಜನಾ ವರದಿಯನ್ನು ಸಿದ್ಧಪಡಿಸಿ ಸರ್ಕಾರಕ್ಕೆ ಸಲ್ಲಿಸಿದ್ದು, ಅನುಮತಿಗೆ ಬಾಕಿ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಇ) | ಇಲ್ಲವಾದಲ್ಲಿ, ಕಾರಣಗಳೇನು? | |

**ಸಂಖ್ಯೆ:ಜಸಂಇ 165 ಎಂಎಲ್‌ಎ 2020**

(ರಮೇಶ್ ಲ. ಜಾರಕಿಹೊಳಿ)
ಜಲಸಂಪನ್ಮೂಲ ಸಚಿವರು.

# ಕರ್ನಾಟಕ ಸರ್ಕಾರ

ಸಂಖ್ಯೆ: ಜಸಂಇ 164 ಎಂಎಲ್‌ಎ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 05.02.2021

ಇಂದ,

ಸರ್ಕಾರದ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ,
ವಿಕಾಸ ಸೌಧ

ಇವರಿಗೆ:

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ
ವಿಧಾನ ಸೌಧ
ಬೆಂಗಳೂರು.

ಮಾನ್ಯರೇ,

ವಿಷಯ:- ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ರಾಜ್‌ಕುಮಾರ್ (ಸೇಡಂ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 973ಕ್ಕೆ ಉತ್ತರಿಸುವ ಬಗ್ಗೆ.

*****

ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ರಾಜ್‌ಕುಮಾರ್ (ಸೇಡಂ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 973 ಕ್ಕೆ ಸಂಬಂಧಿಸಿದಂತೆ ದಿನಾಂಕ:15.12.2020 ಉತ್ತರದ 10 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲಾಗಿದೆ.

ತಮ್ಮ ನಂಬುಗೆಯ,

(ಶ್ರೀಹರಿ ಎಸ್. ಆರ್)
ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ -1)
ಜಲಸಂಪನ್ಮೂಲ ಇಲಾಖೆ.

**ಪ್ರತಿಯನ್ನು:-**

1. ಮಾನ್ಯ ಜಲಸಂಪನ್ಮೂಲ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನ ಸೌಧ, ಬೆಂಗಳೂರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ.
3. ಸರ್ಕಾರದ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ.
4. ಸರ್ಕಾರದ ಹೆಚ್ಚುವರಿ ಕಾರ್ಯದರ್ಶಿಯವರ/ಉಪ ಕಾರ್ಯದರ್ಶಿ( ಕೆಬಿಜೆಎನ್‌ಎಲ್)ರವರ ಆಪ್ತ ಸಹಾಯಕರು, ಜಲಸಂಪನ್ಮೂಲ ಇಲಾಖೆ.
5. ಸರ್ಕಾರದ ಉಪಕಾರ್ಯದರ್ಶಿಯವರ ಆಪ್ತ ಸಹಾಯಕರು, (ಸೇವೆಗಳು) ಜಲಸಂಪನ್ಮೂಲ ಇಲಾಖೆ.
6. ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಬಿ) ಜಲಸಂಪನ್ಮೂಲ ಇಲಾಖೆ.

Recent
05/2/21

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 973
ಸದಸ್ಯರ ಹೆಸರು : ಶ್ರೀ ರಾಜ್‌ಕುಮಾರ್ ಪಾಟೀಲ್ (ಸೇಡಂ)
ಉತ್ತರಿಸುವ ದಿನಾಂಕ : 15-12-2020
ಉತ್ತರಿಸುವ ಸಚಿವರು : ಮಾನ್ಯ ಜಲಸಂಪನ್ಮೂಲ ಸಚಿವರು

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ) | ಕಲಬುರಗಿ ಜಿಲ್ಲೆಯ ಸೇಡಂ ಮತಕ್ಷೇತ್ರದ ರೈತರ ಅನುಕೂಲಕ್ಕಾಗಿ ಕಾಗೀಣಾ ಏತ ನೀರಾವರಿ ಯೋಜನೆಯನ್ನು ಪ್ರಾರಂಭಿಸಲು ಸರ್ಕಾರ ಯೋಜಿಸಿದೆಯೇ? | ಹೌದು, ಯೋಜಿಸಲಾಗಿದೆ.<br><br>ಕಲಬುರಗಿ ಜಿಲ್ಲೆಯ ಸೇಡಂ ಮತಕ್ಷೇತ್ರದ ರೈತರ ಅನುಕೂಲಕ್ಕಾಗಿ ಕಾಗಿಣಾ ನದಿಯಿಂದ ಈಗಾಗಲೇ ನಿರ್ಮಾಣವಾಗಿದ್ದ ಬ್ಯಾರೇಜುಗಳಿಂದ 10 ಏತ ನೀರಾವರಿ ಯೋಜನೆಗಳ ಮೂಲಕ ನೀರನ್ನೆತ್ತಿ ಬರ ಪೀಡಿತ ಗ್ರಾಮಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸುವಯೋಜನೆಗೆ ರೂ.639.30 ಕೋಟಿ ಮೊತ್ತದ ಯೋಜನಾ ವರದಿಯನ್ನು ನಿಗಮ ಮಟ್ಟದಲ್ಲಿ ತಯಾರಿಸಲಾಗಿದ್ದು, ಈ ಪೈಕಿ ಎರಡು ಏತ ನೀರಾವರಿ ಯೋಜನೆಗಳಾದ ಯಡ್ಡಳ್ಳಿ ಏತ ನೀರಾವರಿ ಯೋಜನೆ (ರೂ.59.80 ಕೋಟಿಗಳು) ಹಾಗೂ ತರ್ನಳ್ಳಿ ಏತ ನೀರಾವರಿ ಯೋಜನೆ (ರೂ.84.00 ಕೋಟಿಗಳು) ಮೂಲಕ ನೀರಾವರಿ ಸೌಲಭ್ಯ ಕಲ್ಪಿಸುವ ಯೋಜನೆಗಳಿಗೆ ಒಟ್ಟು ರೂ.143.80 ಕೋಟಿಗಳ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿದೆ. |
| ಆ) | ಹಾಗಿದ್ದಲ್ಲಿ, ಈ ಕಾಮಗಾರಿಯನ್ನು ಯಾವಾಗ ಪ್ರಾರಂಭಿಸಲಾಗುವುದು? | |
| ಇ) | ಈ ಕಾಮಗಾರಿಗೆ ಅವಶ್ಯವಿರುವ ಅಂದಾಜು ಮೊತ್ತವೆಷ್ಟು? | |

ಸಂಖ್ಯೆ:ಜಸಂಇ 164 ಎಂಎಲ್ಎ 2020

(ರಮೇಶ್ ಲ. ಜಾರಕಿಹೊಳಿ)
ಜಲಸಂಪನ್ಮೂಲ ಸಚಿವರು

**ಕರ್ನಾಟಕ ಸರ್ಕಾರ**

**ಸಂಖ್ಯೆ:ರೇಷ್ಮೆ 25 ರೇಕೃವಿ 2021**

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ:05/02/2021

88 4/S
05-02-2021

**ಇಂದ:-**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆ,
ಬಹುಮಹಡಿ ಕಟ್ಟಡ, ಬೆಂಗಳೂರು.

**ಇವರಿಗೆ:-**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ನಾಗೇಂದ್ರ ಬಿ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1157 ಕ್ಕೆ ಉತ್ತರ.

**ಉಲ್ಲೇಖ:** ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/9ಅ/ಪ್ರ.ಸಂ.1157/2021, ದಿನಾಂಕ:28/01/2021.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ನಾಗೇಂದ್ರ ಬಿ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1157 ಕ್ಕೆ ಉತ್ತರದ 25 ಪ್ರತಿಗಳನ್ನು ಹಾಗೂ ಅನುಬಂಧದ 02 ಸಿ.ಡಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

(ಹೆಚ್.ವನಿತ),
ಸರ್ಕಾರದ ಅಧೀನ ಕಾರ್ಯದರ್ಶಿ,
ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆ
(ರೇಷ್ಮೆ)

**ಪ್ರತಿ:-**

1) ಮಾನ್ಯ ತೋಟಗಾರಿಕೆ ಮತ್ತು ರೇಷ್ಮೆ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನ ಸೌಧ, ಬೆಂಗಳೂರು.
2) ಸರ್ಕಾರದ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳು, ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆ, ಬಹುಮಹಡಿ ಕಟ್ಟಡ ಬೆಂಗಳೂರು.

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1157 |
| ಸದಸ್ಯರ ಹೆಸರು | ಶ್ರೀ ನಾಗೇಂದ್ರ.ಬಿ |
| ಉತ್ತರಿಸುವ ದಿನಾಂಕ | 05/02/2021 |
| ಉತ್ತರಿಸುವವರು | ತೋಟಗಾರಿಕೆ ಮತ್ತು ರೇಷ್ಮೆ ಸಚಿವರು |

| | ಪ್ರಶ್ನೆಗಳು | ಉತ್ತರ |
|---|---|---|
| ಅ | ರೇಷ್ಮೆ ಇಲಾಖೆಯಲ್ಲಿರುವ ವಿವಿಧ ಯೋಜನೆಗಳಾವುವು; ಕಳೆದ ಮೂರು ವರ್ಷಗಳಲ್ಲಿ ಇಲಾಖೆಯಲ್ಲಿ ಜಾರಿಯಲ್ಲಿರುವ ವಿವಿಧ ಯೋಜನೆಗಳಿಗೆ ಮಂಜೂರು ಮಾಡಿದ ಅನುದಾನ ಎಷ್ಟು; ಬಿಡುಗಡೆಗೊಳಿಸಿದ ಅನುದಾನ ಎಷ್ಟು (ವರ್ಷವಾರು, ಯೋಜನೆವಾರು, ಮತ ಕ್ಷೇತ್ರವಾರು ಅನುದಾನದೊಂದಿಗೆ ಪೂರ್ಣ ವಿವರ ನೀಡುವುದು); | ಕಳೆದ ಮೂರು ವರ್ಷಗಳಲ್ಲಿ ರೇಷ್ಮೆ ಇಲಾಖೆಯಲ್ಲಿ ಜಾರಿಯಲ್ಲಿರುವ ವಿವಿಧ ಯೋಜನೆಗಳಿಗೆ ಮಂಜೂರು ಮಾಡಿದ ಅನುದಾನ ಮತ್ತು ಬಿಡುಗಡೆ ಮಾಡಿರುವ ಅನುದಾನದ ವಿವರಗಳನ್ನು ಮತಕ್ಷೇತ್ರವಾರು ಅನುಬಂಧದಲ್ಲಿ ನೀಡಿದೆ. |
| ಆ | ಕಳೆದ ಮೂರು ವರ್ಷಗಳಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ವಿವಿಧ ಯೋಜನೆಗಳ ಅನುಕೂಲ ಪಡೆದ ಫಲಾನುಭವಿಗಳ ಸಂಖ್ಯೆ ಎಷ್ಟು (ವರ್ಷವಾರು, ಯೋಜನೆಗಳವಾರು, ಫಲಾನುಭವಿವಾರು, ಮತಕ್ಷೇತ್ರವಾರು ಪೂರ್ಣ ವಿವರ ನೀಡುವುದು); | ಕಳೆದ ಮೂರು ವರ್ಷಗಳಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ರೇಷ್ಮೆ ಇಲಾಖೆಯಿಂದ ವಿವಿಧ ಯೋಜನೆಗಳಡಿ ಅನುಕೂಲ ಪಡೆದ ಫಲಾನುಭವಿಗಳ ವಿವರಗಳನ್ನು ಅನುಬಂಧ-1ರಲ್ಲಿ ನೀಡಿದೆ. |
| ಇ | ಫಲಾನುಭವಿಗಳ ಆಯ್ಕೆಯನ್ನು ಯಾವ ಮಾನದಂಡ ಅನುಸರಿಸಿ ಮಾಡಲಾಗಿದೆ (ವಿವರ ನೀಡುವುದು); | ರಾಜ್ಯದಲ್ಲಿ ರೇಷ್ಮೆ ಉದ್ಯಮವನ್ನು ಉತ್ತೇಜಿಸಲು ರೇಷ್ಮೆ ಇಲಾಖೆಯಿಂದ ಅನುಷ್ಠಾನಗೊಳಿಸುತ್ತಿರುವ ಕಾರ್ಯಕ್ರಮಗಳಡಿ ರೇಷ್ಮೆ ಬೆಳೆಗಾರರಿಗೆ ಸಹಾಯಧನ/ಪ್ರೋತ್ಸಾಹಧನ ನೀಡಲು ಈ ಕೆಳಕಂಡ ಸಾಮಾನ್ಯ ಮಾನದಂಡಗಳನ್ನು ಪರಿಗಣಿಸಲಾಗುತ್ತಿದೆ.<br>1. ನೀರಾವರಿ ಸೌಲಭ್ಯ<br>2. ಸ್ವಂತ ಹಿಪ್ಪುನೇರಳೆ ತೋಟ,<br>3. ರೇಷ್ಮೆ ಬೆಳೆಗಾರರಾಗಿರಬೇಕು<br>4. ಇಲಾಖೆಯ ನೀಡುವ ರೇಷ್ಮೆ ಬೆಳೆಗಾರರ ಚಾಲ್ತಿಯಲ್ಲಿರುವ ಪಾಸ್ ಪುಸ್ತಕ<br>5. ಮುಚ್ಚಳಿಕೆ ಪತ್ರ<br>6. ಆಧಾರ್ ಕಾರ್ಡ್<br>7. ಹನಿ ನೀರಾವರಿ ಅಳವಡಿಕೆ / ಸಲಕರಣೆ ಖರೀದಿಯನ್ನು ಇಲಾಖೆಯಿಂದ ಅನುಮೋದಿತ ಸಂಸ್ಥೆಗಳಿಂದ ಪಡೆದಿರಬೇಕು.<br>8. ಬ್ಯಾಂಕ್ ಖಾತೆ.<br>ಮುಂದುವರೆದು ಸದರಿ ಕಾರ್ಯಕ್ರಮಕ್ಕೆ ಆಗ್ಗಿಂದಾಗ್ಗೆ ಇಲಾಖೆಯು ಹೊರಡಿಸುವ ಮಾರ್ಗಸೂಚಿ/ ಅಧಿಸೂಚನೆಯಲ್ಲಿ ಸೂಚಿಸುವ ಅಗತ್ಯ ದಾಖಲಾತಿ ಮತ್ತು ಕ್ರಮಗಳನ್ನು ಅನುಸರಿಸಿದಲ್ಲಿ ಸಹಾಯಧನ ನೀಡಲು ಕ್ರಮವಹಿಸಲಾಗುವುದು. |

| | | |
|---|---|---|
| ಈ) | ಆಯ್ಕೆ ಮಾಡಲಾದ ಫಲಾನುಭವಿಗಳಿಗೆ ಪೂರ್ಣ ಪ್ರಮಾಣದ ಅನುದಾನ ನೀಡಲಾಗಿದೆಯೇ; ಫಲಾನುಭವಿಗಳು ಯೋಜನೆಗಳ ಅನುಕೂಲ ಪಡೆದಿರುವವರೇ ಅಥವಾ ಇಲ್ಲವೇ; ಪಡೆಯದಿದ್ದಲ್ಲಿ, ಕಾರಣಗಳೇನು (ಪೂರ್ಣ ವಿವರ ನೀಡುವುದು); | ಆಯ್ಕೆ ಮಾಡಲಾದ ಫಲಾನುಭವಿಗಳಿಗೆ ಪೂರ್ಣ ಪ್ರಮಾಣದ ಅನುದಾನ ನೀಡಲಾಗಿದೆ. ರೇಷ್ಮೆ ಇಲಾಖೆಯಿಂದ ಅನುಷ್ಠಾನ ಗೊಳಿಸುತ್ತಿರುವ ಯೋಜನೆಗಳಡಿ ಗುರುತಿಸಿರುವ ಎಲ್ಲಾ ಫಲಾನುಭವಿಗಳು ಅನುಕೂಲ ಪಡೆದಿರುತ್ತಾರೆ. |
| ಉ | ಪ್ರಸಕ್ತ ಸಾಲಿನಲ್ಲಿ ಇಲಾಖೆಯ ವಿವಿಧ ಯೋಜನೆಗಳ ಅಡಿಯಲ್ಲಿ ಬಳ್ಳಾರಿ ಜಿಲ್ಲೆಗೆ ನೀಡಿರುವ ಅನುದಾನ ಎಷ್ಟು (ಮತಕ್ಷೇತ್ರಗಳವಾರು, ಯೋಜನೆಗಳವಾರು ಅನುದಾನದೊಂದಿಗೆ ಪೂರ್ಣ ವಿವರ ನೀಡುವುದು)? | ಪ್ರಸಕ್ತ ಸಾಲಿನಲ್ಲಿ ಇಲಾಖೆಯ ವಿವಿಧ ಯೋಜನೆಗಳ ಅಡಿಯಲ್ಲಿ ಬಳ್ಳಾರಿ ಜಿಲ್ಲೆಗೆ ನೀಡಿರುವ ಅನುದಾನ ಮತಕ್ಷೇತ್ರವಾರು ವಿವರಗಳನ್ನು ಅನುಬಂಧ-1 ರಲ್ಲಿ ನೀಡಿದೆ. |

ಸಂಖ್ಯೆ: ರೇಷ್ಮೆ 25 ರೇಕ್ಕೃವಿ 2021

(ಆರ್.ಶಂಕರ್)
ತೋಟಗಾರಿಕೆ ಮತ್ತು ರೇಷ್ಮೆ ಸಚಿವರು



ಕರ್ನಾಟಕ ಸರ್ಕಾರ

ಸಂಖ್ಯೆ ಸಿಐ 67 ಎಂಎಂಎನ್ 2021

ಕರ್ನಾಟಕ ಸರ್ಕಾರದ ಸಚಿವಾಲಯ,
1ನೇ ಮಹಡಿ, ವಿಕಾಸಸೌಧ,
ಬೆಂಗಳೂರು, ದಿನಾಂಕ 05.02.2021

ಇಂದ
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
(ಎಂ.ಎಸ್.ಎಂ.ಇ., ಜವಳಿ ಮತ್ತು ಗಣಿ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

u/s 36 5/2/21

ಇವರಿಗೆ,
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ

ಮಾನ್ಯರೇ,

ವಿಷಯ : ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಬಸವನಗೌಡ ದದ್ದಲ (ರಾಯಚೂರು ಗ್ರಾಮಾಂತರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 1194 ಕ್ಕೆ ಉತ್ತರ ಒದಗಿಸುವ ಕುರಿತು.

ಉಲ್ಲೇಖ: ತಮ್ಮ ಪತ್ರ ಸಂಖ್ಯೆ ಪ್ರಶಾವಿಸ/15ನೇವಿಸ/9ಅ/ಪ್ರ.ಸಂ.1194/2021, ದಿನಾಂಕ 28.01.2021.

-----

ಪ್ರಸ್ತಾಪಿತ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಪತ್ರದಲ್ಲಿ ಕೋರಿರುವಂತೆ ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಬಸವನಗೌಡ ದದ್ದಲ (ರಾಯಚೂರು ಗ್ರಾಮಾಂತರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 1194 ಕ್ಕೆ ಸರ್ಕಾರದ ಉತ್ತರದ 25 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಅಗತ್ಯ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ

Suma S.
(ಸುಮ ಎಸ್.)
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಗಣಿ-1).

ಪ್ರತಿ:-

1. ಮಾನ್ಯ ಗಣಿ ಮತ್ತು ಭೂವಿಜ್ಞಾನ ಸಚಿವರ ಆಪ್ತ ಕಾರ್ಯದರ್ಶಿ, ವಿಕಾಸಸೌಧ.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.
3. ಸರ್ಕಾರದ ಉಪ ಕಾರ್ಯದರ್ಶಿಯವರ ಆಪ್ತ ಸಹಾಯಕರು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.
4. ಸರ್ಕಾರದ ಅಧೀನ ಕಾರ್ಯದರ್ಶಿ (ಸಮನ್ವಯ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.



ಕರ್ನಾಟಕ ಸರ್ಕಾರ

ಸಂಖ್ಯೆ: ಸಿಒ 24 ಸಿಎಲ್‌ಎಸ್ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:03.02.2021

09
Scheduled
5/2/21

ಇವರಿಂದ,

**ಸರ್ಕಾರದ ಪ್ರಧಾನ ಕಾರ್ಯದರ್ಶಿ,**
ಸಹಕಾರ ಇಲಾಖೆ,
ಬೆಂಗಳೂರು – 560 001.

ಇವರಿಗೆ,

**ಕಾರ್ಯದರ್ಶಿ,**
ಕರ್ನಾಟಕ ವಿಧಾನ ಸಭೆ ಸಚಿವಾಲಯ
ವಿಧಾನಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:** ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಬಂಡೆಪ್ಪಾ ಖಾಶೆಂಪುರ ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 1095 ಕ್ಕೆ ಉತ್ತರ ನೀಡುವ ಬಗ್ಗೆ.

******

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಬಂಡೆಪ್ಪಾ ಖಾಶೆಂಪುರ ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 1095 ಕ್ಕೆ ಸಂಬಂಧಿಸಿದಂತೆ ಉತ್ತರದ 350 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತಳಾಗಿದ್ದೇನೆ.

ತಮ್ಮ ನಂಬುಗೆಯ,

Radha H.C

**(ಹೆಚ್.ಸಿ. ರಾಧ)**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಸಹಕಾರ ಇಲಾಖೆ.

## ಕರ್ನಾಟಕ ವಿಧಾನ ಸಭೆ

ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ಬಂಡೆಪ್ಪ ಖಾಶೆಂಪುರ್

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1095

ಉತ್ತರಿಸಬೇಕಾದ ದಿನಾಂಕ : 05.02.2021

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | 2019–20 ನೇ ಸಾಲಿನ ಆಯವ್ಯಯದಲ್ಲಿ ಸಹಕಾರ ಇಲಾಖೆಯಡಿ ಗೃಹಲಕ್ಷ್ಮೀ ಯೋಜನೆಯನ್ನು ಘೋಷಿಸಲಾಗಿದೆಯೇ; | ಹೌದು, ಘೋಷಿಸಲಾಗಿದೆ. |
| ಆ) | ಹಾಗಿದ್ದಲ್ಲಿ, ಗೃಹಲಕ್ಷ್ಮೀ ಯೋಜನೆಯನ್ನು ಯಾವ ದಿನಾಂಕದಿಂದ ಜಾರಿಗೆ ತರಲಾಗಿದೆ; | ಸರ್ಕಾರದ ಆದೇಶ ಸಂಖ್ಯೆ: ಸಿಒ 58 ಸಿಎಲ್ಎಸ್ 2019 ದಿನಾಂಕ:10.07.2019ರನ್ವಯ ಜಾರಿಗೆ ತರಲಾಗಿದೆ. |
| ಇ) | ಈ ಯೋಜನೆಯಡಿ ಎಷ್ಟು ಬಡ್ಡಿದರದಲ್ಲಿ ಸಾಲವನ್ನು ನೀಡಲಾಗುತ್ತಿದೆ; | ಗೃಹಲಕ್ಷ್ಮೀ ಬೆಳೆಸಾಲ ಯೋಜನೆಯಡಿ ಸಣ್ಣ ಮತ್ತು ಅತೀ ಸಣ್ಣ ರೈತರಿಗೆ ಆಭರಣಗಳ ಮೇಲೆ ಶೇ.3 ರಷ್ಟು ಬಡ್ಡಿದರದಲ್ಲಿ ಬೆಳೆ ಸಾಲವನ್ನು ನೀಡಲಾಗುತ್ತಿದೆ. |
| ಈ) | 2019–20 ಮತ್ತು 2020–21ನೇ ಸಾಲಿನಲ್ಲಿ ಈ ಯೋಜನೆಯಡಿ ಎಷ್ಟು ಜನರಿಗೆ ಸಾಲವನ್ನು ನೀಡಲಾಗಿದೆ ಹಾಗೂ ಅದರ ಮೊತ್ತವೆಷ್ಟು? (ವಿವರವಾದ ಮಾಹಿತಿ ಒದಗಿಸುವುದು) | 2019–20ನೇ ಸಾಲಿನಲ್ಲಿ 1015 ರೈತರಿಗೆ ರೂ.1014.34 ಲಕ್ಷ ಸಾಲ ನೀಡಲಾಗಿದೆ. ವಿವರವನ್ನು ಅನುಬಂಧದಲ್ಲಿ ನೀಡಲಾಗಿದೆ.<br>2020–21ನೇ ಸಾಲಿನಿಂದ ಈ ಯೋಜನೆ ಕೈಬಿಡಲಾಗಿದೆ. |

ಸಂಖ್ಯೆ: ಸಿಒ 24 ಸಿಎಲ್ಎಸ್ 2021

(ಎಸ್.ಟಿ. ಸೋಮಶೇಖರ್)
ಸಹಕಾರ ಸಚಿವರು

## ಅನುಬಂಧ -2

| ಕ್ರ.ಸಂ. | ಜಿಲ್ಲಾ ಸಹಕಾರಿ ಬ್ಯಾಂಕ್ ಹೆಸರು | ಫಲಾನುಭವಿಗಳ ಸಂಖ್ಯೆ | ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|---|
| 1 | ಬೆಳಗಾಂ ಡಿಸಿಸಿ ಬ್ಯಾಂಕ್ | 13 | 5.00 |
| 2 | ಕೆ.ಸಿ.ಸಿ.ಬ್ಯಾಂಕ್ ನಿ., ಧಾರವಾಡ | 29 | 22.19 |
| 3 | ಮೈಸೂರು ಮತ್ತು ಚಾಮರಾಜನಗರ ಡಿಸಿಸಿ ಬ್ಯಾಂಕ್ | 51 | 42.58 |
| 4 | ಚಿಕ್ಕಮಗಳೂರು ಡಿಸಿಸಿ ಬ್ಯಾಂಕ್ | 238 | 207.67 |
| 5 | ಶಿವಮೊಗ್ಗ ಡಿಸಿಸಿ ಬ್ಯಾಂಕ್ | 12 | 12.29 |
| 6 | ಬೆಂಗಳೂರು, ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ ಡಿಸಿಸಿ ಬ್ಯಾಂಕ್ | 293 | 303.35 |
| 7 | ಕೋಲಾರ ಮತ್ತು ಚಿಕ್ಕಬಳ್ಳಾಪುರ ಡಿಸಿಸಿ ಬ್ಯಾಂಕ್ | 346 | 403.4 |
| 8 | ವಿಜಯಪುರ ಡಿಸಿಸಿ ಬ್ಯಾಂಕ್ | 00 | 00 |
| 9 | ಬಾಗಲಕೋಟೆ ಡಿಸಿಸಿ ಬ್ಯಾಂಕ್ | 00 | 00 |
| 10 | ಕೆಡಿಸಿಸಿ ಬ್ಯಾಂಕ್ ನಿ., ಶಿರಸಿ, (ಉ.ಕ) | 00 | 00 |
| 11 | ಮಂಡ್ಯ ಡಿಸಿಸಿ ಬ್ಯಾಂಕ್ | 00 | 00 |
| 12 | ಹಾಸನ ಡಿಸಿಸಿ ಬ್ಯಾಂಕ್ | 00 | 00 |
| 13 | ಕೊಡಗು ಡಿಸಿಸಿ ಬ್ಯಾಂಕ್ | 00 | 00 |
| 14 | ದಕ್ಷಿಣ ಕನ್ನಡ ಡಿಸಿಸಿ ಬ್ಯಾಂಕ್ | 00 | 00 |
| 15 | ಬಳ್ಳಾರಿ ಡಿಸಿಸಿ ಬ್ಯಾಂಕ್ | 00 | 00 |
| 16 | ಬೀದರ್ ಡಿಸಿಸಿ ಬ್ಯಾಂಕ್ | 00 | 00 |
| 17 | ಕಲಬುರ್ಗಿ ಡಿಸಿಸಿ ಬ್ಯಾಂಕ್ | 00 | 00 |
| 18 | ರಾಯಚೂರು ಡಿಸಿಸಿ ಬ್ಯಾಂಕ್ | 00 | 00 |
| 19 | ದಾವಣಗೆರೆ ಡಿಸಿಸಿ ಬ್ಯಾಂಕ್ | 00 | 00 |
| 20 | ಚಿತ್ರದುರ್ಗ ಡಿಸಿಸಿ ಬ್ಯಾಂಕ್ | 33 | 17.86 |
| 21 | ತುಮಕೂರು ಡಿಸಿಸಿ ಬ್ಯಾಂಕ್ | 00 | 00 |
| | | **ಒಟ್ಟು-1015** | **ಒಟ್ಟು ರೂ. 1014.34** |

ಸಹಕಾರ ಸಂಘಗಳ ಅಪರ ನಿಬಂಧಕರು,
(ಪತ್ತು)



**ಕರ್ನಾಟಕ ಸರ್ಕಾರ**

**ಸಂಖ್ಯೆ:** ನಅಇ 14 ಜಿಇಎಲ್ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ:04.02.2021.

08 Start

05-02-2021

**ಇವರಿಂದ:**
ಸರ್ಕಾರದ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

**ಮಾನ್ಯರೇ,**

**ವಿಷಯ:** ಮಾನ್ಯ ವಿಧಾನಸಭೆಯ ಸದಸ್ಯರಾದ ಶ್ರೀ.ತುಕಾರಾಮ್.ಈ. (ಸಂಡೂರ್) ರವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:1097ಕ್ಕೆ ಉತ್ತರ ಕಳುಹಿಸುವ ಬಗ್ಗೆ.

** ** **

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನಸಭೆಯ ಸದಸ್ಯರಾದ ಶ್ರೀ.ತುಕಾರಾಮ್.ಈ. (ಸಂಡೂರ್) ರವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:1097ರ ಉತ್ತರದ 175 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

(ಲತಾ ಕೆ.)
ಸರ್ಕಾರದ ಅಧೀನ ಕಾರ್ಯದರ್ಶಿ,
(ಪೌರಾಡಳಿತ-2 ಮತ್ತು ಮಂಡಳಿ)
ನಗರಾಭಿವೃದ್ಧಿ ಇಲಾಖೆ.



## ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : | 1097 |
| ಸದಸ್ಯರ ಹೆಸರು : | ಶ್ರೀ ತುಕಾರಾಮ್ ಈ (ಸಂಡೂರು) |
| ಉತ್ತರಿಸಬೇಕಾದ ದಿನಾಂಕ : | 05-02-2021 |
| ಉತ್ತರಿಸುವವರು : | ಪೌರಾಡಳಿತ ಮತ್ತು ಸಕ್ಕರೆ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಾದ್ಯಂತಹ ಪುರಸಭೆ ವ್ಯಾಪ್ತಿಯಲ್ಲಿ ಸೇವೆ ಸಲ್ಲಿಸುತ್ತಿರುವ ವಾಟರ್‌ಮ್ಯಾನ್ ಮತ್ತು ವಾಲ್‌ಮ್ಯಾನ್‌ಗಳಿಗೆ ಸುಮಾರು 2-3 ವರ್ಷಗಳಿಂದ ವೇತನ ಬಿಡುಗಡೆ ಮಾಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. ಆದಾಗ್ಯೂ ಎಸ್.ಎಫ್.ಸಿ. ವೇತನ ನಿಧಿಯಡಿ ಮಾರ್ಚ್ 2021ರ ಮಾಹೆಯವರೆಗೆ ಈಗಾಗಲೇ ವೇತನವನ್ನು ಬಿಡುಗಡೆ ಮಾಡಲಾಗಿರುತ್ತದೆ ಹಾಗೂ ಮಂಜೂರಾದ ಹುದ್ದೆಗಳಿಗಿಂತ ಹೆಚ್ಚಿಗೆ ಕಾರ್ಯನಿರ್ವಹಿಸುತ್ತಿರುವ ಅನುಮೋದನೆಗೊಳ್ಳದ/ ಸೇವಾ ಸಕ್ರಮಾತಿಗೊಳ್ಳದ/ ಹೊರಗುತ್ತಿಗೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ನೌಕರರುಗಳಿಗೆ ಪುರಸಭೆಯ ಲಭ್ಯವಿರುವ ಸ್ವಂತ ನಿಧಿಗಳಿಂದ ಆರ್ಥಿಕ ಪರಿಸ್ಥಿತಿಗೆ ಅನುಗುಣವಾಗಿ ವೇತನವನ್ನು ಪಾವತಿಸಲಾಗುತ್ತಿದೆ. |
| ಆ. | ಬಂದಿದ್ದಲ್ಲಿ, ಅವರುಗಳಿಗೆ ಯಾವಾಗ ವೇತನ ಬಿಡುಗಡೆ ಮಾಡಲಾಗುವುದು; | |
| ಇ. | ಸದರಿ ನೌಕರರುಗಳನ್ನು ಖಾಯಂಗೊಳಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಸದರಿ ನೌಕರರುಗಳನ್ನು ಖಾಯಂಗೊಳಿಸುವ ಪ್ರಸ್ತಾವನೆಯು ಇರುವುದಿಲ್ಲ. |
| ಈ. | ಹಾಗಿದ್ದಲ್ಲಿ, ಯಾವಾಗ ಖಾಯಂಗೊಳಿಸಲಾಗುವುದು? | ಉದ್ಭವಿಸುವುದಿಲ್ಲ. |

ಸಂಖ್ಯೆ: ನಅಇ 14 ಜಿಇಎಲ್ 2021

(ಎನ್.ನಾಗರಾಜ್ ಎಂಟಿಬಿ)
ಪೌರಾಡಳಿತ ಮತ್ತು ಸಕ್ಕರೆ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ:ಆನಾಸ 40 ಡಿಆರ್‌ಎ 2021 (ಇ-ಆಫೀಸ್)

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ, ನೆಲಮಹಡಿ
ಬೆಂಗಳೂರು ದಿನಾಂಕ:04.02.2021.

ಇವರಿಂದ,

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ
ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆ

ಇವರಿಗೆ,

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ.

7
5/2/21
[handwritten initials and time annotation]

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ.(ಮಡಿಕೇರಿ)ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:1139 ಗೆ ಉತ್ತರ ನೀಡುವ ಬಗ್ಗೆ.

ಉಲ್ಲೇಖ: ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಇವರ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/9ಅ/ಪ್ರ.ಸಂ 1139/2021, ದಿನಾಂಕ:29.01.2021

******

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ.(ಮಡಿಕೇರಿ)ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:1139 ಗೆ ಉತ್ತರವನ್ನು ಸಿದ್ದಪಡಿಸಿ, ಅದರ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

[signature]
( ಪಿ.ವೆಂಕಟೇಶ್)
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನಶಾಸ್ತ್ರ ಇಲಾಖೆ.

**ಪ್ರತಿ:**

1. ಮಾನ್ಯ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆಯ ಆಪ್ತ ಕಾರ್ಯದರ್ಶಿ, ವಿಕಾಸಸೌಧ, ಬೆಂಗಳೂರು.
3. ಸರ್ಕಾರದ ಉಪ ಕಾರ್ಯದರ್ಶಿ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆಯ ಆಪ್ತ ಸಹಾಯಕ, ವಿಕಾಸಸೌಧ, ಬೆಂಗಳೂರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1139

ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ.(ಮಡಿಕೇರಿ)

ಉತ್ತರಿಸಬೇಕಾದ ದಿನಾಂಕ : 05.02.2021

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕೊಡಗು ಜಿಲ್ಲೆಯಲ್ಲಿ ಬಿ.ಪಿ.ಎಲ್. ಪಡಿತರ ಚೀಟಿ ಕೋರಿ ಅರ್ಜಿ ಸಲ್ಲಿಸಿರುವವರ ಸಂಖ್ಯೆ ಎಷ್ಟು; ಈ ಪೈಕಿ ಎಷ್ಟು ಜನರಿಗೆ ಬಿ.ಪಿ.ಎಲ್. ಪಡಿತರ ಚೀಟಿ ನೀಡಲಾಗಿದೆ; ಯಾವ ಮಾನದಂಡ ಅನುಸರಿಸಿ ನೀಡಲಾಗಿದೆ; ಉಳಿದವರಿಗೆ ಯಾವಾಗ ನೀಡಲಾಗುವುದು; (ವಿವರ ನೀಡುವುದು) | ಕೊಡಗು ಜಿಲ್ಲೆಯಲ್ಲಿ ಕಳೆದ ಮೂರು ವರ್ಷಗಳಲ್ಲಿ ಆದ್ಯತಾ (ಬಿ.ಪಿ.ಎಲ್) ಪಡಿತರ ಚೀಟಿ ಕೋರಿ ಸಲ್ಲಿಕೆಯಾದ ಅರ್ಜಿಗಳ ವಿವರ ಈ ಕೆಳಕಂಡಂತಿವೆ. (see table below) |

| ಕ್ರ.ಸಂ | ಸಲ್ಲಿಕೆ ಯಾದ ಅರ್ಜಿಗಳ ಸಂಖ್ಯೆ | ವಿತರಿಸ ಲಾದ ಅರ್ಜಿಗಳ ಸಂಖ್ಯೆ | ತಿರಸ್ಕರಿಸ ಲಾದ ಅರ್ಜಿಗಳ ಸಂಖ್ಯೆ | ಬಾಕಿ ಉಳಿದಿರುವ ಅರ್ಜಿಗಳ ಸಂಖ್ಯೆ |
|---|---|---|---|---|
| 1 | 28,069 | 22,100 | 3,164 | 2,805 |

ಸರ್ಕಾರಿ ಆದೇಶ ಸಂಖ್ಯೆ: ಆನಾಸ 116 ಡಿಆರ್‌ಎ 2015, ಬೆಂಗಳೂರು, ದಿನಾಂಕ: 25.03.2017 ಮತ್ತು 20.05.2017ರಂತೆ ಈ ಕೆಳಕಂಡ ಹೊರಗಿಡುವ ಮಾನದಂಡಗಳನ್ನು ಆಧರಿಸಿ, ಆದ್ಯತಾ ಪಡಿತರ ಚೀಟಿಯನ್ನು ವಿತರಿಸಲಾಗುತ್ತಿದೆ.

1. ವೇತನವನ್ನು ಗಣನೆಗೆ ತೆಗೆದುಕೊಳ್ಳದೆ ಎಲ್ಲಾ ಖಾಯಂ ನೌಕರರು ಅಂದರೆ, ಸರ್ಕಾರದ ಅಥವಾ ಸರ್ಕಾರದಿಂದ ಅನುದಾನವನ್ನು ಪಡೆಯುತ್ತಿರುವ ಸಂಸ್ಥೆಗಳು ಅಥವಾ ಸರ್ಕಾರಿ ಪ್ರಾಯೋಜಿತ, ಸರ್ಕಾರಿ ಸ್ವಾಮ್ಯದ ಸಂಸ್ಥೆಗಳು/ಮಂಡಳಿಗಳು/ ನಿಗಮಗಳು/ಸ್ವಾಯತ್ತ ಸಂಸ್ಥೆಗಳು ಇತ್ಯಾದಿ: ಒಳಗೊಂಡಂತೆ ಆದಾಯ ತೆರಿಗೆ/ಸೇವಾ ತೆರಿಗೆ/ವ್ಯಾಟ್/ವೃತ್ತಿ ತೆರಿಗೆ ಪಾವತಿಸುವ ಎಲ್ಲಾ ಕುಟುಂಬಗಳು.

2. ಗ್ರಾಮೀಣ ಪ್ರದೇಶದಲ್ಲಿ 3 ಹೆಕ್ಟೇರ್ ಒಣಭೂಮಿ ಅಥವಾ ತತ್ಸಮಾನ ನೀರಾವರಿ ಭೂಮಿ ಹೊಂದಿರುವ ಕುಟುಂಬಗಳು ಅಥವಾ ಗ್ರಾಮೀಣ ಪ್ರದೇಶವನ್ನು ಹೊರತುಪಡಿಸಿ ನಗರ ಪ್ರದೇಶಗಳಲ್ಲಿ 1000 ಚದರ ಅಡಿಗಿಂತಲೂ ಹೆಚ್ಚಿನ ವಿಸ್ತೀರ್ಣದ ಪಕ್ಕಾ ಮನೆಯನ್ನು ಸ್ವಂತವಾಗಿ ಹೊಂದಿರುವ ಕುಟುಂಬಗಳು.

| | | |
|---|---|---|
| | | 3. ಜೀವನೋಪಾಯಕ್ಕಾಗಿ ಸ್ವತಃ ಓಡಿಸುವ ಒಂದು ವಾಣಿಜ್ಯ ವಾಹನವನ್ನು, ಅಂದರೆ ಟ್ರಾಕ್ಟರ್, ಮ್ಯಾಕ್ಸಿಕ್ಯಾಬ್ ಟ್ಯಾಕ್ಸಿ ಇತ್ಯಾದಿಗಳನ್ನು ಹೊಂದಿದ ಕುಟುಂಬವನ್ನು ಹೊರತುಪಡಿಸಿ, ನಾಲ್ಕು ಚಕ್ರದ ವಾಹನಗಳನ್ನು ಹೊಂದಿರುವ ಎಲ್ಲಾ ಕುಟುಂಬಗಳು.<br>4. ಕುಟುಂಬದ ವಾರ್ಷಿಕ ಆದಾಯವು ರೂ.1.20 ಲಕ್ಷಗಳಿಗಿಂತ ಹೆಚ್ಚು ಇರುವ ಕುಟುಂಬಗಳು. |
| ಆ | ಹೊಸದಾಗಿ ಪಡಿತರ ಚೀಟಿ ಬಯಸಿ ಅರ್ಜಿ ಸಲ್ಲಿಸುವ ಅವಕಾಶ ಸ್ಥಗಿತಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವಾಗ ಅವಕಾಶ ಕಲ್ಪಿಸಲಾಗುವುದು? (ಪೂರ್ಣ ವಿವರ ನೀಡುವುದು) | ಬಂದಿರುತ್ತದೆ.<br><br>ಪಡಿತರ ಚೀಟಿಯನ್ನು ಫಲಾನುಭವಿಗಳಿಗೆ ನೀಡುವ ಮುನ್ನ ಕುಟುಂಬದ ಎಲ್ಲಾ ಸದಸ್ಯರ ಬಯೋಮೆಟ್ರಿಕ್ ಪಡೆಯುವುದು ಕಡ್ಡಾಯವಾಗಿರುತ್ತದೆ. ಆದ್ಯತಾ (ಪಿ.ಹೆಚ್.ಹೆಚ್) ಪಡಿತರ ಚೀಟಿಯನ್ನು ವಿತರಿಸುವ ಮುನ್ನ ಅರ್ಜಿದಾರರ ಅರ್ಹತೆಯ ಬಗ್ಗೆ ಸ್ಥಳ ತನಿಖೆಯನ್ನು ಇಲಾಖೆಯ ಕಾರ್ಯ ನಿರ್ವಾಹಕ ಸಿಬ್ಬಂದಿಯ ಮುಖಾಂತರ ನಡೆಸುವುದು ಕಡ್ಡಾಯವಾಗಿರುತ್ತದೆ. ಕೋವಿಡ್-19 ಕರೋನಾ ವೈರಣವು ಪ್ರಸರಣವನ್ನು ತಡೆಗಟ್ಟುವ ಹಿನ್ನೆಲೆಯಲ್ಲಿ ಆದ್ಯತಾ (ಪಿ.ಹೆಚ್.ಹೆಚ್) ಪಡಿತರ ಚೀಟಿ ವಿತರಣೆಯನ್ನು ತಾತ್ಕಾಲಿಕವಾಗಿ ನಿಲ್ಲಿಸಲಾಗಿರುತ್ತದೆ. ಕೋವಿಡ್-19 ಸ್ಥಿತಿಗತಿ ಪರಾಮರ್ಶಿಸಿಕೊಂಡು ಹೊಸ ಪಡಿತರ ಚೀಟಿ ಆನ್‌ಲೈನ್ ಅರ್ಜಿ ಸಲ್ಲಿಸುವ ಪ್ರಕ್ರಿಯೆಯನ್ನು ಪುನರಾರಂಭಿಸಲಾಗುವುದು.<br>ಆದ್ಯತೇತರ (ಎ.ಪಿ.ಎಲ್) ಪಡಿತರ ಚೀಟಿಯನ್ನು ಪಡೆದುಕೊಳ್ಳುವ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ. |

ಆನಾಸ 40 ಡಿಆರ್‌ಎ 2021 (ಇ-ಆಫೀಸ್)

(ಉಮೇಶ ವಿ. ಕತ್ತಿ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.




ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ, ಡಾ. ಬಿ. ಆರ್. ಅಂಬೇಡ್ಕರ್ ರಸ್ತೆ,
ಬೆಂಗಳೂರು –560001. ದೂ. 22034319

ಸಂಖ್ಯೆ: ಸಿಐ 08 ಸಪ್ರಕೈ 2021

ದಿನಾಂಕ: 04.02.2021

Stream 1

6

5/2/21

Time 11:10

**ಇವರಿಂದ:**

ಸರ್ಕಾರದ ಪ್ರಧಾನ ಕಾರ್ಯದರ್ಶಿ,
(ಎಂ.ಎಸ್.ಎಂ.ಇ. & ಗಣಿ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ವಿಕಾಸಸೌಧ, ಬೆಂಗಳೂರು–01.

**ಇವರಿಗೆ:**

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ
ವಿಧಾನಸೌಧ, ಬೆಂಗಳೂರು–01.

**ಮಾನ್ಯರೆ,**

**ವಿಷಯ:** ಮಾನ್ಯ ಕರ್ನಾಟಕ ವಿಧಾನಸಭೆಯ ಸದಸ್ಯರಾದ ಶ್ರೀ ಕುಮಾರಸ್ವಾಮಿ ಹೆಚ್.ಕೆ (ಸಕಲೇಶಪುರ)ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂ: 1167ಕ್ಕೆ ಉತ್ತರಿಸುವ ಬಗ್ಗೆ.

* * * * *

ಮಾನ್ಯ ಕರ್ನಾಟಕ ವಿಧಾನಸಭೆ ಸದಸ್ಯರಾದ ಕರ್ನಾಟಕ ವಿಧಾನಸಭೆಯ ಸದಸ್ಯರಾದ ಶ್ರೀ ಕುಮಾರಸ್ವಾಮಿ ಹೆಚ್.ಕೆ (ಸಕಲೇಶಪುರ)ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂ: 1167ಕ್ಕೆ ದಿನಾಂಕ:05.02.2021 ರಂದು ವಿಧಾನ ಸಭೆಯಲ್ಲಿ ಉತ್ತರಿಸಬೇಕಾಗಿದ್ದು, ಸದರಿ ಪ್ರಶ್ನೆಯ ಉತ್ತರಗಳ 350 ಮುದ್ರಿತ ಪ್ರತಿಗಳು ಹಾಗೂ 5 ಸಿಡಿಗಳನ್ನು ಈ ಪತ್ರದೊಂದಿಗೆ ಕಳುಹಿಸಿಕೊಡಲು ನಿರ್ದೇಶಿತಳಾಗಿದ್ದೇನೆ.

ತಮ್ಮ ನಂಬುಗೆಯ,

Latha

(ಲತಾ ಆರ್)
ಪೀಠಾಧಿಕಾರಿ (ಸಪ್ರಕೈ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಪ್ರತಿಯನ್ನು ಮಾಹಿತಿಗಾಗಿ:**

1. ಮಾನ್ಯ ಮುಖ್ಯಮಂತ್ರಿಗಳ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು–01.
2. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿ, (ಎಂ.ಎಸ್.ಎಂ.ಇ. & ಗಣಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ವಿಕಾಸ ಸೌಧ, ಬೆಂಗಳೂರು–01.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1167
ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ಕುಮಾರಸ್ವಾಮಿ ಹೆಚ್.ಕೆ (ಸಕಲೇಶಪುರ)
ಉತ್ತರಿಸುವವರು : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು
ಉತ್ತರಿಸಬೇಕಾದ ದಿನಾಂಕ : 05-02-2021

| ಕ್ರ.ಸಂ | ಪ್ರಶ್ನೆ | ಉತ್ತರ | Answer |
|---|---|---|---|
| ಅ) | ಕೆ.ಐ.ಎ.ಡಿ.ಬಿ ವತಿಯಿಂದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಫಲಾನುಭವಿಗಳಿಗೆ ಶೇಕಡ 50 ರಷ್ಟು ಸಹಾಯಧನದ ಅಡಿಯಲ್ಲಿ ನಿವೇಶನಗಳನ್ನು ಹಂಚಲು ಅವಕಾಶವಿದ್ದಾಗ್ಯೂ ಶೇಕಡ 24ರಷ್ಟು ಹಂಚಿಕೆಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಉದ್ಯಮಶೀಲರು ಇಂದಿನ ಸ್ಪರ್ಧಾತ್ಮಕ ಮಾರುಕಟ್ಟೆಯಲ್ಲಿ ಉದ್ದಿಮೆ ಸ್ಥಾಪಿಸಲು ಅವಶ್ಯವಿರುವ ಬಂಡವಾಳ ಹೂಡಲು ಕಷ್ಟಕರವಾಗಿರುವುದನ್ನು ಮನಗಂಡಿರುವ ಸರ್ಕಾರವು ಭೂಮಿ ಸಹಾಯಧನ, ಕಡಿಮೆ ಬಡ್ಡಿಯಲ್ಲಿ ಸಾಲ, ಬಂಡವಾಳ ಹೂಡಿಕೆ ಸಹಾಯಧನ, ಸಾಫ್ಟ್‌ಸೀಡ್ ಕ್ಯಾಪಿಟಲ್ ಸಹಾಯ, ಇತ್ಯಾದಿ ಸೌಲಭ್ಯಗಳನ್ನು ಒದಗಿಸುತ್ತಿದೆ.<br><br>ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಲ್ಲಿ ದಿನಾಂಕ:21.03.2009 ರಿಂದ ಈವರೆವಿಗೆ ಹೊಸದಾಗಿ ಅಭಿವೃದ್ಧಿಪಡಿಸುತ್ತಿರುವ ಕೈಗಾರಿಕಾ ಪ್ರದೇಶಗಳಲ್ಲಿ ಶೇಕಡ 22.65ರಷ್ಟು ನಿವೇಶನಗಳನ್ನು ಅನುಸೂಚಿತ ಜಾತಿ/ಪಂಗಡದ ಉದ್ದಿಮೆದಾರರಿಗೆ ಮೀಸಲಿಟ್ಟು ಹಂಚಿಕೆ ಮಾಡಲಾಗುತ್ತಿದೆ.<br><br>ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ಮತ್ತು ಕರ್ನಾಟಕ ಸಣ್ಣ ಕೈಗಾರಿಕೆ ಅಭಿವೃದ್ಧಿ ನಿಗಮಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಉದ್ದಿಮೆದಾರರಿಗೆ ಹಂಚಿಕೆ ಮಾಡುವ ನಿವೇಶನ ಮತ್ತು ಮಳಿಗೆಗಳಿಗೆ ಸರ್ಕಾರವು ಶೇ. 50ರಷ್ಟು ಭೂ ಸಹಾಯಧನ ನೀಡಲು ಸರ್ಕಾರದ ಆದೇಶ ಸಂಖ್ಯೆ: ಸಿಐ 81 ಸಿ ಎಸ್ ಸಿ 2016 ದಿನಾಂಕ 27.06.2016 ಹಾಗೂ ಸಿಐ 147 ಸಿ ಎಸ್ ಸಿ 2016 ದಿನಾಂಕ 22.12.2016 ರಲ್ಲಿ ಆದೇಶ ಹೊರಡಿಸಲಾಗಿತ್ತು. | The Government is aware that it would be difficult for SC/ST Entrepreneurs to mobilize and invest to establish industries in this competitive market, so the Government has been providing them with land subsidy, interest subsidy, investment subsidy, soft seed capital.<br><br>KIADB has been reserving 22.65% of sites from 21.03.2009 in the newly developed industrial areas for SC/ST Entrepreneurs.<br><br>The State Government through G.O. No. CI 81 CSC 2016 dated 27.06.2016 and CI 147 CSC 2016 dated 22.12.2016 has been providing 50% subsidy on land and sheds allotted by KIADB and KSSIDC.<br><br>The details of land allotted to SC/ST |

ಕಳೆದ 5 ವರ್ಷಗಳಲ್ಲಿ ಕೆ.ಐ.ಎ.ಡಿ.ಬಿ ವತಿಯಿಂದ ಅನುಸೂಚಿತ ಜಾತಿ/ಪಂಗಡಗಳಿಗೆ ಹಂಚಿಕೆ ಮಾಡಲಾಗಿರುವ ಭೂಮಿಯ ವಿವರ ಕೆಳಕಂಡಂತಿದೆ:

| ವರ್ಷ | ಎಸ್ ಸಿ ಪಿ | | ಟಿ ಎಸ್ ಪಿ | |
|---|---|---|---|---|
| | ಫಲಾನುಭವಿಗಳ ಸಂಖ್ಯೆ (ರೂ. ಲಕ್ಷಗಳಲ್ಲಿ) | ಹಂಚಿಕೆಯಾಗಿರುವ ವಿಸ್ತೀರ್ಣ (ಎಕರೆ) | ಫಲಾನುಭವಿಗಳ ಸಂಖ್ಯೆ (ರೂ. ಲಕ್ಷಗಳಲ್ಲಿ) | ಹಂಚಿಕೆ ಯಾಗಿರುವ ವಿಸ್ತೀರ್ಣ (ಎಕರೆ) |
| 2016-17 | 139 | 80.57 | 47 | 28.72 |
| 2017-18 | 353 | 237.9 | 107 | 71.08 |
| 2018-19 | 299 | 265.92 | 89 | 71.59 |
| 2019-20 | 210 | 154.07 | 72 | 54.5 |
| 2020-21 (31.12.2020) | 94 | 84.39 | 30 | 16.78 |
| Total | 1095 | 822.85 | 345 | 242.67 |

Entrepreneurs by KIADB for the last 5 years is as given below:

| Year | SCP | | TSP | |
|---|---|---|---|---|
| | No of Benefi-ciaries (Rs. in lakhs) | Extent Allotted (Acres) | No of Benefi-ciaries (Rs. in lakhs) | Extent Allotted (Acres) |
| 2016-17 | 139 | 80.57 | 47 | 28.72 |
| 2017-18 | 353 | 237.9 | 107 | 71.08 |
| 2018-19 | 299 | 265.92 | 89 | 71.59 |
| 2019-20 | 210 | 154.07 | 72 | 54.5 |
| 2020-21 (31.12. 2020) | 94 | 84.39 | 30 | 16.78 |
| Total | 1095 | 822.85 | 345 | 242.67 |

ಆ) ಹಾಗಿದ್ದಲ್ಲಿ, ಸಹಾಯಧನವನ್ನು ಶೇಕಡ 50 ರಿಂದ ಶೇಕಡ 75ಕ್ಕೆ ಹೆಚ್ಚಿಸಿರುವ ಆದೇಶ ಜಾರಿಯಾಗಿದೆಯೇ;

ಸರ್ಕಾರಿ ಆದೇಶ ಸಂಖ್ಯೆ: ಸಿಐ 76 ಸಪ್ರಕೈ 2019 ದಿನಾಂಕ:28.05.2020 ಆದೇಶದನ್ವಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಉದ್ದಿಮೆದಾರರಿಗೆ ನೀಡಲಾಗುತ್ತಿರುವ ಭೂ ಸಹಾಯಧನವನ್ನು ಶೇ.50 ರಿಂದ ಶೇ.75ಕ್ಕೆ ಹೆಚ್ಚಿಸಿ ಆದೇಶಿಸಲಾಗಿರುತ್ತದೆ.

ಮುಂದುವರೆದು, ದಿನಾಂಕ: 05-09-2020 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಆರ್ಥಿಕ ಇಲಾಖೆಯ ಅಭಿಪ್ರಾಯ ಹಾಗೂ ಸರ್ಕಾರದ ಆದೇಶ ದಿನಾಂಕ:28.05.2020 ರನ್ವಯ ಸದರಿ ಯೋಜನೆಯಡಿ committed Liability ಉಂಟುಮಾಡಬಾರದು ಎಂದು ನಿರ್ಬಂಧಿಸಿರುವುದನ್ನು ಗಣನೆಗೆ ತೆಗೆದುಕೊಂಡಿದ್ದರಿಂದ, KIADB ಯು

The Government by G.O. No. CI 76 SSI 2019 dated 28.05.2020 has enhanced land subsidy from 50% to 75% for SC/ST Entrepreneurs.

Further, in the meeting held on 05-09-2020 under the chairmanship of the Principal Secretary to Govt., Commerce & Industries Department, the opinion of Finance Department and conditions stipulated in the G.O. dtd.28-05-2020, that not to create committed liability was noted. Accordingly, the Social Welfare

# ಕರ್ನಾಟಕ ಸರ್ಕಾರ

ಸಂಖ್ಯೆ: ನಅಇ 29 ಜಿಇಎಲ್ 2021(ಇ)

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 04.02.2021

05 stard

05-02-2021

**ಇವರಿಂದ:**
ಸರ್ಕಾರದ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭಾ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

**ಮಾನ್ಯರೇ,**

**ವಿಷಯ:** ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಐಹೋಳೆ ಡಿ. ಮಹಾಲಿಂಗಪ್ಪ (ರಾಯಭಾಗ) ರವರ **ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 1044ಕ್ಕೆ** ಕ್ಕೆ ಉತ್ತರಿಸುವ ಬಗ್ಗೆ.

** ** **

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಐಹೋಳೆ ಡಿ. ಮಹಾಲಿಂಗಪ್ಪ (ರಾಯಭಾಗ) ರವರ **ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 1044ಕ್ಕೆ** ಉತ್ತರದ 175 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ನಿಮ್ಮ ನಂಬುಗೆಯ,

(ಲತಾ ಕೆ)
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ
(ಎಂ.ಎ-2 ಮತ್ತು ಮಂಡಳಿ)

04/02/21



# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : | 1044 |
| ಸದಸ್ಯರ ಹೆಸರು : | ಶ್ರೀ ಐಹೋಳೆ ಡಿ. ಮಹಾಲಿಂಗಪ್ಪ.(ರಾಯಭಾಗ) |
| ಉತ್ತರಿಸಬೇಕಾದ ದಿನಾಂಕ : | 05-02-2021 |
| ಉತ್ತರಿಸುವವರು : | ಪೌರಾಡಳಿತ ಮತ್ತು ಸಕ್ಕರೆ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆ, ರಾಯಬಾಗ ಪಟ್ಟಣ ಪಂಚಾಯ್ತಿ ವ್ಯಾಪ್ತಿಯಲ್ಲಿರುವ ಮೀನುಗಾರಿಕೆ ಕಛೇರಿಯ ನಿವೇಶನ ಹಾಗೂ ಸಮಾಜ ಕಲ್ಯಾಣ ಇಲಾಖೆಯ ವಸತಿ ನಿಲಯದ ನಿವೇಶನಗಳಿಗೆ ಪಟ್ಟಣ ಪಂಚಾಯ್ತಿಯಲ್ಲಿ ನಕಲಿ ದಾಖಲೆಗಳನ್ನು ಸೃಷ್ಠಿಸಿ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೆಳಗಾವಿ ಜಿಲ್ಲೆ ರಾಯಬಾಗ ಪಟ್ಟಣ ಪಂಚಾಯತಿ ವ್ಯಾಪ್ತಿಯಲ್ಲಿರುವ ಮೀನುಗಾರಿಕೆ ಕಚೇರಿಯ ನಿವೇಶನ ಹಾಗೂ ಸಮಾಜ ಕಲ್ಯಾಣ ಇಲಾಖೆಯ ವಸತಿ ನಿಲಯದ ನಿವೇಶನಗಳಿಗೆ ಸಂಬಂಧಪಟ್ಟಂತೆ ರಾಯಬಾಗ ಪಟ್ಟಣ ಪಂಚಾಯತಿಯಲ್ಲಿ ಯಾವುದೇ ನಕಲಿ ದಾಖಲೆಗಳು ಸೃಷ್ಠಿಯಾಗಿರುವುದಿಲ್ಲವೆಂದು ವರದಿಯಾಗಿದೆ. ಆದಾಗ್ಯೂ ನಕಲಿ ದಾಖಲೆ ಬಗ್ಗೆ ಸೂಕ್ತ ದಾಖಲೆ ಒದಗಿಸಿದ್ದಲ್ಲಿ, ನಕಲಿ ದಾಖಲೆ ಸೃಷ್ಟಿ ಮಾಡಿರುವುದು ದೃಢಪಟ್ಟಲ್ಲಿ ಸಂಬಂಧಿಸಿದ ಅಧಿಕಾರಿ/ನೌಕರರ ವಿರುದ್ಧ ನಿಯಮಾನುಸಾರ ಶಿಸ್ತು ಕ್ರಮ ಕೈಗೊಳ್ಳಲಾಗುವುದು. |
| ಆ) | ಬಂದಿದ್ದಲ್ಲಿ, ಈ ಕುರಿತು ಸರ್ಕಾರ ಕೈಗೊಳ್ಳುವ ಕಾನೂನಾತ್ಮಕ ಕ್ರಮಗಳೇನು; (ವಿವರ ನೀಡುವುದು) | |
| ಇ) | ಈ ನಿವೇಶನಗಳಿಗೆ ಖಾಸಗಿ ವ್ಯಕ್ತಿಗಳ ಹೆಸರಿನಲ್ಲಿ ಸೃಷ್ಠಿಸಿರುವ ನಕಲಿ ದಾಖಲೆಗಳನ್ನು ರದ್ದುಪಡಿಸಿ ಸರ್ಕಾರ ನಿವೇಶನಗಳನ್ನು ತನ್ನ ವಶಕ್ಕೆ ಪಡೆಯಲು ಕ್ರಮ ಕೈಗೊಳ್ಳುವುದೇ; | |
| ಈ) | ಈ ನಕಲಿ ದಾಖಲೆಗಳನ್ನು ಸೃಷ್ಠಿಸಿದ, ಸೃಷ್ಠಿಸಲು ಸಹಕರಿಸಿದ ಅಧಿಕಾರಿ/ನೌಕರರುಗಳ ಮೇಲೆ ಸರ್ಕಾರ ಕೈಗೊಳ್ಳುವ ಕಾನೂನಾತ್ಮಕ ಕ್ರಮಗಳೇನು? (ವಿವರ ನೀಡುವುದು) | |

ಸಂಖ್ಯೆ: ನಅಇ 29 ಜಿಇಎಲ್ 2021(ಇ)

(ಎನ್.ನಾಗರಾಜ್ ಎಂಟಿಬಿ)
ಪೌರಾಡಳಿತ ಮತ್ತು ಸಕ್ಕರೆ ಸಚಿವರು



**ಕರ್ನಾಟಕ ಸರ್ಕಾರ**

ಸಂಖ್ಯೆ: ನಅಇ 22 ಎಸಿಎಂ 2021 (ಇ)

ಕರ್ನಾಟಕ ಸರ್ಕಾರ ಸಚಿವಾಲಯ
ವಿಕಾಸಸೌಧ
ಬೆಂಗಳೂರು, ದಿನಾಂಕ 05.02. 2021.

**ಇವರಿಂದ:**
ಸರ್ಕಾರದ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ,
ವಿಕಾಸ ಸೌಧ, ಬೆಂಗಳೂರು.

91
5/2/21

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ : ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ನಾಗೇಂದ್ರ ಎಲ್. (ಚಾಮರಾಜ) ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1115 ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ : ತಮ್ಮ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/9ಅ/ಪ್ರ.ಸಂ.1115/2021, ದಿನಾಂಕ 27.01.2021.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ನಾಗೇಂದ್ರ ಎಲ್. (ಚಾಮರಾಜ) ಇವರು ಮಂಡಿಸಿರುವ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 1115 ಕ್ಕೆ ಉತ್ತರದ 25 ಪ್ರತಿಗಳನ್ನು ಮುಂದಿನ ಅಗತ್ಯ ಕ್ರಮಕ್ಕಾಗಿ ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ

**(ಎಸ್. ವೀಣಾ)**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ
(ಮಹಾನಗರಪಾಲಿಕೆ-2)



# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1115
ಸದಸ್ಯರ ಹೆಸರು : ಶ್ರೀ ನಾಗೇಂದ್ರ ಎಲ್. (ಚಾಮರಾಜ)
ಉತ್ತರಿಸಬೇಕಾದ ದಿನಾಂಕ : 05.02.2021
ಉತ್ತರಿಸಬೇಕಾದ ಸಚಿವರು : ನಗರಾಭಿವೃದ್ಧಿ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಮೈಸೂರು ನಗರದಲ್ಲಿ ಎಷ್ಟು ಪಾರಂಪರಿಕ ಕಟ್ಟಡಗಳಿವೆ; (ವಿವರ ಒದಗಿಸುವುದು) | ಮೈಸೂರು-ನಂಜನಗೂಡು ಮಹಾಯೋಜನೆ-2031 (ಪರಿಷ್ಕೃತ-II)ರ ಅಧ್ಯಾಯ ಭಾಗ-11 ರಲ್ಲಿ ಉಲ್ಲೇಖಿಸಿರುವಂತೆ ಮೈಸೂರು ನಗರದ ಪಾರಂಪರಿಕ ಕಟ್ಟಡಗಳನ್ನು ಐದು ವಿಭಾಗಗಳನ್ನಾಗಿ ವಿಂಗಡಿಸಲಾಗಿರುತ್ತದೆ. ಅದರಂತೆ, ಒಟ್ಟು 169 ಪಾರಂಪರಿಕ ಕಟ್ಟಡಗಳಿದ್ದು, ವಿವರ ಈ ಕೆಳಕಂಡಂತಿದೆ.<br>1. ಗ್ರೂಪ್-ಎ = 16 ಕಟ್ಟಡಗಳು<br>2. ಗ್ರೂಪ್-ಬಿ = 4 ಕಟ್ಟಡಗಳು<br>3. ಗ್ರೂಪ್-ಸಿ = 24 ಕಟ್ಟಡಗಳು<br>4. ಗ್ರೂಪ್ ಡಿ = 34 ಕಟ್ಟಡಗಳು<br>5. ಗ್ರೂಪ್-ಇ = 91 ಕಟ್ಟಡಗಳು |
| ಆ) | ಮೈಸೂರು ನಗರದಲ್ಲಿ ಇಂತಹ ಪಾರಂಪರಿಕ ಕಟ್ಟಡಗಳಲ್ಲಿ ಎಷ್ಟು ಕಟ್ಟಡಗಳು ಶಿಥಿಲಾವಸ್ಥೆಯಲ್ಲಿವೆ; ಇವುಗಳನ್ನು ಅಭಿವೃದ್ಧಿ ಪಡಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳಾವುವು; | ಮೈಸೂರು ಮಹಾನಗರ ಪಾಲಿಕೆಯ ಸುಪರ್ದಿಯಲ್ಲಿರುವಂತಹ ಪಾರಂಪರಿಕ ಕಟ್ಟಡಗಳಲ್ಲಿ ದೇವರಾಜ ಮಾರುಕಟ್ಟೆ, ಲ್ಯಾನ್ಸ್‌ಡೌನ್ ಬಿಲ್ಡಿಂಗ್ ಹಾಗೂ ದೊಡ್ಡ ಗಡಿಯಾರ (ಸಿಲ್ವರ್ ಕ್ಲಾಕ್ ಟವರ್) ಕಟ್ಟಡವು ಶಿಥಿಲಾವಸ್ಥೆಯಲ್ಲಿದೆ.<br>**<u>ದೊಡ್ಡ ಗಡಿಯಾರ :</u>**<br>ದೊಡ್ಡ ಗಡಿಯಾರವನ್ನು ದುರಸ್ತಿ ಪಡಿಸಲು ಅಂದಾಜು ಪಟ್ಟಿಯನ್ನು ತಯಾರಿಸಿ, ದುರಸ್ತಿ ಕಾಮಗಾರಿಯನ್ನು ಕೈಗೊಳ್ಳುವಂತೆ ಮೈಸೂರು ಮಹಾನಗರ ಪಾಲಿಕೆಯಿಂಧ ಆಯುಕ್ತರು, ಪುರಾತತ್ವ, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು ಇವರಿಗೆ ಪತ್ರ ಬರೆಯಲಾಗಿದೆ.<br>**<u>ಲ್ಯಾನ್ಸ್‌ಡೌನ್ ಕಟ್ಟಡ :</u>**<br>• ಲ್ಯಾನ್ಸ್‌ಡೌನ್ ಕಟ್ಟಡ ಅಭಿವೃದ್ಧಿಗೆ ರೂ. 3.00 ಕೋಟಿಗಳ ಅನುದಾನವನ್ನು 2014-15 ನೇ ಸಾಲಿನಲ್ಲಿ ಸರ್ಕಾರದಿಂದ ಮಂಜೂರು ಮಾಡಲಾಗಿದೆ. ಈ ಕಾಮಗಾರಿಯ ಭಾಗಶಃ ಬಿಲ್ಲಿನ ಮೊತ್ತ ರೂ. 94,59,518/- ಗಳನ್ನು ಗುತ್ತಿಗೆದಾರರಿಗೆ ಪಾವತಿಸಲಾಗಿದೆ.<br>• ದೇವರಾಜ ಮಾರುಕಟ್ಟೆಯ ನವೀಕರಣದ ಸಂಧರ್ಭದಲ್ಲಿ ಮಾರುಕಟ್ಟೆಯ ಉತ್ತರಭಾಗದಲ್ಲಿನ ಮಧ್ಯದ ಕಟ್ಟಡವು ದಿನಾಂಕ : 28-08-2016 ರಂದು ಕುಸಿದ ಕಾರಣದಿಂದಾಗಿ ದೇವರಾಜ ಮಾರುಕಟ್ಟೆ ಮತ್ತು ಲ್ಯಾನ್ಸ್‌ಡೌನ್ ಕಟ್ಟಡದ ಅಭಿವೃದ್ಧಿ ಕಾಮಗಾರಿಯನ್ನು ಸ್ಥಗಿತಗೊಳಿಸಲಾಗಿರುತ್ತದೆ.<br>• ಲ್ಯಾನ್ಸ್‌ಡೌನ್ ಕಟ್ಟಡವನ್ನು ನವೀಕರಣಗೊಳಿಸಬೇಕೇ ಅಥವಾ ಪುನರ್ ನಿರ್ಮಾಣ ಮಾಡಬೇಕೇ ಎಂಬ ಬಗ್ಗೆ ಸೂಕ್ತ ನಿರ್ಣಯಕ್ಕಾಗಿ ಹಿಂದಿನ ವಿಶೇಷ ಪಾರಂಪರಿಕ ಸಮಿತಿಯ ಮುಂದೆ ಪ್ರಸ್ತಾವನೆ ಮಂಡಿಸಲಾಗಿದ್ದು, ಸದರಿ ಸಮಿತಿಯು ವಿವಿಧ ತಜ್ಞರೊಳಗೊಂಡ ತಜ್ಞರ ಸಮಿತಿಯನ್ನು ರಚಿಸಿ ವರದಿಯನ್ನು ನೀಡುವಂತೆ ಸೂಚಿಸಿರುತ್ತದೆ.<br>• ಪ್ರಸ್ತುತ ವಿಶೇಷ ಪಾರಂಪರಿಕ ಸಮಿತಿಯು ಅನೂರ್ಜಿತಗೊಂಡಿರುವುದರಿಂದ, ಪಾರಂಪರಿಕ ಸಂರಕ್ಷಣಾ ಸಮಿತಿ ಪುನರ್ ರಚನೆಯಾದ ನಂತರ ಲ್ಯಾನ್ಸ್‌ಡೌನ್ ಕಟ್ಟಡವನ್ನು |

| | | |
|---|---|---|
| | | ನವೀಕರಣಗೊಳಿಸಬೇಕೇ ಅಥವಾ ಪುನರ್ ನಿರ್ಮಾಣ ಮಾಡಬೇಕೇ ಎಂಬುದರ ಬಗ್ಗೆ ಪರಿಶೀಲಿಸಲಾಗುವುದು.<br><br>**<u>ದೇವರಾಜ ಮಾರುಕಟ್ಟೆ :</u>**<br>• ದೇವರಾಜ ಮಾರುಕಟ್ಟೆ ಅಭಿವೃದ್ಧಿಗೆ ರೂ. 9.00 ಕೋಟಿಗಳ ಅನುದಾನವನ್ನು 2014-15 ನೇ ಸಾಲಿನಲ್ಲಿ ಸರ್ಕಾರದಿಂದ ಮಂಜೂರು ಮಾಡಲಾಗಿದೆ. ಈ ಕಾಮಗಾರಿಯ ಭಾಗಶಃ ಬಿಲ್ಲಿನ ಮೊತ್ತ ರೂ. 73,38,880/- ಗಳನ್ನು ಗುತ್ತಿಗೆದಾರರಿಗೆ ಪಾವತಿಸಲಾಗಿದೆ.<br><br>• ದೇವರಾಜ ಮಾರುಕಟ್ಟೆಯ ನವೀಕರಣದ ಸಂಧರ್ಭದಲ್ಲಿ ದಿನಾಂಕ 28-08-2016 ರಂದು ದೇವರಾಜ ಮಾರುಕಟ್ಟೆಯ ಉತ್ತರ ಭಾಗವು ಕುಸಿದು ಬಿದ್ದ ಕಾರಣ ಅಂದಿನ ಮಾನ್ಯ ಮುಖ್ಯಮಂತ್ರಿಗಳು ದಿನಾಂಕ:30-08-2016 ರಂದು ಸ್ಥಳ ಪರಿಶೀಲಿಸಿ, ಟಾಸ್ಕ್ ಫೋರ್ಸ್ ಕಮಿಟಿಯ ವರದಿ ಪಡೆದು, ವರದಿ ಬಂದ ನಂತರ ಕಾಮಗಾರಿಗಳನ್ನು ಕೈಗೊಳ್ಳಲು ಸೂಚಿಸಿರುವ ಕಾರಣ ಕಾಮಗಾರಿಗಳನ್ನು ಸ್ಥಗಿತಗೊಳಿಸಲಾಗಿರುತ್ತದೆ.<br><br>• ಮುಂದುವರೆದು, ದೇವರಾಜ ಮಾರುಕಟ್ಟೆಯ ಹಾಲಿ ಕಟ್ಟಡವನ್ನು ತೆರವುಗೊಳಿಸಿ, ಹಾಲಿ ಇರುವ ಕಟ್ಟಡದ ಎತ್ತರಕ್ಕೆ ಸೀಮಿತವಾಗಿ ಪ್ರಸ್ತುತ ಪಾರಂಪರಿಕ ಶೈಲಿಯ ವಿನ್ಯಾಸದಂತೆ ಹಾಗೂ ಮಾದರಿಯಲ್ಲಿ ಹೊಸದಾಗಿ ಪುನರ್‌ನಿರ್ಮಾಣ ಮಾಡಲು ಮೈಸೂರು ನಗರದ ವಿಶೇಷ ಪಾರಂಪರಿಕ ಸಮಿತಿ ಹಾಗೂ ಕೌನ್ಸಿಲ್ ಸಭೆಯು ತೀರ್ಮಾನಿಸಿರುವುದರಿಂದ ಅದರಂತೆ ಹಾಲಿ ಕಟ್ಟಡವನ್ನು ತೆರವುಗೊಳಿಸಲು ಅನುಮತಿ ಕೋರಿ ಪೌರಾಡಳಿತ ನಿರ್ದೇಶನಾಲಯದಿಂದ ಪ್ರಸ್ತಾವನೆ ಸ್ವೀಕೃತವಾಗಿದ್ದು, ಸರ್ಕಾರದ ಪರಿಶೀಲನೆಯಲ್ಲಿದೆ.<br><br>• ಈ ಮಧ್ಯೆ ದಿನಾಂಕ 10-12-2019 ರ ಮೈಸೂರು ನಗರದ ವಿಶೇಷ ಪಾರಂಪರಿಕ ಸಮಿತಿ ಸಭೆಯ ತೀರ್ಮಾನದ ಹಾಗೂ ದಿನಾಂಕ 30-01-2020 ರಂದು ನಡೆದ ಮೈಸೂರು ಮಹಾನಗರ ಪಾಲಿಕೆಯ ಸಾಮಾನ್ಯ ಕೌನ್ಸಿಲ್ ಸಭೆಯ ತೀರ್ಮಾನದ ವಿರುದ್ಧ ಶ್ರೀ ಶ್ರೀಜಯ್ ದೇವರಾಜ ಅರಸು ಮತ್ತಿತರರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ 15215/2020 ಅನ್ನು ದಾಖಲಿಸಿದ್ದು, ಸದರಿ ಪ್ರಕರಣದಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ 21-12-2020 ರಂದು ನೀಡಿರುವ ಮಧ್ಯಂತರ ಆದೇಶದಲ್ಲಿ ಕೌನ್ಸಿಲ್ ಸಭೆಯ ತೀರ್ಮಾನ ಹಾಗೂ ವಿಶೇಷ ಪಾರಂಪರಿಕ ಸಮಿತಿ ಸಭೆಯ ತೀರ್ಮಾನದ ಆಧಾರದ ಮೇಲೆ ಯಾವುದೇ ಕ್ರಮ ಕೈಗೊಳ್ಳದಿರಲು ಸೂಚಿಸಿದೆ. |
| ಇ) | ಇಂತಹ ಪಾರಂಪರಿಕ ಕಟ್ಟಡಗಳ ನಿರ್ವಹಣೆಗಾಗಿ ಕಳೆದ ಮೂರು ವರ್ಷಗಳಲ್ಲಿ ಎಷ್ಟು ಅನುದಾನ ಬಿಡುಗಡೆ ಮಾಡಲಾಗಿದೆ? (ವಿವರ ಒದಗಿಸುವುದು) | ಕಳೆದ ಮೂರು ವರ್ಷಗಳಲ್ಲಿ ಯಾವುದೇ ಅನುದಾನ ಬಿಡುಗಡೆ ಮಾಡಿರುವುದಿಲ್ಲ. |

ನಅಇ 22 ಎಸಿಎಂ 2021 (ಇ)

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು



ಕರ್ನಾಟಕ ಸರ್ಕಾರ

ಸಂಖ್ಯೆ: ನಅಇ 28 ಯುಎಂಎಸ್ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ, 4ನೇ ಮಹಡಿ,
ಬೆಂಗಳೂರು, ದಿನಾಂಕ 04-02-2021

11
Stand
05/2/21

**ಇವರಿಂದ:**
**ಸರ್ಕಾರದ ಕಾರ್ಯದರ್ಶಿ,**
ನಗರಾಭಿವೃದ್ಧಿ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ:**
**ಕಾರ್ಯದರ್ಶಿ,**
ಕರ್ನಾಟಕ ವಿಧಾನಸಭೆ,
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

**ವಿಷಯ:** ಶ್ರೀ. ಅಮರೇಗೌಡ ಲಿಂಗನಗೌಡ ಪಾಟೀಲ್ ಬಯ್ಯಾಪುರ (ಕುಷ್ಟಗಿ) ಮಾನ್ಯ ವಿಧಾನಸಭಾ ಸದಸ್ಯರು ಇವರು ಮಂಡಿಸಿರುವ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 1131ಕ್ಕೆ ಉತ್ತರ ಸಲ್ಲಿಸುವ ಬಗ್ಗೆ.

~*~*~*~*~

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಪತ್ರದಲ್ಲಿ ಕೋರಿರುವಂತೆ ಶ್ರೀ. ಅಮರೇಗೌಡ ಲಿಂಗನಗೌಡ ಪಾಟೀಲ್ ಬಯ್ಯಾಪುರ (ಕುಷ್ಟಗಿ) ಮಾನ್ಯ ವಿಧಾನಸಭಾ ಸದಸ್ಯರು ಇವರು ಮಂಡಿಸಿರುವ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 1131ಕ್ಕೆ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ನಿಮ್ಮ ನಂಬುಗೆಯ,

( ಲತಾ. ಕೆ)
ಸರ್ಕಾರದ ಅಧೀನ ಕಾರ್ಯದರ್ಶಿ,
(ಪೌರಾಡಳಿತ-2 & ಮಂಡಳಿ)
ನಗರಾಭಿವೃದ್ಧಿ ಇಲಾಖೆ.

# ಕರ್ನಾಟಕ ವಿಧಾನಸಭೆ

| | |
|---|---|
| ಸದಸ್ಯರ ಹೆಸರು | ಶ್ರೀ ಅಮರೇಗೌಡ ಲಿಂಗನಗೌಡ ಪಾಟೀಲ್ ಬಯ್ಯಾಪುರ್ (ಕುಷ್ಟಗಿ) |
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 1131 |
| ಉತ್ತರಿಸಬೇಕಾದ ದಿನಾಂಕ | 05-02-2021 |
| ಉತ್ತರಿಸಬೇಕಾದವರು | ನಗರಾಭಿವೃದ್ಧಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಪ್ಪಳ ಜಿಲ್ಲೆ, ಕುಷ್ಟಗಿ ಪಟ್ಟಣಕ್ಕೆ 24*7 ಕುಡಿಯುವ ನೀರಿನ ವ್ಯವಸ್ಥೆಯನ್ನು ಕಲ್ಪಿಸಲು ಯೋಜನೆಯನ್ನು ರೂಪಿಸಲಾಗಿದೆಯೇ; | ಕೊಪ್ಪಳ ಜಿಲ್ಲೆ, ಕುಷ್ಟಗಿ ಪಟ್ಟಣಕ್ಕೆ 24*7 ಕುಡಿಯುವ ನೀರಿನ ವ್ಯವಸ್ಥೆಯನ್ನು ಕಲ್ಪಿಸಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವತಿಯಿಂದ ಯೋಜನೆಯನ್ನು ರೂಪಿಸಲಾಗಿದೆ. |
| ಆ) | ಹಾಗಿದ್ದಲ್ಲಿ, ಈಗ ಅದು ಯಾವ ಹಂತದಲ್ಲಿದೆ; ಕುಡಿಯುವ ನೀರಿನ ವ್ಯವಸ್ಥೆಯನ್ನು ಸುಧಾರಣೆ ಮಾಡಲು ಕೈಗೊಂಡ ಕ್ರಮಗಳೇನು? | ಕೇಂದ್ರ ಸರ್ಕಾರದ ಯು. ಐ. ಡಿ. ಎಸ್. ಎಸ್. ಎಂ. ಟಿ ಯೋಜನೆಯಡಿ ರೂ.5821.20 ಲಕ್ಷಗಳ ಅನುದಾನದಲ್ಲಿ ಹುನಗುಂದ, ಇಲಕಲ್ಲ ಮತ್ತು ಕುಷ್ಟಗಿ ಪಟ್ಟಣಗಳ ಸಮಗ್ರ ಕುಡಿಯುವ ನೀರು ಸರಬರಾಜು ಯೋಜನೆಯಲ್ಲಿ ಕುಷ್ಟಗಿ ಪಟ್ಟಣದ 3 ವಲಯಗಳಲ್ಲಿಯ ವಲಯ-2, ಪಾರ್ಟ-1 ರಲ್ಲಿ 24*7 ಮಾದರಿಯ ನೀರಿನ ವ್ಯವಸ್ಥೆಯನ್ನು ಕಲ್ಪಿಸಲು ರೂ.420.13 ಲಕ್ಷಗಳಲ್ಲಿ ಕಾಮಗಾರಿ ಕೈಗೊಂಡು, 23.22 ಕಿ.ಮೀ. ವಿತರಣಾ ಕೊಳವೆ ಮಾರ್ಗ ಮತ್ತು 2266 ಮನೆಗಳಿಗೆ ನೀರಿನ ಸಂಪರ್ಕ ಕಲ್ಪಿಸಿ ದಿನಾಂಕ 30-03-2018 ರಂದು ಚಾಲನೆಗೊಳಿಸಿದೆ.<br><br>ಕುಷ್ಟಗಿ ಪಟ್ಟಣದ ಕುಡಿಯುವ ನೀರಿನ ವ್ಯವಸ್ಥೆಯನ್ನು ಸುಧಾರಣೆ ಮಾಡಲು ನಗರೋತ್ಥಾನ-3ನೇ ಹಂತದ ರೂ.514.03 ಲಕ್ಷಗಳ ಅನುದಾನದಲ್ಲಿ ಜಲಶುದ್ಧೀಕರಣ ಘಟಕದಲ್ಲಿ 260 ಅಶ್ವಶಕ್ತಿಯ ಪಂಪುಗಳು (100 % Standbye) ಇಳಕಲ್ಲ ಬಳಿಯ ದರ್ಗಾ ಪಂಪಹೌಸ್ ನಲ್ಲಿ 240 ಅಶ್ವಶಕ್ತಿಯ |

| | | |
|---|---|---|
| | | ಪಂಪುಗಳು (100 % Standbye) ಹಾಗೂ ಕುಷ್ಟಗಿ ಬಳಿ ಇರುವ ಯಂತ್ರಗಾರದಲ್ಲಿ 150 ಅಶ್ವಶಕ್ತಿಯ ಪಂಪುಗಳು (100 % Standbye) ಅಳವಡಿಸಿ, ಕಾಮಗಾರಿಯನ್ನು ಪೂರ್ಣಗೊಳಿಸಿ ದಿನಾಂಕ 01-07-2019 ರಂದು ಚಾಲನೆಗೊಳಿಸಿ ಕುಷ್ಠಗಿ ಪಟ್ಟಣದ ಕುಡಿಯುವ ನೀರಿನ ಬೇಡಿಕೆಯನ್ನು ಸುಧಾರಣೆ ಮಾಡಲಾಗಿರುತ್ತದೆ. |
| ಇ) | ಈ ಯೋಜನೆಯಲ್ಲಿ ಯಾವುದಾದರೂ ತಾಂತ್ರಿಕ ಸಮಸ್ಯೆಗಳಿವೆಯೇ; ಹಾಗಿದ್ದಲ್ಲಿ, ಅವುಗಳನ್ನು ಸರಿಪಡಿಸಲು ಕೈಗೊಂಡ ಕ್ರಮಗಳೇನು; (ವಿವರ ನೀಡುವುದು) | ಈ ಯೋಜನೆಯಲ್ಲಿ ಯಾವುದೇ ತಾಂತ್ರಿಕ ಸಮಸ್ಯೆಗಳಿರುವುದಿಲ್ಲ. |
| ಈ) | ಈ ಯೋಜನೆಯನ್ನು ಕಾರ್ಯಗತಗೊಳಿಸಲು ತಗಲುವ ಒಟ್ಟಾರೆ ವೆಚ್ಚವೆಷ್ಟು; ಇಲ್ಲಿವರೆಗೆ ಖರ್ಚಾಗಿರುವ ಮೊತ್ತವೆಷ್ಟು? (ವಿವರ ನಿಡುವುದು) | ಕುಷ್ಟಗಿ ಪಟ್ಟಣದ 3 ವಲಯಗಳಲ್ಲಿ ವಲಯ-2, ಪಾರ್ಟ-1 ಹೊರತುಪಡಿಸಿ ಬಾಕಿ ಪ್ರದೇಶಗಳಲ್ಲಿ ಇನ್ನಿತರ ಅಗತ್ಯ ಕಾಮಗಾರಿಗಳೊಂದಿಗೆ 24*7 ಮಾದರಿಯ ನೀರು ಸರಬರಾಜು ವ್ಯವಸ್ಥೆಯನ್ನು ಕಲ್ಪಿಸಲು ರೂ.4380.00 ಲಕ್ಷಗಳಿಗೆ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಪ್ರಸ್ತಾವನೆಯು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವತಿಯಿಂದ ಸ್ವೀಕೃತವಾಗಿದ್ದು, ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಲವು ಹೆಚ್ಚುವರಿ ಮಾಹಿತಿಯನ್ನು ಒದಗಿಸುವಂತೆ ಮಂಡಳಿಗೆ ಸೂಚಿಸಲಾಗಿದೆ. |

ಸಂಖ್ಯೆ ನಅಇ 28 ಯುಎಂಎಸ್ 2021

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು



**ಕರ್ನಾಟಕ ಸರ್ಕಾರ**

**ಸಂಖ್ಯೆ:ನಅಇ 23 ಸಿಎಸ್‌ಎಸ್ 2021**

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:04-02-2021

10
Sd/-
5/2/21

**ಇಂದ:**

ಸರ್ಕಾರದ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ.

**ಇವರಿಗೆ:**

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ,
ವಿಧಾನ ಸೌಧ
ಬೆಂಗಳೂರು.

**ಮಾನ್ಯರೆ,**

**ವಿಷಯ:-** ವಿಧಾನಸಭೆ ಮಾನ್ಯ ಸದಸ್ಯರಾದ ಶ್ರೀ ರಘುಪತಿ ಭಟ್. ಕೆ (ಉಡುಪಿ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:1051 ಕ್ಕೆ ಉತ್ತರ ನೀಡುವ ಕುರಿತು.

******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ವಿಧಾನಸಭೆ ಮಾನ್ಯ ಸದಸ್ಯರಾದ ಶ್ರೀ ರಘುಪತಿ ಭಟ್. ಕೆ (ಉಡುಪಿ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:1051 ಕ್ಕೆ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

ಲಲಿತಾಬಾಯಿ.ಕೆ

**(ಲಲಿತಾಬಾಯಿ. ಕೆ)**
ಸರ್ಕಾರದ ಅಧೀನ ಕಾರ್ಯದರ್ಶಿ (ಯೋಮೇಕೋ),
ನಗರಾಭಿವೃದ್ಧಿ ಇಲಾಖೆ.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1051
ಸದಸ್ಯರ ಹೆಸರು : ಶ್ರೀ ರಘುಪತಿ ಭಟ್. ಕೆ (ಉಡುಪಿ)
ಉತ್ತರಿಸಬೇಕಾದ ದಿನಾಂಕ : 05-02-2021
ಉತ್ತರಿಸುವ ಸಚಿವರು : ಮಾನ್ಯ ನಗರಾಭಿವೃದ್ಧಿ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಉಡುಪಿ ನಗರಸಭೆ ವ್ಯಾಪ್ತಿಯಲ್ಲಿ ಖಾಸಗಿಯಾಗಿ ಪಿಪಿಪಿ ಮಾದರಿಯಲ್ಲಿ (PPP Model) 'ಸ್ಮಾರ್ಟ್ ಸಿಟಿ' ಯೋಜನೆಯನ್ನು ಅನುಷ್ಠಾನಗೊಳಿಸುವ ಸಂಬಂಧ ಡಿ.ಪಿ.ಆರ್ ಸಿದ್ಧಪಡಿಸಿ, ಟೆಂಡರ್ ಆಹ್ವಾನಿಸಲು ಸರ್ಕಾರದ ಅನುಮೋದನೆ ಕೋರಲು ನಗರಸಭೆಯ ಸಾಮಾನ್ಯ ಸಭೆಯಲ್ಲಿ ನಿರ್ಣಯವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಹೌದು, ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br><br>ಉಡುಪಿ ನಗರಸಭೆ ವ್ಯಾಪ್ತಿಯಲ್ಲಿ ಪಿಪಿಪಿ ಮಾದರಿಯಲ್ಲಿ (PPP Model) 'ಸ್ಮಾರ್ಟ್ ಸಿಟಿ' ಯೋಜನೆಯನ್ನು ಅನುಷ್ಠಾನಗೊಳಿಸುವ ಸಂಬಂಧ ನಗರಸಭೆಯ ಸಾಮಾನ್ಯ ಸಭೆಯ ನಿರ್ಣಯದಂತೆ ಜಿಲ್ಲಾಧಿಕಾರಿಗಳು ಉಡುಪಿ ಜಿಲ್ಲೆ ಇವರಿಂದ ಸರ್ಕಾರದ ಅನುಮೋದನೆ ಕೋರಿ ಪೌರಾಡಳಿತ ನಿರ್ದೇಶನಾಲಯಕ್ಕೆ ಸದರಿ ಯೋಜನೆಯ ಡಿ.ಪಿ.ಆರ್.ನೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿರುತ್ತದೆ.<br><br>ಪ್ರಸ್ತಾವನೆಯ ಪ್ರತಿಯನ್ನು **ಅನುಬಂಧ-1** ರಲ್ಲಿ ನೀಡಿದೆ. |
| ಆ | ಬಂದಿದ್ದಲ್ಲಿ, ಈ ಯೋಜನೆಗೆ ಸರ್ಕಾರ ಅನುಮೋದನೆ ನೀಡಲು ವಿಳಂಬವಾಗುತ್ತಿರುವುದಕ್ಕೆ ಕಾರಣವೇನು? (ವಿವರ ನೀಡುವುದು) | ಸದರಿ ಪ್ರಸ್ತಾವನೆಯು ಹಾಲಿ ಇರುವ ಯಾವುದೇ ಯೋಜನೆಗೆ ಸಂಬಂಧಿಸಿರುವುದಿಲ್ಲ. ಪ್ರಸ್ತಾವಿತ ಯೋಜನೆಯನ್ನು ಪಿಪಿಪಿ ಮಾದರಿಯಲ್ಲಿ ಕೈಗೊಳ್ಳಲು ಪ್ರಸ್ತಾವಿಸಿದ್ದು, ಮುಖ್ಯವಾಗಿ ಸ್ಮಾರ್ಟ್ ಪೋಲ್, ಡಿಜಿಟಲ್ ಜಾಹೀರಾತು, ಕಿಯೋಸ್ಕ್ ಕೇಂದ್ರಗಳು ಮುಂತಾದ ಡಿಜಿಟಲ್ ಮೂಲ ಸೌಕರ್ಯಗಳನ್ನು ಒದಗಿಸಿ, ಅದರಿಂದ ಬರುವ ಜಾಹೀರಾತು ತೆರಿಗೆ ಹಾಗೂ ಬಾಡಿಗೆ ಆದಾಯದಿಂದ ಸದರಿ ಮೂಲ ಸೌಕರ್ಯಗಳನ್ನು ಒದಗಿಸಲು ತಗುಲಿದ ವೆಚ್ಚವನ್ನು 05 ರಿಂದ 25 ವರ್ಷಗಳಲ್ಲಿ (ವಿವಿಧ ಹಂತಗಳಲ್ಲಿ) ಭರಿಸಲು ಉದ್ದೇಶಿಸಲಾಗಿರುತ್ತದೆ.<br><br>ಸದರಿ ಯೋಜನೆಗೆ ಸಂಬಂಧಿಸಿದ ಡಿ.ಪಿ.ಆರ್.ಅನ್ನು ಪರಿಶೀಲಿಸಲಾಗಿ, ಯೋಜನೆಯಿಂದ ಆಗಬಹುದಾದ ಆರ್ಥಿಕ ಪರಿಣಾಮ, ಅಂದಾಜು ವೆಚ್ಚ ಮತ್ತು ವೆಚ್ಚದ ಮೂಲ, ಟೆಂಡರ್ ಆಹ್ವಾನಿಸುವ ಪ್ರಾಧಿಕಾರ, ಟೆಂಡರ್ ಪ್ರಕ್ರಿಯೆ, ಯೋಜನೆಯ ಅನುಷ್ಠಾನ ಪ್ರಕ್ರಿಯೆ, ಸರ್ಕಾರದಿಂದ ಬೇಕಾಗಬಹುದಾದ ಒಪ್ಪಿಗೆ ಮತ್ತು ಅನುಮೋದನೆಗಳು ಮುಂತಾದ ವಿಷಯಗಳ ಬಗ್ಗೆ ಸ್ಪಷ್ಟತೆಯ ಅವಶ್ಯಕತೆಯಿರುವುದು ಕಂಡು ಬಂದಿರುತ್ತದೆ ಹಾಗೂ ಸದರಿ ಯೋಜನೆಯನ್ನು ಸಾರ್ವಜನಿಕ ಮತ್ತು |

| | | |
|---|---|---|
| | | ಖಾಸಗಿ ಸಹಭಾಗಿತ್ವದಲ್ಲಿ ಅನುಷ್ಠಾನಗೊಳಿಸಲು ಪ್ರಸ್ತಾವಿಸಿರುವುದರಿಂದ, ಜಿಲ್ಲಾಮಟ್ಟದ ಸಮಿತಿಯಿಂದ ಪರಿಶೀಲನೆಗೊಳಪಟ್ಟ ನಂತರ, ಸ್ಪಷ್ಟ ಮಾಹಿತಿ ಹಾಗೂ ಶಿಫಾರಸ್ಸಿನೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಲು ಜಿಲ್ಲಾಧಿಕಾರಿ, ಉಡುಪಿ ಜಿಲ್ಲೆರವರಿಗೆ ದಿನಾಂಕ:29.01.2021 ರಂದು ಕೋರಲಾಗಿರುತ್ತದೆ (ಪ್ರತಿಯನ್ನು **ಅನುಬಂಧ-2** ರಲ್ಲಿ ನೀಡಲಾಗಿದೆ).<br><br>ರಾಜ್ಯದಲ್ಲಿ ಹೊಸದಾಗಿ ಕೈಗೊಳ್ಳುವ ಪಿಪಿಪಿ ಯೋಜನೆಗಳನ್ನು ಅನುಮೋದಿಸಲು ಮೂಲ ಸೌಲಭ್ಯ ಅಭಿವೃದ್ಧಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಲ್ಲಿ State Level Single Window Agency (SLSWA) ಸಮಿತಿಯನ್ನು ರಚಿಸಲಾಗಿದ್ದು, ಸದರಿ ಪ್ರಸ್ತಾವನೆಯು ಸರ್ಕಾರದಲ್ಲಿ ಸ್ವೀಕೃತವಾದ ನಂತರ SLSWA ಸಮಿತಿಯ ಅನುಮೋದನೆಗೆ ಸಲ್ಲಿಸಲಾಗುವುದು. |

ಸಂಖ್ಯೆ:ನಅಇ 23 ಸಿಎಸ್‌ಎಸ್ 2021

**(ಬಿ.ಎ.ಬಸವರಾಜ)**
ನಗರಾಭಿವೃದ್ಧಿ ಸಚಿವರು

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1096
2. ಸದಸ್ಯರ ಹೆಸರು : ಶ್ರೀ ತುಕಾರಾಮ್ ಈ. (ಸಂಡೂರ್)
3. ಉತ್ತರಿಸುವ ದಿನಾಂಕ : 05.02.2021
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>(ಅ)</td><td>ಕುಡಿತಿನಿ ಪಟ್ಟಣ ಪಂಚಾಯ್ತಿ ವ್ಯಾಪ್ತಿಯಲ್ಲಿ ಕಾರ್ಖಾನೆಗಳನ್ನು ಪ್ರಾರಂಭಿಸಲು ಕೆ.ಐ.ಎ.ಡಿ.ಬಿ ವತಿಯಿಂದ ಖಾಸಗಿ ಸಂಸ್ಥೆಗಳಾದ ಆರ್ಸೆಲ್ಲಾರ್ ಮಿತ್ತಲ್, ಬ್ರಹ್ಮಿಣಿ ಸ್ಟೀಲ್ (ಉತ್ತಮ್ ಘಾಲ್ವಾ) ಇವರುಗಳಿಗೆ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td>ಬಂದಿದೆ.<br><br>ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕಿನಲ್ಲಿ ಮೆ॥ ಆರ್ಸೆಲ್ಲಾರ್ ಮಿತ್ತಲ್ ಇಂಡಿಯಾ ಲಿ. ಮತ್ತು ಮೆ॥ ಉತ್ತಮ್ ಗಾಲ್ವಾ ಫೆರೋಸ್ ಲಿ., ಕಂಪನಿಗಳಿಗೆ ಹಂಚಿಕೆ ಮಾಡಿರುವ ಜಮೀನಿನ ವಿವರಗಳು ಈ ಕೆಳಕಂಡಂತಿದೆ:-<br><br><table><tr><th>ಕಂಪನಿಯ ಹೆಸರು</th><th>ವಿಸ್ತೀರ್ಣ (ಎಕರೆಗಳಲ್ಲಿ)</th></tr><tr><td>ಮೆ: ಆರ್ಸೆಲ್ಲಾರ್ ಮಿತ್ತಲ್ ಇಂಡಿಯಾ ಲಿ.</td><td>2659.75</td></tr><tr><td>ಮೆ: ಉತ್ತಮ್ ಗಾಲ್ವಾ ಫೆರೋಸ್ ಲಿ.</td><td>4877.81</td></tr></table></td></tr>
<tr><td>(ಆ)</td><td>ಹಾಗಿದ್ದಲ್ಲಿ ಸದರಿ ಕಂಪನಿಗಳು ಯಾವಾಗ ಕಾರ್ಖಾನೆಗಳನ್ನು ಪ್ರಾರಂಭಿಸಲಿವೆ?</td><td>ಮೆ: ಆರ್ಸೆಲ್ಲಾರ್ ಮಿತ್ತಲ್ ಇಂಡಿಯಾ ಲಿ., ಇವರು ದಿನಾಂಕ: 14.08.2018ರಂದು ಗುತ್ತಿಗೆ ಕರಾರು ಪತ್ರ ನೆರವೇರಿಸಿದ್ದು. ಸದರಿ ಕಂಪನಿಯು ಯೋಜನೆ ಅನುಷ್ಠಾನಗೊಳಿಸಲು ಯಾವುದೇ ಕ್ರಮ ಕೈಗೊಂಡಿರದ ಕಾರಣ ದಿನಾಂಕ: 27.11.2020ರಂದು ತಿಳುವಳಿಕೆ ನೋಟಿಸ್ ಜಾರಿ ಮಾಡಲಾಗಿದೆ.</td></tr>
</table>

| | | |
|---|---|---|
| | | ಮೆ: ಉತ್ತಮ್ ಗಾಲ್ವಾ ಫೆರೋಸ್ ಲಿ., ಇವರು ದಿನಾಂಕ: 02.03.2017ರಂದು ಗುತ್ತಿಗೆ ಕರಾರು ಪತ್ರವನ್ನು ನೆರವೇರಿಸಿದ್ದು, ಸದರಿ ಕಂಪನಿಯು ಯೋಜನೆ ಅನುಷ್ಠಾನಗೊಳಿಸಲು ಯಾವುದೇ ಕ್ರಮ ಕೈಗೊಂಡಿರದ ಕಾರಣ ದಿನಾಂಕ: 27.11.2020ರಂದು ತಿಳುವಳಿಕೆ ನೋಟಿಸ್ ಜಾರಿ ಮಾಡಲಾಗಿದೆ. |

(ಜಗದೀಶ ಶೆಟ್ಟರ)

ಸಂಖ್ಯೆ: ಸಿಐ 33 ಐಎಪಿ (ಇ) 2021

ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1124

ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ರೇವಣ್ಣ ಹೆಚ್.ಡಿ. (ಹೊಳೇನರಸೀಪುರ)

ಉತ್ತರಿಸಬೇಕಾದ ದಿನಾಂಕ : 05.02.2021

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಆಹಾರ ಪಡಿತರ ಧಾನ್ಯಗಳನ್ನು POS ಮೂಲಕ ವಿತರಣೆ ಮಾಡುತ್ತಿರುವುದು ನಿಜವೇ; (ಸಂಪೂರ್ಣ ಮಾಹಿತಿ ನೀಡುವುದು) | ರಾಜ್ಯದಲ್ಲಿ ಒಟ್ಟು 19,972 ನ್ಯಾಯಬೆಲೆ ಅಂಗಡಿಗಳಿದ್ದು, ಅದರಲ್ಲಿ 19,870 ನ್ಯಾಯಬೆಲೆ ಅಂಗಡಿಗಳಲ್ಲಿ POS (ಪಾಯಿಂಟ್ ಆಫ್ ಸೇಲ್) ಮೂಲಕ ಪಡಿತರವನ್ನು ವಿತರಣೆ ಮಾಡಲಾಗುತ್ತಿದೆ. ಹಾಗೂ 102 ನ್ಯಾಯಬೆಲೆ ಅಂಗಡಿಗಳಲ್ಲಿ Non-POS ಮುಖಾಂತರ ಪಡಿತರವನ್ನು ವಿತರಣೆ ಮಾಡಲಾಗುತ್ತಿದ್ದು, ಸದರಿ 102 Non-POS ನ್ಯಾಯಬೆಲೆ ಅಂಗಡಿಗಳನ್ನು POS ನ್ಯಾಯಬೆಲೆ ಅಂಗಡಿಗಳನ್ನಾಗಿ ಪರಿವರ್ತಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ಆ | ಪ್ರಸ್ತುತ ಸರ್ವರ್ ಸಮಸ್ಯೆಯಿಂದಾಗಿ ರೈತರು, ಕೂಲಿ ಕಾರ್ಮಿಕರು ವಾರಗಟ್ಟಲೆ ನ್ಯಾಯಬೆಲೆ ಅಂಗಡಿ ಹತ್ತಿರ ನಿಂತು ಪಡಿತರ ಧಾನ್ಯಗಳನ್ನು ಪಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಮಾಹಿತಿ ನೀಡುವುದು) | ಬಂದಿದೆ. |
| ಇ | ಹಾಗಿದ್ದಲ್ಲಿ, ಸರ್ವರ್ ಸಮಸ್ಯೆ ಬಗೆಹರಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; ಸರ್ವರ್ ಸಮಸ್ಯೆ ಬಗೆಹರಿಯದಿದ್ದಲ್ಲಿ ಈ ಹಿಂದೆ ಇದ್ದಂತೆ ರಸೀತಿ ಹಾಕಿ ಅಥವಾ ಸಹಿ ಪಡೆದು ಪಡಿತರ ಧಾನ್ಯಗಳನ್ನು ನಿಗದಿತ ಅವಧಿಯಲ್ಲಿ ಸಮರ್ಪಕವಾಗಿ ವಿತರಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ? (ಸಂಪೂರ್ಣ ಮಾಹಿತಿ ನೀಡುವುದು) | ಆಹಾರ ಇಲಾಖೆಯು ಸರ್ವರ್‌ಗಳನ್ನು ಎನ್.ಐ.ಸಿ ಸಂಸ್ಥೆಯಲ್ಲಿ ನಿರ್ವಹಿಸಲಾಗುತ್ತಿದ್ದು, ಆಹಾರ ಇಲಾಖೆಯ ಸರ್ವರ್ ಹಾಗೂ ಪಡಿತರ ಚೀಟಿಯ ದತ್ತಾಂಶವನ್ನು ರಾಜ್ಯ ದತ್ತಾಂಶ (KSDC) ಕೇಂದ್ರಕ್ಕೆ ವರ್ಗಾಯಿಸಲಾಗುತ್ತಿದೆ.<br>ಆಹಾರ ಇಲಾಖೆಯು ಹೊಂದಿರುವ ಸರ್ವರ್‌ಗಳ ಸಂಖ್ಯೆ ಹಾಗೂ ಸರ್ವರ್‌ಗಳ ಕ್ಷಮತೆಯನ್ನು ಹೆಚ್ಚಿಸಲು ಕ್ರಮವಹಿಸಲಾಗಿದೆ. ರಾಷ್ಟ್ರೀಯ ಆಹಾರ ಭದ್ರತೆ ಕಾಯ್ದೆಯನ್ವಯ ಪಡಿತರ ಚೀಟಿಯ ಫಲಾನುಭವಿಗಳಿಗೆ ಬಯೋಮೆಟ್ರಿಕ್ ಮುಖಾಂತರ ಆಹಾರಧಾನ್ಯ ವಿತರಿಸುವುದು ಕಡ್ಡಾಯವಾಗಿರುತ್ತದೆ. |

ಆನಾಸ 47 ಡಿಆರ್ಎ 2021 (ಇ-ಆಫೀಸ್)

(ಉಮೇಶ್ ವಿ. ಕತ್ತಿ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1166

ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ಕುಮಾರಸ್ವಾಮಿ ಹೆಚ್.ಕೆ. (ಸಕಲೇಶಪುರ)

ಉತ್ತರಿಸಬೇಕಾದ ದಿನಾಂಕ : 05.02.2021

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ನ್ಯಾಯಬೆಲೆ ಅಂಗಡಿಗಳಲ್ಲಿ ಪಡಿತರ ಚೀಟಿಗಳ ಸಂಖ್ಯೆ ಆಧಾರದ ಮೇಲೆ ಪಡಿತರ ವಿತರಣೆ ಮಾಡುತ್ತಿರುವುದು ನಿಜವೇ; | ಹೌದು, |
| ಆ | ನಿರ್ಧಿಷ್ಟ ಸಂಖ್ಯೆ ಪಡಿತರ ಚೀಟಿಗಳಿಂದ ಮಲೆನಾಡು ಭಾಗದಲ್ಲಿ ದೂರದ ಹಳ್ಳಿಗಳಿಂದ ಜನರು ಬಂದು ನ್ಯಾಯಬೆಲೆ ಅಂಗಡಿಗಳಲ್ಲಿ ಪಡಿತರ ಪಡೆಯುವುದಕ್ಕೆ ಕಷ್ಟ ಉಂಟಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು, |
| ಇ | ಬಂದಿದ್ದಲ್ಲಿ, ಒಂದು ನ್ಯಾಯಬೆಲೆ ಅಂಗಡಿಗೆ ಪಡಿತರ ಚೀಟಿಗಳ ನಿರ್ಧಿಷ್ಟ ಸಂಖ್ಯೆಯನ್ನು 250ಕ್ಕೆ ಇಳಿಸಲು ಸರ್ಕಾರ ಸೂಕ್ತ ಕ್ರಮಗಳನ್ನು ಕೈಗೊಳ್ಳುವುದೇ; | ಕರ್ನಾಟಕ ಅಗತ್ಯ ವಸ್ತುಗಳ ಸಾರ್ವಜನಿಕ ವಿತರಣಾ ಪದ್ಧತಿ ನಿಯಂತ್ರಣ ಆದೇಶ 2016 ರ ಕಲಂ 11 ರಂತೆ ಪಟ್ಟಣ ಪ್ರದೇಶದಲ್ಲಿ ಕನಿಷ್ಠ 800 ಪಡಿತರ ಚೀಟಿಗಳನ್ನು ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ಕನಿಷ್ಠ 500 ಪಡಿತರ ಚೀಟಿಗಳನ್ನು ನಿಯೋಜಿಸಬೇಕಾಗಿರುತ್ತದೆ. ಆದರೆ ವಿಶೇಷ ಪ್ರಕರಣಗಳಲ್ಲಿ ತಾಂಡಗಳು, ಹಾಂಡಿಗಳು, ಗೊಲ್ಲರಹಟ್ಟಿಗಳಂತಹ ಪ್ರದೇಶಗಳಲ್ಲಿ 100 ಪಡಿತರ ಚೀಟಿಗಳಿಗೂ ಹೊಸ ನ್ಯಾಯ ಬೆಲೆ ಅಂಗಡಿಯನ್ನು ತೆರೆಯಲು ವಿನಾಯಿತಿ ನೀಡಲಾಗಿರುತ್ತದೆ. |
| ಈ | ಹಾಗಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಕ್ರಮ ವಹಿಸಲಾಗುವುದು (ವಿವರ ನೀಡುವುದು)? | ಜಿಲ್ಲಾ ಮಟ್ಟದಲ್ಲಿ ಸಕ್ಷಮ ಪ್ರಾಧಿಕಾರಿಗಳಾದ ಜಂಟಿ/ ಉಪ ನಿರ್ದೇಶಕರುಗಳು ಅಗತ್ಯಕ್ಕೆ ತಕ್ಕಂತೆ ನ್ಯಾಯಬೆಲೆ ಅಂಗಡಿಯನ್ನು ಪ್ರಾರಂಭಿಸುವ ಬಗ್ಗೆ ಕ್ರಮವಹಿಸಲು ಅವಕಾಶವಿರುತ್ತದೆ. ಯಾವುದೇ ಕಾಲಮಿತಿ ನಿಗಧಿಪಡಿಸಿರುವುದಿಲ್ಲ. |

ಆನಾಸ 50 ಡಿಆರ್‌ಎ 2021 (ಇ-ಆಫೀಸ್)

(ಉಮೇಶ್ ವಿ. ಕತ್ತಿ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1030

ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ಬಾಲಕೃಷ್ಣ ಸಿ.ಎನ್.(ಶ್ರವಣಬೆಳಗೊಳ)

ಉತ್ತರಿಸಬೇಕಾದ ದಿನಾಂಕ : 05.02.2021

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಹೊಸ ಪಡಿತರ ಚೀಟಿಗೆ ಅರ್ಜಿ ಸಲ್ಲಿಸಲು ಅವಕಾಶವಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೋವಿಡ್-19 ಕೊರೊನಾ ವೈರಾಣು ಪ್ರಸರಣವನ್ನು ತಡೆಗಟ್ಟುವ ಹಿನ್ನೆಲೆಯಲ್ಲಿ ಆದ್ಯತಾ (ಬಿ.ಪಿ.ಎಲ್) ಪಡಿತರ ಚೀಟಿಯ ಅರ್ಜಿ ಸ್ವೀಕಾರವನ್ನು ತಾತ್ಕಾಲಿಕವಾಗಿ ತಡೆಹಿಡಿಯಲಾಗಿದೆ. ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಿ ಆದ್ಯತೇತರ(ಎ.ಪಿ.ಎಲ್) ಪಡಿತರ ಚೀಟಿಯನ್ನು ಪಡೆದುಕೊಳ್ಳಲು ಅವಕಾಶ ಕಲ್ಪಿಸಲಾಗಿರುತ್ತದೆ. |
| ಆ | ಇಲಾಖೆಯಲ್ಲಿ ಕಂಪ್ಯೂಟರ್ ಆಪರೇಟರ್‌ಗಳು ಇಲ್ಲದಿರುವುದು ಹಾಗೂ ಅಂತರ್ಜಾಲ ಅಡತಡೆಯಿಂದ ಬಯೋಮೆಟ್ರಿಕ್ ವ್ಯವಸ್ಥೆ ಸೂಕ್ತ ರೀತಿಯಲ್ಲಿ ಕಾರ್ಯನಿರ್ವಹಿಸದಿರುವುದರಿಂದ ಕಛೇರಿ ಕೆಲಸಗಳು ಮಂದಗತಿಯಲ್ಲಿ ಸಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ಇಲಾಖೆಯ ಅಗತ್ಯಕ್ಕೆ ತಕ್ಕಂತೆ ಜಿಲ್ಲಾ ಮತ್ತು ತಾಲ್ಲೂಕು ಕಛೇರಿಗಳಲ್ಲಿ ಕಂಪ್ಯೂಟರ್ ಆಪರೇಟರ್ ಮತ್ತು ಸಹಾಯಕ ಪ್ರೋಗ್ರಾಮರ್‌ಗಳನ್ನು ನೇಮಿಸಲಾಗಿದೆ. ಪಡಿತರ ವಿತರಿಸುವಾಗ ಸರ್ವರ್ ಹಾಗೂ ಇಂಟರ್‌ನೆಟ್ ವ್ಯವಸ್ಥೆಯಲ್ಲಿ ನಿಧಾನ ಗತಿಯ ನಿರ್ವಹಣೆಯಿಂದಾಗಿ ಕೆಲವು ನ್ಯಾಯಬೆಲೆ ಅಂಗಡಿಗಳಲ್ಲಿ ವಿತರಣೆ ವಿಳಂಬವಾಗಿರುತ್ತದೆ. |
| ಇ | ಹಾಗಿದ್ದಲ್ಲಿ, ಈ ಸಮಸ್ಯೆ ಬಗೆಹರಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಆಹಾರ ಇಲಾಖೆಯು ಸರ್ವರ್‌ಗಳನ್ನು ಎನ್.ಐ.ಸಿ ಸಂಸ್ಥೆಯಲ್ಲಿ ನಿರ್ವಹಿಸಲಾಗುತ್ತಿದ್ದು, ಆಹಾರ ಇಲಾಖೆಯ ಸರ್ವರ್ ಹಾಗೂ ಪಡಿತರ ಚೀಟಿಯ ದತ್ತಾಂಶವನ್ನು ರಾಜ್ಯ ದತ್ತಾಂಶ (KSDC) ಕೇಂದ್ರಕ್ಕೆ ವರ್ಗಾಯಿಸಲಾಗುತ್ತಿದೆ.<br>ಆಹಾರ ಇಲಾಖೆಯು ಹೊಂದಿರುವ ಸರ್ವರ್‌ಗಳ ಸಂಖ್ಯೆ ಹಾಗೂ ಸರ್ವರ್‌ಗಳ ಕ್ಷಮತೆಯನ್ನು ಹೆಚ್ಚಿಸಲು ಕ್ರಮವಹಿಸಲಾಗಿದೆ. |

ಆನಾಸ 41 ಡಿಆರ್‌ಎ 2021 (ಇ-ಆಫೀಸ್)

(ಉಮೇಶ್.ವಿ.ಕತ್ತಿ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1183

ಸದಸ್ಯರ ಹೆಸರು : ಶ್ರೀ ಹ್ಯಾರಿಸ್ ಎನ್.ಎ. (ಶಾಂತಿನಗರ)

ಉತ್ತರಿಸುವವರು : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು

ಉತ್ತರಿಸುವ ದಿನಾಂಕ : 05.02.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಮಧ್ಯಮ ಮತ್ತು ಬೃಹತ್ ಉದ್ಯಮಗಳನ್ನು ಸ್ಥಾಪಿಸಲು ಪ್ರೋತ್ಸಾಹಿಸಲು ಸರ್ಕಾರದ ಯೋಜನೆಗಳು ಯಾವುವು; | ರಾಜ್ಯದಲ್ಲಿ ಮಧ್ಯಮ ಮತ್ತು ಬೃಹತ್ ಕೈಗಾರಿಕೆಗಳನ್ನು ಪ್ರೋತ್ಸಾಹಿಸಲು ಹೊಸ ಕೈಗಾರಿಕಾ ನೀತಿ 2020-25ನ್ನು ಜಾರಿಗೆ ತಂದಿದೆ. ಸದರಿ ನೀತಿಯಡಿ ಕೈಗಾರಿಕಾ ಸ್ಥಾಪನೆಗೆ ಈ ಕೆಳಕಂಡ ಪ್ರೋತ್ಸಾಹ ನೀಡಲು ಅವಕಾಶ ಕಲ್ಪಿಸಿದೆ.<br>• ಮುದ್ರಾಂಕ ಶುಲ್ಕ ವಿಯಾಯಿತಿ/ ನೋಂದಣಿ ಶುಲ್ಕ ರಿಯಾಯಿತಿ.<br>• ಭೂಪರಿವರ್ತನ ಶುಲ್ಕ ಮರುಪಾವತಿ, ಇಟಿಪಿ ಸಹಾಯಧನ.<br>• ವಹಿವಾಟು ಆಧಾರಿತ ಬಂಡವಾಳ ಹೂಡಿಕೆ ಸಹಾಯಧನ.<br>• ಬೃಹತ್ ಕೈಗಾರಿಕೆಗಳಿಗೆ ಆಂಕರ್ ಘಟಕ ಸಹಾಯಧನ.<br>• ಮಧ್ಯಮ ಕೈಗಾರಿಕೆಗಳಿಗೆ ಹೊಸ ಅನ್ವೇಷಣೆ ಮತ್ತು ತಾಂತ್ರಿಕತೆ ಅಳವಡಿಕೆಗೆ ಆರ್ಥಿಕ ಸಹಾಯ.<br>• ಖಾಸಗಿ ಕೈಗಾರಿಕಾ ಪಾರ್ಕ್ ಅಭಿವೃದ್ಧಿಗೆ ಬೆಂಬಲ.<br>• ಕೈಗಾರಿಕೆಗಳನ್ನು ಪ್ರಾರಂಭಿಸಲು ಬೇಕಾಗಿರುವ ಭೂಮಿ ಖರೀದಿ ಪ್ರಕ್ರಿಯೆ ಸರಳೀಕರಣಗೊಳಿಸಲಾಗಿದೆ.<br>• ಕೈಗಾರಿಕೆಗಳನ್ನು ಪ್ರಾರಂಭಿಸಲು ಬೇಕಾಗಿರುವ ಎನ್.ಓ.ಸಿ ಗಳನ್ನು ಪಡೆಯಲು 03 ವರ್ಷಗಳ ವರೆಗೆ ಸಮಯವನ್ನು ವಿಸ್ತರಿಸಿ ಕರ್ನಾಟಕ ಕೈಗಾರಿಕೆಗಳ (ಸೌಲಭ್ಯ) ಅಧಿನಿಯಮ 2002ಕ್ಕೆ ತಿದ್ದುಪಡಿ ತರಲಾಗಿದೆ.<br>• ಕಾರ್ಮಿಕರಿಗೆ ಕಾರ್ಮಿಕ ಕಾನೂನುಗಳನ್ನು ಸರಳೀಕರಣ ಗೊಳಿಸಲಾಗಿದೆ.<br>• ಕೈಗಾರಿಕೆಗಳನ್ನು ಶೀಘ್ರವಾಗಿ ಅಡೆತಡೆಗಳಿಲ್ಲದೆ ಪ್ರಾರಂಬಿಸಲು ಈಸ್ ಆಫ್ ಡೂಯಿಂಗ್ ಬ್ಯುಸಿನೆಸ್ ಜಾರಿಗೊಳಿಸಲಾಗಿದೆ. |

| | | |
|---|---|---|
| ಆ | ಕಳೆದ ಮೂರು ವರ್ಷಗಳಲ್ಲಿ ಎಷ್ಟು ಬೃಹತ್ ಮತ್ತು ಮಧ್ಯಮ ಕೈಗಾರಿಕೆಗಳು ಸ್ಥಾಪಿಸಲ್ಪಟ್ಟಿವೆ; ಅವುಗಳು ಹೂಡಿದ ಬಂಡವಾಳದ ಪ್ರಮಾಣವೆಷ್ಟು; ಅವುಗಳಿಗೆ ಒದಗಿಸಿಕೊಟ್ಟಿರುವ ಜಮೀನು ಹಾಗೂ ಮತ್ತಿತರ ಸೌಲಭ್ಯಗಳೇನು; (ವಿವರ ನೀಡುವುದು) | ಕಳೆದ ಮೂರು ವರ್ಷಗಳಲ್ಲಿ ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ನೀಡುವ ಸಮಿತಿ ಹಾಗೂ ರಾಜ್ಯ ಮಟ್ಟದ ಏಕಗಾವಕ್ಷಿ ಒಪ್ಪಿಗೆ ನೀಡುವ ಸಮಿತಿಗಳಿಂದ **699** ಯೋಜನೆಗಳಿಗೆ ಅನುಮೋದನೆ ನೀಡಲಾಗಿದ್ದು. ಅವುಗಳಲ್ಲಿ **76** ಯೋಜನೆಗಳು ಕಾರ್ಯಾರಂಭ ಮಾಡಿದ್ದು, ರೂ. **26,905** ಕೋಟಿ ಬಂಡವಾಳ ಹೂಡಿಕೆಯಾಗಿದ್ದು, **86,922** ಜನರಿಗೆ ಉದ್ಯೋಗ ಒದಗಿರುತ್ತದೆ. ಸದರಿ ಕೈಗಾರಿಕೆಗಳಿಗೆ ನೀಡಿರುವ ಜಮೀನು ಮತ್ತು ಸೌಲಭ್ಯಗಳ ವಿವರಗಳನ್ನು 'ಅನುಬಂಧ-1' ರಲ್ಲಿ ಒದಗಿಸಿದೆ. |
| ಇ | ವಿವಿಧ ಜಿಲ್ಲಾ ಪ್ರದೇಶಗಳಲ್ಲಿ ಕೈಗಾರಿಕೆಗಳ ಸ್ಥಾಪನೆಗೆ ಅವಕಾಶ ಮಾಡಿಕೊಡಲು ಸರ್ಕಾರದ ಮುಂದಿರುವ ಪ್ರಸ್ತಾವನೆಗಳೆಷ್ಟು; ಅವುಗಳು ಯಾವ ಹಂತದಲ್ಲಿದೆ? (ವಿವರ ನೀಡುವುದು) | ವಿವಿಧ ಜಿಲ್ಲೆಗಳಲ್ಲಿ ಒಟ್ಟು **602** ಯೋಜನೆಗಳು ವಿವಿಧ ಅನುಷ್ಠಾನ ಹಂತದಲ್ಲಿದ್ದು, ಘಟಕವಾರು ವಿವರಗಳನ್ನು 'ಅನುಬಂಧ-2' ರಲ್ಲಿ ಒದಗಿಸಿದೆ. |

ಸಿಐ 62 ಎಸ್‌ಪಿಐ 2021

(ಜಗದೀಶ್ ಶೆಟ್ಟರ)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1041
2. ಸದಸ್ಯರ ಹೆಸರು : ಶ್ರೀ ದೇವೇಗೌಡ ಜಿ.ಟಿ. (ಚಾಮುಂಡೇಶ್ವರಿ)
3. ಉತ್ತರಿಸುವ ದಿನಾಂಕ : 05.02.2021
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಗೆ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಮೈಸೂರು ನಗರದ ವ್ಯಾಪ್ತಿಯಲ್ಲಿರುವ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳ (ಕೆಐಎಡಿಬಿ) ಗಳ ಸಂಖ್ಯೆ ಎಷ್ಟು ಮತ್ತು ಅವು ಯಾವುವು: (ಸಂಪೂರ್ಣ ಮಾಹಿತಿ ನೀಡುವುದು). | ಮೈಸೂರು ನಗರ ವ್ಯಾಪ್ತಿಯಲ್ಲಿ ಒಟ್ಟು 7 ಕೈಗಾರಿಕಾ ಪ್ರದೇಶಗಳಿದ್ದು, ಅವುಗಳ ವಿವರ ಈ ಕೆಳಕಂಡಂತಿದೆ :-<br>1. ಹೆಬ್ಬಾಳು ಕೈಗಾರಿಕಾ ಪ್ರದೇಶ<br>2. ಕೂರ್ಗಳ್ಳಿ ಕೈಗಾರಿಕಾ ಪ್ರದೇಶ<br>3. ಬೆಳಗೊಳ ಕೈಗಾರಿಕಾ ಪ್ರದೇಶ<br>4. ಹೂಟಗಳ್ಳಿ ಕೈಗಾರಿಕಾ ಪ್ರದೇಶ<br>5. ಬೆಳವಾಡಿ ಕೈಗಾರಿಕಾ ಪ್ರದೇಶ<br>6. ಮೇಟಗಳ್ಳಿ ಕೈಗಾರಿಕಾ ಪ್ರದೇಶ<br>7. ಹೆಬ್ಬಾಳು ಹೌಸಿಂಗ್ ಕೈಗಾರಿಕಾ ಪ್ರದೇಶ |
| (ಆ) | ಸದರಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಗಳಿಗೆ ಸೆಪ್ಟಿಕ್ ಟ್ಯಾಂಕ್‌ಗಳನ್ನು ಒದಗಿಸಲಾಗಿದೆಯೇ: | ಕೆ.ಐ.ಎ.ಡಿ.ಬಿ.ಯು ಕೈಗಾರಿಕಾ ಪ್ರದೇಶಗಳಲ್ಲಿ ಸೆಪ್ಟಿಕ್ ಟ್ಯಾಂಕ್‌ಗಳನ್ನು ಒದಗಿಸಿರುವುದಿಲ್ಲ. ಆದರೆ ಹೆಬ್ಬಾಳು ಹೌಸಿಂಗ್ ಕೈಗಾರಿಕಾ ಪ್ರದೇಶದಲ್ಲಿ ಶೇಕಡಾ 90 ಭಾಗದಷ್ಟು ಕೊಳಚೆ ನೀರನ್ನು ಮೈಸೂರು ಮಹಾನಗರ ಪಾಲಿಕೆಯ ಯು.ಜಿ.ಡಿ ಲೈನ್‌ಗೆ ಲಿಂಕ್ ಮಾಡಲಾಗಿದೆ. |

| | | |
|---|---|---|
| (ಇ) | ಹಾಗಿಲ್ಲದಿದ್ದಲ್ಲಿ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಿಂದ ಹೊರಬರುವ ಕೊಳಚೆ ನೀರನ್ನು ಎಲ್ಲಿಗೆ ಸೇರಿಸಲಾಗುತ್ತಿದೆ; ಹೀಗೆ ಹೊರಬರುವ ಕೊಳಚೆ ನೀರನ್ನು ಕಾವೇರಿ ನದಿ ಸೇರುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಕೆ.ಐ.ಎ.ಡಿ.ಬಿ.ಯು ಮೈಸೂರು ನಗರ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಕೈಗಾರಿಕಾ ಘಟಕಗಳು ಕೊಳಚೆ/ತ್ಯಾಜ್ಯ ನೀರಿನ ಸಂಸ್ಕರಣಾ ಘಟಕಗಳಾದ ಎಸ್‌ಟಿಪಿ/ಇಟಿಪಿ ಹಾಗೂ ಸೆಪ್ಟಿಕ್ ಟ್ಯಾಂಕ್.ಗಳನ್ನು ಅಳವಡಿಸಿಕೊಂಡಿರುತ್ತಾರೆ. ಸಂಸ್ಕರಿಸಿದ ನೀರನ್ನು ಮರುಬಳಸಿ ತೋಟಗಾರಿಕೆ ಹಾಗೂ ಇತರೆ ಉಪಯೋಗಕ್ಕೆ ಬಳಸುತ್ತಾರೆ ಹಾಗೂ ಕೈಗಾರಿಕಾ ಪ್ರದೇಶದ ಕಾರ್ಖಾನೆಗಳಿಂದ ನೇರವಾಗಿ ಯಾವುದೇ ಕೊಳಚೆ/ತ್ಯಾಜ್ಯವನ್ನು ಸಂಸ್ಕರಿಸದೆ ಹೊರಗೆ ಬಿಟ್ಟಿರುವುದಿಲ್ಲ. |
| (ಈ) | ಬಂದಿದ್ದಲ್ಲಿ, ಕೊಳಚೆ ನೀರನ್ನು ಕಾವೇರಿ ನದಿಗೆ ಸೇರುವುದನ್ನು ತಡೆಗಟ್ಟಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಕೈಗಾರಿಕಾ ಪ್ರದೇಶದ ಕಾರ್ಖಾನೆಗಳಿಂದ ನೇರವಾಗಿ ಯಾವುದೇ ಕೊಳಚೆ/ತ್ಯಾಜ್ಯವನ್ನು ಸಂಸ್ಕರಿಸದೆ ಹೊರಗೆ ಬಿಟ್ಟಿರುವುದಿಲ್ಲ. ಆದಾಗ್ಯೂ ಯಾವುದೇ ಕೈಗಾರಿಕೆಗಳು ಕೊಳಚೆ/ತ್ಯಾಜ್ಯವನ್ನು ಸಂಸ್ಕರಿಸದೆ ಹೊರಬಿಟ್ಟಲ್ಲಿ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯವರು ಸಂಬಂಧಿಸಿದ ಕೈಗಾರಿಕೆಗಳ ಮೇಲೆ ಸೂಕ್ತ ಕ್ರಮ ತೆಗೆದುಕೊಳ್ಳುತ್ತಾರೆ. |

(ಜಗದೀಶ ಶೆಟ್ಟರ)

ಸಂಖ್ಯೆ: ಸಿಐ 30 ಐಎಪಿ (ಇ) 2021

ಬೃಹತ್ ಮತ್ತು ಮಧ್ಯಮ ಕೈಗಾರಿಗೆ ಸಚಿವರು

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1038
2. ಸದಸ್ಯರ ಹೆಸರು : ಡಾ|| ಶ್ರೀನಿವಾಸಮೂರ್ತಿ ಕೆ. (ನೆಲಮಂಗಲ)
3. ಉತ್ತರಿಸುವ ದಿನಾಂಕ : 05.02.2021
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ನೆಲಮಂಗಲ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿರುವ ಕೈಗಾರಿಕಾ ಪ್ರದೇಶಗಳ ಸಂಖ್ಯೆ ಎಷ್ಟು; ಯಾವ ಯಾವ ಪ್ರದೇಶಗಳನ್ನು ಕೈಗಾರಿಕಾ ಪ್ರದೇಶ ಎಂದು ಗುರುತಿಸಲಾಗಿದೆ; (ವಿವರ ನೀಡುವುದು) | ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕಿನಲ್ಲಿ ಈ ಕೆಳಕಂಡ ಕೈಗಾರಿಕಾ ಪ್ರದೇಶಗಳನ್ನು ಅಭಿವೃದ್ಧಿಪಡಿಸಿರುತ್ತದೆ. |

| ಕ್ರ.ಸಂ. | ಕೈಗಾರಿಕಾ ಪ್ರದೇಶ | ವಿಸ್ತೀರ್ಣ (ಎಕರೆಗಳಲ್ಲಿ) |
|---|---|---|
| 1. | ದಾಬಸ್‌ಪೇಟೆ 1ನೇ ಹಂತ | 276.55 |
| 2. | ದಾಬಸ್‌ಪೇಟೆ 2ನೇ ಹಂತ | 66.00 |
| 3. | ಸೋಂಪುರ 1 & 2ನೇ ಹಂತ | 1321.00 |
| 4. | ದಾಬಸ್‌ಪೇಟೆ 4ನೇ ಹಂತ | 844.23 |
| 5. | ದಾಬಸ್‌ಪೇಟೆ 5ನೇ ಹಂತ | 839.90 |

| | | |
|---|---|---|
| (ಆ) | ಈ ಕ್ಷೇತ್ರದ ಕೈಗಾರಿಕಾ ಪ್ರದೇಶಗಳಲ್ಲಿ ಎಷ್ಟು ಕಂಪನಿ, ಕೈಗಾರಿಕಾ ಸಂಸ್ಥೆಗಳು ಸ್ಥಾಪನೆ ಗೊಂಡಿವೆ; (ಸಂಸ್ಥೆವಾರು, ಕಂಪನಿವಾರು ಮಾಹಿತಿ ಒದಗಿಸುವುದು) | ಸದರಿ ಕೈಗಾರಿಕಾ ಪ್ರದೇಶಗಳಲ್ಲಿ 1484 ಎಕರೆ ಜಮೀನನ್ನು ಒಟ್ಟು 891 ಉದ್ದಿಮೆದಾರರುಗಳಿಗೆ ಹಂಚಿಕೆ ಮಾಡಲಾಗಿದೆ.<br>ವಿವರಗಳನ್ನು ಅನುಬಂಧ-1 ರಲ್ಲಿ ಒದಗಿಸಿದೆ. |
| (ಇ) | ಪ್ರತಿ ಕಂಪನಿ ಸ್ಥಾಪನೆಗೆ ಎಷ್ಟು ನಿವೇಶನ ನೀಡಲಾಗಿದೆ; (ಕಂಪನಿವಾರು, ಸರ್ವೆ ನಂಬರ್‌ವಾರು, ಪ್ರದೇಶವಾರು ವಿವರ ಒದಗಿಸುವುದು) | |
| (ಈ) | ನೆಲಮಂಗಲ ಕ್ಷೇತ್ರದಲ್ಲಿ ಕೈಗಾರಿಕಾ ಅಭಿವೃದ್ಧಿಗೆ KIADBಯಿಂದ ಹಮ್ಮಿಕೊಂಡಿರುವ ಕಾರ್ಯಕ್ರಮಗಳಾವುವು; | ಓಬಳಾಪುರ ಕೈಗಾರಿಕಾ ಪ್ರದೇಶಕ್ಕಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು, ತ್ಯಾಮಗೊಂಡ್ಲು ಹೋಬಳಿ, ಓಬಳಾಪುರ, ದೊಡ್ಡಚನ್ನೋಹಳ್ಳಿ, ಹಾದಿಹೊಸಹಳ್ಳಿ, ಮಾವಿನಕೊಮ್ಮನಹಳ್ಳಿ, ಕಾರೇಹಳ್ಳಿ, ದೊಡ್ಡಬೆಲೆ ಮತ್ತು ಮದ್ದೇನಹಳ್ಳಿ ಗ್ರಾಮಗಳಲ್ಲಿನ ಒಟ್ಟು 858-17 ಎಕರೆ ಜಮೀನನ್ನು ಭೂಸ್ವಾಧೀನಪಡಿಸಲು ದಿನಾಂಕ 10.12.2020ರಂದು ಪ್ರಾಥಮಿಕ ಅಧಿಸೂಚನೆ |

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1177

ಮಾನ್ಯ ಸದಸ್ಯರ ಹೆಸರು : ಶ್ರೀ ರಾಜೇಶ್ ನಾಯಕ್ ಯು. (ಬಂಟ್ವಾಳ)

ಉತ್ತರಿಸಬೇಕಾದ ದಿನಾಂಕ : 05.02.2021

ಉತ್ತರಿಸುವ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ವಿವರ |
|---|---|---|
| ಅ) | ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಸ್ತುತ ಎಷ್ಟು ಆಹಾರ ಸುರಕ್ಷಾ ಅಧಿಕಾರಿಗಳು ಕರ್ತವ್ಯ ನಿರ್ವಹಿಸುತ್ತಿದ್ದಾರೆ; ಇವರ ಕಾರ್ಯ ವ್ಯಾಪ್ತಿ ಮತ್ತು ಸರ್ಕಾರದಿಂದ ವಹಿಸಲಾದ ಕರ್ತವ್ಯಗಳೇನು; (ಆದೇಶದ ಪ್ರತಿ ನೀಡುವುದು) | ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಸ್ತುತ 5 ಜನ ಆಹಾರ ಸುರಕ್ಷತಾಧಿಕಾರಿಗಳು ಕರ್ತವ್ಯ ನಿರ್ವಹಿಸುತ್ತಿದ್ದು, ಒಬ್ಬರು ಮಂಗಳೂರು ತಾಲ್ಲೂಕು ಹಾಗೂ ಮಹಾನಗರ ಪಾಲಿಕೆಯಲ್ಲಿ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತಿದ್ದು, ಉಳಿದ ನಾಲ್ಕು ತಾಲ್ಲೂಕು ಆರೋಗ್ಯಾಧಿಕಾರಿಗಳು ಆಹಾರ ಸುರಕ್ಷತಾಧಿಕಾರಿಗಳಾಗಿ ಹೆಚ್ಚುವರಿ ಪ್ರಭಾರದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ.<br>ದಕ್ಷಿಣ ಕನ್ನಡ ಜಿಲ್ಲೆಯ ಆಹಾರ ಸುರಕ್ಷತಾಧಿಕಾರಿಗಳು ಕಾರ್ಯನಿರ್ವಹಿಸುತ್ತಿರುವ ಕಾರ್ಯವ್ಯಾಪ್ತಿ ವಿವರ ಮತ್ತು ಎಫ್.ಎಸ್.ಎಸ್.ಎ. ಕಾಯ್ದೆಯನ್ವಯ ಆಹಾರ ಸುರಕ್ಷತಾಧಿಕಾರಿಗಳ ಕರ್ತವ್ಯ ಮತ್ತು ಜವಾಬ್ದಾರಿಗಳ ವಿವರಗಳನ್ನು **ಅನುಬಂಧ-1ರಲ್ಲಿ** ಲಗತ್ತಿಸಿದೆ. |
| ಆ) | ಕಳೆದ 3 ವರ್ಷಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಆಹಾರ ಸುರಕ್ಷತೆಗೆ ಸಂಬಂಧಿಸಿದಂತೆ ದಾಖಲಿಸಲಾದ ದೂರುಗಳೆಷ್ಟು; ಪ್ರಕರಣಗಳೆಷ್ಟು;(ವಿವರ ನೀಡುವುದು) | ಕಳೆದ 3 ವರ್ಷಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ದಾಖಲಾದ ಒಟ್ಟು ದೂರುಗಳ ಸಂಖ್ಯೆ:13. ಸದರಿ ದೂರುಗಳ ಸಂಬಂಧ ಕೈಗೊಂಡ ಕ್ರಮದ ವರದಿಯನ್ನು **(ಅನುಬಂಧ-2ರಲ್ಲಿ** ಲಗತ್ತಿಸಿದೆ). |
| ಇ) | ಕಲಬೆರೆಕೆ ಆಹಾರ ಸೇವನೆಯಿಂದ ಜನರು ಅನಾರೋಗ್ಯಕ್ಕೆ ತುತ್ತಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಈ) | ಹಾಗಿದ್ದಲ್ಲಿ, ರಾಜ್ಯದಲ್ಲಿ ಆಹಾರ ಕಲಬೆರೆಕೆಯನ್ನು ತಡೆಗಟ್ಟುವ ನಿಟ್ಟಿನಲ್ಲಿ ಸರ್ಕಾರ ಕೈಗೊಂಡ ಕ್ರಮಗಳೇನು? (ಮಾಹಿತಿ ಒದಗಿಸುವುದು) | ರಾಜ್ಯದಲ್ಲಿ 2020-21ನೇ ಸಾಲಿನಲ್ಲಿ 2727 ಕಾನೂನಾತ್ಮಕ ಆಹಾರ ಮಾದರಿಗಳನ್ನು ಸಂಗ್ರಹಿಸಿ, ರಾಜ್ಯ ಆಹಾರ ಪ್ರಯೋಗಾಲಯಕ್ಕೆ ವಿಶ್ಲೇಷಣೆಗೊಳಪಡಿಸಿದಾಗ 43 ಅಸುರಕ್ಷಿತ, 111 ಮಿಸ್‌ಬ್ರ್ಯಾಂಡ್ ಹಾಗೂ 65 ಸಬ್ ಸ್ಟ್ಯಾಂಡರ್ಡ್ ಎಂದು ವರದಿ ಬಂದಿದ್ದು, ಎಫ್.ಎಸ್.ಎಸ್.ಎ. ಕಾಯ್ದೆಯಂತೆ ಕ್ರಮ ವಹಿಸಲಾಗಿದೆ. **(ಅನುಬಂಧ-3ರಲ್ಲಿ** ಲಗತ್ತಿಸಿದೆ)<br>ಆಹಾರ ಕಲಬೆರೆಕೆಯ ಕುರಿತು ಸಾರ್ವಜನಿಕರಿಗೆ ಜಾಗೃತಿ ಕಾರ್ಯಕ್ರಮಗಳ ಮೂಲಕ ಅರಿವು ಮೂಡಿಸಲಾಗುತ್ತಿದೆ. |

**ಆಕುಕ 27 ಎಸ್‌ಬಿವಿ 2021.**

(ಡಾ॥ ಕೆ. ಸುಧಾಕರ್)

ಆರೋಗ್ಯ ಮತ್ತು ಕುಟುಂಬ ಕಲ್ಯಾಣ

ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1198
2. ಸದಸ್ಯರ ಹೆಸರು : ಡಾ|| ಶ್ರೀನಿವಾಸಮೂರ್ತಿ ಕೆ. (ನೆಲಮಂಗಲ)
3. ಉತ್ತರಿಸುವ ದಿನಾಂಕ : 05.02.2021
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>(ಅ)</td><td>ನೆಲಮಂಗಲ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯ ಸೋಂಪುರ ಕೈಗಾರಿಕ ಪ್ರದೇಶದಲ್ಲಿ ಬಿ.ಪಿ.ಎಲ್. ಕಂಪನಿಗೆ ಮಂಜೂರು ಮಾಡಿರುವ ಜಮೀನಿನ ವಿಸ್ತೀರ್ಣವೆಷ್ಟು, ಕಂಪನಿಯು ಸದರಿ ಜಮೀನಿನಲ್ಲಿ ಉಪಯೋಗ ಮಾಡಿಕೊಂಡಿರುವ ಜಮೀನಿನ ವಿಸ್ತೀರ್ಣವೆಷ್ಟು; (ದಾಖಲೆಗಳ ಸಮೇತ ಸಂಪೂರ್ಣ ಮಾಹಿತಿ ನೀಡುವುದು)</td><td>ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಿಂದ ನೆಲಮಂಗಲ ವಿಧಾನಸಭಾ ಕ್ಷೇತ್ರದ ದಾಬಸ್‌ಪೇಟೆ 1ನೇ ಹಂತದ ಕೈಗಾರಿಕಾ ಪ್ರದೇಶದ ನಿವೇಶನ ಸಂ: 1 ಮತ್ತು 2 ರಲ್ಲಿನ ಒಟ್ಟು 149 ಎಕರೆ 5.5 ಗುಂಟೆ ಜಮೀನನ್ನು ಮೆ|| ಬಿ.ಪಿ.ಎಲ್. ಲಿ. ಇವರಿಗೆ ಹಂಚಿಕೆ ಮಾಡಲಾಗಿದೆ.<br><br>ಕಂಪನಿಯವರು ಹಂಚಿಕೆ ಪಡೆದ ಜಮೀನಿನ ಶೇಕಡಾ 5.12ರಷ್ಟು ಪ್ರದೇಶದಲ್ಲಿ ಕಟ್ಟಡವನ್ನು ನಿರ್ಮಿಸಲಾಗಿದೆ.</td></tr>
<tr><td>(ಆ)</td><td>ಬಿಪಿಎಲ್ ಕಂಪನಿಯವರು ನಿರ್ಮಾಣ ಮಾಡಿರುವ ಕಟ್ಟಡದ ವಿಸ್ತೀರ್ಣವೆಷ್ಟು; ಕಂಪನಿಯವರು ಮಾರಾಟ ಮಾಡಿರುವ ಜಮೀನಿನ ಪೈಕಿ ವಿಸ್ತೀರ್ಣದ ಭಾಗವೆಷ್ಟು; (ವಿವರ ನೀಡುವುದು)</td><td rowspan="3">ಭೂಸ್ವಾಧೀನಗೊಂಡ ಹಾಗೂ ಬಿ.ಪಿ.ಎಲ್.ಗೆ ಹಂಚಿಕೆಯಾಗಿರುವ ಎಲ್ಲಾ ಜಮೀನುಗಳಿಗೆ ದಿನಾಂಕ: 28.11.2006ರಂದು ಶುದ್ಧ ಕ್ರಯಪತ್ರ ಮಾಡಲಾಗಿದೆ ಹಾಗೂ ಶೇಕಡಾ 5.12ರಷ್ಟು ಕಟ್ಟಡವನ್ನು ನಿರ್ಮಿಸಲಾಗಿದೆ.<br><br>ತದನಂತರದಲ್ಲಿ ಮೆ|| ಬಿ.ಪಿ.ಎಲ್. ಲಿ.ರವರು ಈ ಕೆಳಕಂಡ ಸಂಸ್ಥೆಗಳಿಗೆ ಜಮೀನನ್ನು ಮಾರಾಟ ಮಾಡಿರುತ್ತಾರೆ ಹಾಗೂ ಸದರಿ ಘಟಕಗಳು ಅನುಷ್ಠಾನಗೊಂಡಿರುತ್ತವೆ:-<br><br><table><tr><th>Sl. No</th><th>Company Name</th><th>Extent (A-G)</th></tr><tr><td>1.</td><td>M/s. Maruthi Suzuki India Ltd.</td><td>33-14</td></tr><tr><td>2.</td><td>M/s. Maruthi Suzuki India Ltd. (purchased through M/s. Pegasus Financial Institution)</td><td>87-13.10</td></tr><tr><td>3.</td><td>M/s. Jindal Aluminium Ltd.</td><td>25-05.05</td></tr><tr><td>4.</td><td>BOC India Ltd / LIne India Ltd.</td><td>3-12.90</td></tr><tr><td colspan="2">Total</td><td>149-05.05</td></tr></table></td></tr>
<tr><td>(ಇ)</td><td>ಬಿಪಿಎಲ್ ಕಂಪನಿಯು ಪ್ರಸ್ತುತ ಜಾಗದಲ್ಲಿ ಕಾರ್ಯನಿರ್ವಹಿಸುತ್ತಿದೆಯೇ; ಇಲ್ಲವಾದಲ್ಲಿ ಸದರಿ ಜಾಗದಲ್ಲಿ ಬೇರೆ ಯಾವ ಯಾವ ಸಂಸ್ಥೆಯನ್ನು ಸ್ಥಾಪಿಸಲಾಗಿದೆ; (ಸಂಸ್ಥೆಯ ಹೆಸರು ಸಮೇತ ವಿವರ ನೀಡುವುದು)</td></tr>
<tr><td>(ಈ)</td><td>ಬಿಪಿಎಲ್ ಕಂಪನಿಯಿಂದ ಯಾವ ಸಂಸ್ಥೆಗೆ ಜಮೀನನ್ನು ಪರಭಾರೆ ಮಾಡಲಾಗಿದೆ; ಎಷ್ಟು ಮೊತ್ತಕ್ಕೆ ಪರಭಾರೆ ಮಾಡಲಾಗಿದೆ; (ಸಂಪೂರ್ಣ ವಿವರ ನೀಡುವುದು)</td></tr>
</table>

| | | |
|---|---|---|
| (ಉ) | ಬಿಪಿಎಲ್ ಸಂಸ್ಥೆಯ ವಿರುದ್ಧ ಲೋಕಾಯುಕ್ತದಿಂದ ತನಿಖೆ ನಡೆಸಿ ತಪ್ಪಿತಸ್ಥರ ವಿರುದ್ಧ ಕ್ರಮ ಕೈಗೊಳ್ಳಲಾಗಿದೆಯೆ; ಹಾಗಿದ್ದಲ್ಲಿ ಈ ಬಗ್ಗೆ ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ಮೆ॥ ಬಿ.ಪಿ.ಎಲ್. ಲಿ. ಕಂಪನಿಯವರು ಹಂಚಿಕೆ ಪಡೆದ 149 ಎಕರೆ 5.5 ಗುಂಟೆ ಜಮೀನಿನಲ್ಲಿ ಶೇಕಡಾ 5.12ರಷ್ಟು ಕಟ್ಟಡವನ್ನು ಮಾತ್ರ ನಿರ್ಮಿಸಿ, ದಿನಾಂಕ: 28.11.2006ರಂದು ಶುದ್ಧ ಕ್ರಯಪತ್ರವನ್ನು ಪಡೆದುಕೊಂಡು ಕೈಗಾರಿಕೆಯನ್ನು ಸ್ಥಾಪಿಸುವ ಬದಲು ಬೇರೆ ಕಂಪನಿಗಳಿಗೆ ಸದರಿ ಜಮೀನನ್ನು ಮಾರಾಟ ಮಾಡಿರುವ ಕಾರಣ, ಪ್ರಕರಣದ ಕುರಿತು ಸಮಗ್ರ ತನಿಖೆಯನ್ನು ಕೈಗೊಳ್ಳಲು ಆದೇಶ ಸಂಖ್ಯೆ: ಸಿಐ 417 ಎಸ್‌ಪಿಕ್ಯೂ 2013, ದಿನಾಂಕ: 07.11.2014ರಲ್ಲಿ ಈ ಪ್ರಕರಣವನ್ನು ಮಾನ್ಯ ಲೋಕಾಯುಕ್ತರಿಗೆ ವಹಿಸಲಾಗಿದೆ.<br>(ಆದೇಶದ ಪ್ರತಿಯನ್ನು ಅನುಬಂಧ-1ರಲ್ಲಿ ಒದಗಿಸಿದೆ.)<br>ಈ ಪ್ರಕರಣದ ವಿಚಾರಣೆಯು ಯಾವ ಹಂತದಲ್ಲಿದೆ ಎಂಬ ಬಗ್ಗೆ ಮಾಹಿತಿ ಒದಗಿಸುವಂತೆ ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ ಇವರಿಗೆ ಬರೆದ ದಿನಾಂಕ: 11.01.2017ರ ಪತ್ರದಲ್ಲಿ ಕೋರಿದ್ದು, ಸದರಿ ಪ್ರಕರಣದಲ್ಲಿ ದಾಖಲಾತಿಗಳನ್ನು ಸಂಗ್ರಹಿಸುತ್ತಿದ್ದು, ಅಂತಿಮ ವರದಿ ತಯಾರಿಕೆಗಾಗಿ ಬಾಕಿ ಇರುತ್ತದೆ ಎಂದು ನಿಬಂಧಕರು, ಕರ್ನಾಟಕ ಲೋಕಾಯುಕ್ತ ಇವರು ದಿನಾಂಕ: 09.03.2017ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.<br>(ಪತ್ರಗಳ ಪ್ರತಿಯನ್ನು ಅನುಬಂಧ-2 ಮತ್ತು 3ರಲ್ಲಿ ಒದಗಿಸಿದೆ.)<br>ಈ ಪ್ರಕರಣದ ವಿಚಾರಣೆಯು ಯಾವ ಹಂತದಲ್ಲಿದೆ ಎಂಬ ಬಗ್ಗೆ ಮತ್ತೊಮ್ಮೆ ನಿಬಂಧಕರು, ಕರ್ನಾಟಕ ಲೋಕಾಯುಕ್ತ ಇವರಿಗೆ ಬರೆದ ದಿನಾಂಕ: 07.02.2020ರ ಪತ್ರದಲ್ಲಿ ಕೋರಲಾಗಿದೆ.<br>ಈ ಕುರಿತು ಮಾಹಿತಿ / ವರದಿ ಬಂದಿರುವುದಿಲ್ಲ.<br>(ಪತ್ರದ ಪ್ರತಿಯನ್ನು ಅನುಬಂಧ-4 ರಲ್ಲಿ ಒದಗಿಸಿದೆ.) |

ಸಂಖ್ಯೆ: ಸಿಐ 41 ಐಎಪಿ (ಇ) 2021

(ಜಗದೀಶ ಶೆಟ್ಟರ)

ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1084

ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ರವೀಂದ್ರ ಶ್ರೀಕಂಠಯ್ಯ (ಶ್ರೀರಂಗಪಟ್ಟಣ)

ಉತ್ತರಿಸಬೇಕಾದ ದಿನಾಂಕ : 05.02.2021

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕಿನಲ್ಲಿ ಆಹಾರ ಧಾನ್ಯಗಳನ್ನು ಸರಬರಾಜು ಮಾಡಲು ರೈತರು ಮತ್ತು ಸಾರ್ವಜನಿಕರಿಗೆ ಸರಿಯಾಗಿ ಸಾರಿಗೆ ವ್ಯವಸ್ಥೆ ಇಲ್ಲದ ಕಾರಣ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲ್ಲ.<br>ಸಾರ್ವಜನಿಕ ವಿತರಣಾ ಪದ್ಧತಿಯಡಿ ಟೆಂಡರ್ ಅನುಮೋದಿತ ಚಿಲ್ಲರೆ ಸಾಗಾಣಿಕೆದಾರರ ಮೂಲಕ ನ್ಯಾಯಬೆಲೆ ಅಂಗಡಿಗಳಿಗೆ ಆಹಾರಧಾನ್ಯ ಸರಬರಾಜು ಮಾಡಲಾಗುತ್ತಿದೆ. ಶ್ರೀರಂಗಪಟ್ಟಣ ತಾಲ್ಲೂಕಿನಲ್ಲಿ ಪ್ರತಿ ಮಾಹೆ ಸರ್ಕಾರ ನಿಗದಿಪಡಿಸಿದ ಪ್ರಮಾಣದಂತೆ ಪಡಿತರ ಚೀಟಿದಾರರು ಪಡಿತರ ಆಹಾರಧಾನ್ಯ ಪಡೆಯುತ್ತಿರುತ್ತಾರೆ. |
| ಆ | ಬಂದಿದ್ದಲ್ಲಿ, ಹೋಬಳಿವಾರು ಮತ್ತು ಹಳ್ಳಿಗಳಿಗೆ ಸರ್ಕಾರದಿಂದಲೇ ಆಹಾರ ಧಾನ್ಯಗಳನ್ನು ಮೊಬೈಲ್ ವಾಹನ ಮೂಲಕ ವಿತರಣೆ ಮಾಡಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ (ಮಾಹಿತಿ ಒದಗಿಸುವುದು)? | ಮೊಬೈಲ್ ವಾಹನದ ಮೂಲಕ ಪಡಿತರ ಆಹಾರಧಾನ್ಯವನ್ನು ವಿತರಣೆ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |

ಆನಾಸ 46 ಡಿಆರ್‌ಎ 2021 (ಇ-ಆಫೀಸ್)

(ಉಮೇಶ ವಿ. ಕತ್ತಿ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು

# ಕರ್ನಾಟಕ ವಿಧಾನ ಸಭೆ

ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ಶಿವಾನಂದ ಎಸ್.ಪಾಟೀಲ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1090

ಉತ್ತರಿಸಬೇಕಾದ ದಿನಾಂಕ : 05.02.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2020-21 ನೇ ಸಾಲಿಗೆ ರಾಜ್ಯದ ರೈತರಿಗೆ ಕೃಷಿ ಪತ್ತಿನ ಸಹಕಾರ ಸಂಸ್ಥೆಗಳು ನಿವ್ವಳ ಶೂನ್ಯ ಬಡ್ಡಿದರ ಅನ್ವಯವಾಗುವಂತೆ ರೂ.3.00 ಲಕ್ಷಗಳವರೆಗಿನ ಅಲ್ಪಾವಧಿ ಕೃಷಿ ಸಾಲ ನೀಡಲು ಸರ್ಕಾರ ಸುತ್ತೋಲೆಯನ್ನು ಹೊರಡಿಸಿದೆಯೇ? | ಹೌದು.<br>2020-21 ನೇ ಸಾಲಿಗೆ ರಾಜ್ಯದ ರೈತರಿಗೆ ಕೃಷಿ ಪತ್ತಿನ ಸಹಕಾರ ಸಂಸ್ಥೆಗಳು ನಿವ್ವಳ ಶೂನ್ಯ ಬಡ್ಡಿದರ ಅನ್ವಯವಾಗುವಂತೆ ರೂ.3.00 ಲಕ್ಷಗಳವರೆಗಿನ ಅಲ್ಪಾವಧಿ ಕೃಷಿ ಸಾಲ ನೀಡಲು ಸರ್ಕಾರ ಆದೇಶ ಸಂಖ್ಯೆ: ಸಿಒ 201 ಸಿಎಲ್ಎಸ್ 2020, ದಿ.05.09.2020 ರಂದು ಆದೇಶ ಹೊರಡಿಸಲಾಗಿದೆ. |
| ಆ) | ಹೊರಡಿಸಿದ್ದಲ್ಲಿ, ಇದಕ್ಕಾಗಿ ಯಾವ ಷರತ್ತುಗಳನ್ನು ವಿಧಿಸಲಾಗಿದೆ (ಮಾಹಿತಿ ಒದಗಿಸುವುದು) | ಸರ್ಕಾರ ಆದೇಶ ಸಂಖ್ಯೆ: ಸಿಒ 201 ಸಿಎಲ್ಎಸ್ 2020, ದಿ.05.09.2020ರ ಆದೇಶದ ಪ್ರತಿಯನ್ನು **ಅನುಬಂಧದಲ್ಲಿ** ನೀಡಲಾಗಿದೆ. |
| ಇ) | ಒಂದು ಕುಟುಂಬಕ್ಕೆ ಗರಿಷ್ಠ ರೂ.3.00 ಲಕ್ಷ ಮಾತ್ರ ಸಾಲ ವಿತರಿಸಲು ಆದೇಶಿಸಿರುವುದನ್ನು ಸರ್ಕಾರ ರೈತರ ಹಿತದೃಷ್ಟಿಯಿಂದ ಮರುಪರಿಶೀಲಿಸಿ ಸಾಲ ವಿತರಣೆಗೆ ವಿಧಿಸಿರುವ ಸುತ್ತೋಲೆಯನ್ನು ತಿದ್ದುಪಡಿ ಮಾಡಲು ಕ್ರಮ ಕೈಗೊಳ್ಳುವುದೇ: | ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿದೆ. |
| ಈ) | ಹಾಗಿದ್ದಲ್ಲಿ, ರೈತರ ಹಿತದೃಷ್ಟಿಯಿಂದ ಪ್ರತಿ ಕುಟುಂಬದ ಬದಲಾಗಿ ಪ್ರತಿ ಅರ್ಹ ರೈತನಿಗೆ ಸಾಲ ವಿತರಿಸಲು ಸುತ್ತೋಲೆ ಮೂಲಕ ಅವಕಾಶ ಕಲ್ಪಿಸಲಾಗುವುದೇ? (ಮಾಹಿತಿ ಒದಗಿಸುವುದು) | ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿದ್ದು, ಪರಿಶೀಲನೆಯ ನಂತರ ಕ್ರಮವಿಡಲಾಗುವುದು. |

ಸಂಖ್ಯೆ: ಸಿಒ 27 ಸಿಎಲ್ಎಸ್ 2021

ಎಸ್.ಟಿ. ಸೋಮಶೇಖರ್

(ಎಸ್.ಟಿ. ಸೋಮಶೇಖರ್)

ಸಹಕಾರ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1045

ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ಕುಮಾರಸ್ವಾಮಿ ಎಂ.ಪಿ. (ಮೂಡಿಗೆರೆ)

ಉತ್ತರಿಸಬೇಕಾದ ದಿನಾಂಕ : 05.02.2021

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬಿ.ಪಿ.ಎಲ್ ಪಡಿತರ ಫಲಾನುಭವಿ ಸೆಕೆಂಡ್ ಹ್ಯಾಂಡ್ ಕಾರನ್ನು ಖರೀದಿಸಿದರೆ (ಅಂದಾಜು ರೂ.25 ಸಾವಿರ) ಬಿ.ಪಿ.ಎಲ್ ಪಡಿತರ ಚೀಟಿಯನ್ನು ರದ್ದುಪಡಿಸಲಾಗುವುದೇ; | ಬಿಪಿಎಲ್ ಕುಟುಂಬಗಳನ್ನು ಗುರುತಿಸುವ ಸಲುವಾಗಿ ರಾಜ್ಯ ಸರ್ಕಾರವು ಬಿಪಿಎಲ್ ವರ್ಗದಿಂದ ಹೊರಗಿಡಲು (Exclusion Criteria) 04 ಮಾನದಂಡಗಳನ್ನು ಗುರುತಿಸಿ ಆದೇಶಿಸಿದೆ. ಜೀವನೋಪಾಯಕ್ಕಾಗಿ ಸ್ವತಃ ಓಡಿಸುವ ವಾಣಿಜ್ಯ ವಾಹನವನ್ನು ಅಂದರೆ ಟ್ರ್ಯಾಕ್ಟರ್, ಮಾಕ್ಸಿಕ್ಯಾಬ್, ಟ್ಯಾಕ್ಸಿ ಇತ್ಯಾದಿಗಳನ್ನು ಹೊಂದಿದ ಕುಟುಂಬಗಳನ್ನು ಹೊರತುಪಡಿಸಿ ನಾಲ್ಕು ಚಕ್ರದ ವಾಹನವನ್ನು ಹೊಂದಿರುವ ಎಲ್ಲಾ ಕುಟುಂಬಗಳ ಬಿ.ಪಿ.ಎಲ್ ಚೀಟಿಗಳನ್ನು ರದ್ದು ಪಡಿಸಲಾಗುವುದು. |
| ಆ | ಬಿ.ಪಿ.ಎಲ್ ಪಡಿತರ ಚೀಟಿಯನ್ನು ಪಡೆಯಲು ಇರುವ ಮಾನದಂಡಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಬಿಪಿಎಲ್ ಕುಟುಂಬಗಳನ್ನು ಗುರುತಿಸುವ ಸಲುವಾಗಿ ರಾಜ್ಯ ಸರ್ಕಾರವು 16-08-2016, 25-03-2017 ಹಾಗೂ 20-5-2017 ರ ಆದೇಶದಲ್ಲಿ ಬಿಪಿಎಲ್ ವರ್ಗಕ್ಕೆ ಒಳಪಡದ (Exclusion Criteria) 04 ಮಾನದಂಡಗಳನ್ನು ಗುರುತಿಸಿ ಆದೇಶಿಸಿರುತ್ತದೆ. ಕೆಳಗಿನ ಈ 04 ಮಾನದಂಡಗಳಿಗೆ ಒಳಪಡದವರು ಬಿಪಿಎಲ್ ಪಡಿತರ ಚೀಟಿ ಪಡೆಯಲು ಅರ್ಹರಿರುತ್ತಾರೆ.<br>1. ಎಲ್ಲಾ ಖಾಯಂ ನೌಕರರು ಅಂದರೆ ಸರ್ಕಾರದ ಅಥವಾ ಸರ್ಕಾರದಿಂದ ಅನುದಾನವನ್ನು ಪಡೆಯುತ್ತಿರುವ ಸಂಸ್ಥೆಗಳು ಅಥವಾ ಸರ್ಕಾರಿ ಪ್ರಾಯೋಜಿತ ಸರ್ಕಾರಿ ಸ್ವಾಮ್ಯದ ಸಂಸ್ಥೆಗಳು/ ಮಂಡಳಿಗಳು/ನಿಗಮಗಳು/ಸ್ವಾಯತ್ತ ಸಂಸ್ಥೆಗಳು ಇತ್ಯಾದಿ ಒಳಗೊಂಡಂತೆ ಆದಾಯ ತೆರಿಗೆ/ಸೇವಾ ತೆರಿಗೆ/ವ್ಯಾಟ್/ವೃತ್ತಿ ತೆರಿಗೆ ಪಾವತಿಸುವ ಎಲ್ಲಾ ಕುಟುಂಬಗಳು.<br>2. ಗ್ರಾಮೀಣ ಪ್ರದೇಶದಲ್ಲಿ 3 ಹೆಕ್ಟೇರ್ ಒಣಭೂಮಿ ಅಥವಾ ತತ್ಸಮಾನ ನೀರಾವರಿ ಭೂಮಿ ಹೊಂದಿರುವ ಕುಟುಂಬಗಳು ಅಥವಾ ಗ್ರಾಮೀಣ ಪ್ರದೇಶದಲ್ಲಿ ಹೊರತುಪಡಿಸಿ ನಗರ ಪ್ರದೇಶಗಳಲ್ಲಿ 1000 ಚದರ ಅಡಿಗಿಂತಲೂ ಹೆಚ್ಚಿನ ವಿಸ್ತೀರ್ಣದ |

| | | |
|---|---|---|
| | | ಪಕ್ಕಾ ಮನೆಯನ್ನು ಸ್ವಂತವಾಗಿ ಹೊಂದಿರುವ ಕುಟುಂಬಗಳು.<br>3.ಜೀವನೋಪಾಯಕ್ಕಾಗಿ ಸ್ವತಃ ಓಡಿಸುವ ವಾಣಿಜ್ಯ ವಾಹನವನ್ನು ಅಂದರೆ ಟ್ರ್ಯಾಕ್ಟರ್, ಮಾಕ್ಸಿಕ್ಯಾಬ್, ಟ್ಯಾಕ್ಸಿ ಇತ್ಯಾದಿಗಳನ್ನು ಹೊಂದಿದ ಕುಟುಂಬಗಳನ್ನು ಹೊರತುಪಡಿಸಿ ನಾಲ್ಕು ಚಕ್ರದ ವಾಹನವನ್ನು ಹೊಂದಿರುವ ಎಲ್ಲಾ ಕುಟುಂಬಗಳು.<br>4. ಕುಟುಂಬದ ವಾರ್ಷಿಕ ಆದಾಯವು ರೂ.1.20 ಲಕ್ಷಗಿಂತ ಹೆಚ್ಚಿಗೆ ಇರುವ ಕುಟುಂಬಗಳು. |

ಆನಾಸ 42 ಡಿಆರ್ಎ 2021 (ಇ-ಆಫೀಸ್)

(ಉಮೇಶ ವಿ.ಕತ್ತಿ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1062

ವಿಧಾನ ಸಭೆ ಸದಸ್ಯರ ಹೆಸರು : ಶ್ರೀಮತಿ ಸೌಮ್ಯ ರೆಡ್ಡಿ (ಜಯನಗರ)

ಉತ್ತರಿಸಬೇಕಾದ ದಿನಾಂಕ : 05.02.2021

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಹೊಸ ಪಡಿತರ ಚೀಟಿಯನ್ನು ಪಡೆಯಲಾಗಿರುವುದು ಹಾಗೂ ಬೆಂಗಳೂರು ಒನ್ ಕೇಂದ್ರಗಳು ಸಹ ಆನ್‌ಲೈನ್ ಸೇವೆಯನ್ನು ನಿಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಸೇವೆಯನ್ನು ಯಾವಾಗ ಪ್ರಾರಂಭಿಸಲಾಗುವುದು; | ಕೋವಿಡ್-19 ಕೊರೊನಾ ವೈರಾಣು ಪ್ರಸರಣವನ್ನು ತಡೆಗಟ್ಟುವ ಹಿನ್ನೆಲೆಯಲ್ಲಿ ಆದ್ಯತಾ (ಬಿ.ಪಿ.ಎಲ್) ಪಡಿತರ ಚೀಟಿಯ ಅರ್ಜಿ ಸ್ವೀಕಾರವನ್ನು ತಾತ್ಕಾಲಿಕವಾಗಿ ತಡೆಹಿಡಿಯಲಾಗಿದೆ. ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಿ ಆದ್ಯತೇತರ(ಎ.ಪಿ.ಎಲ್) ಪಡಿತರ ಚೀಟಿಯನ್ನು ಪಡೆದುಕೊಳ್ಳಲು ಅವಕಾಶ ಕಲ್ಪಿಸಲಾಗಿರುತ್ತದೆ. |
| ಆ | ಸಾರ್ವಜನಿಕರಿಗೆ ಹೊಸ ಪಡಿತರ ಚೀಟಿ ಪಡೆಯುವ ಸಂಬಂಧ ಅರ್ಜಿಯನ್ನು ಸಲ್ಲಿಸಲು ಯಾವಾಗ ಅವಕಾಶ ಕಲ್ಪಿಸಲಾಗುತ್ತದೆ (ವಿವರ ನೀಡುವುದು)? | ಪಡಿತರ ಚೀಟಿಯನ್ನು ಫಲಾನುಭವಿಗಳಿಗೆ ನೀಡುವ ಮುನ್ನ ಕುಟುಂಬದ ಎಲ್ಲಾ ಸದಸ್ಯರ ಬಯೋಮೆಟ್ರಿಕ್ ಪಡೆಯುವುದು ಕಡ್ಡಾಯವಾಗಿರುತ್ತದೆ. ಆದ್ಯತಾ (ಪಿ.ಹೆಚ್.ಹೆಚ್) ಪಡಿತರ ಚೀಟಿಯನ್ನು ವಿತರಿಸುವ ಮುನ್ನ ಅರ್ಜಿದಾರರ ಅರ್ಹತೆಯ ಬಗ್ಗೆ ಸ್ಥಳ ತನಿಖೆಯನ್ನು ಸಿಬ್ಬಂದಿ ಮುಖಾಂತರ ನಡೆಸುವುದು ಕಡ್ಡಾಯವಾಗಿರುತ್ತದೆ. ಕೋವಿಡ್-19 ಕೊರೊನಾ ವೈರಾಣು ಪ್ರಸರಣವನ್ನು ತಡೆಗಟ್ಟುವ ಹಿನ್ನೆಲೆಯಲ್ಲಿ ಆದ್ಯತಾ (ಪಿ.ಹೆಚ್.ಹೆಚ್) ಪಡಿತರ ಚೀಟಿಯನ್ನು ಕೋರಿ ಅರ್ಜಿ ಸಲ್ಲಿಸುವುದನ್ನು ತಾತ್ಕಾಲಿಕವಾಗಿ ತಡೆಹಿಡಿಯಲಾಗಿದೆ. |

ಆನಾಸ 43 ಡಿಆರ್‌ಎ 2021 (ಇ-ಆಫೀಸ್)

(ಉಮೇಶ ವಿ. ಕತ್ತಿ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1128
2. ಸದಸ್ಯರ ಹೆಸರು : ಶ್ರೀ ನಿಸರ್ಗ ನಾರಾಯಣಸ್ವಾಮಿ ಎಲ್.ಎನ್. (ದೇವನಹಳ್ಳಿ)
3. ಉತ್ತರಿಸುವ ದಿನಾಂಕ : 05.02.2021
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕಳೆದ 03 ವರ್ಷಗಳಲ್ಲಿ ರಾಜ್ಯದಲ್ಲಿ ಕೆ.ಐ.ಎ.ಡಿ.ಬಿ. ವತಿಯಿಂದ ಕೈಗಾರಿಕೆ ಸ್ಥಾಪನೆಗಾಗಿ ಸ್ವಾಧೀನಪಡಿಸಿಕೊಂಡ ಭೂಮಿ ಎಷ್ಟು; (ಜಿಲ್ಲಾವಾರು ಮಾಹಿತಿ ನೀಡುವುದು) | ಕಳೆದ 03 ವರ್ಷಗಳಲ್ಲಿ ರಾಜ್ಯದಲ್ಲಿ ಕೆ.ಐ.ಎ.ಡಿ.ಬಿ. ವತಿಯಿಂದ ಭೂಸ್ವಾಧೀನಪಡಿಸಿದ ವಿಸ್ತೀರ್ಣದ ವಿವರ ಈ ಕೆಳಕಂಡಂತಿದೆ :-<br>ಕೈಗಾರಿಕಾ ಪ್ರದೇಶ: 5047-20 ಎಕರೆ<br>ಏಕಘಟಕ ಸಂಕೀರ್ಣ: 3594-11 ಎಕರೆ<br>ಒಟ್ಟು: 8641-31 ಎಕರೆ<br>ಜಿಲ್ಲಾವಾರು ಮಾಹಿತಿಯನ್ನು ಅನುಬಂಧ-1ರಲ್ಲಿ ಒದಗಿಸಿದೆ. |
| (ಆ) | ಸ್ವಾಧೀನ ಪಡಿಸಿಕೊಂಡ ಜಮೀನಿಗೆ ಪೂರ್ಣ ಪರಿಹಾರ ಹಣ ರೈತರಿಗೆ ನೀಡಲಾಗಿದೆಯೇ; ಇಲ್ಲವಾದಲ್ಲಿ, ಹಣ ನೀಡದಿರಲು ಇರುವ ತೊಡಕುಗಳೇನು; (ಜಿಲ್ಲಾವಾರು ಫಲಾನುಭವಿವಾರು ಪೂರ್ಣ ಮಾಹಿತಿ ನೀಡುವುದು) | ಸ್ವಾಧೀನಪಡಿಸಿಕೊಂಡಿರುವ ಜಮೀನುಗಳ ಪೈಕಿ ಭೂಪರಿಹಾರ ದರ ನಿಗದಿಪಡಿಸಲಾಗಿರುವ ಜಮೀನಿನ ಅಧಿಸೂಚಿತ ಖಾತೆದಾರರು ಮತ್ತು ಹಿತಾಸಕ್ತಿದಾರರಿಗೆ ನಿಯಮಾನುಸಾರ ಭೂಪರಿಹಾರ ಪಾವತಿಸುವ ಕಾರ್ಯ ಪ್ರಗತಿಯಲ್ಲಿದೆ.<br>ಜಮೀನಿನ ಹಕ್ಕಿನ ಕುರಿತಂತೆ ವಿವಾದಗಳಿರುವ ಪ್ರಕರಣಗಳಲ್ಲಿ ಅವಾರ್ಡ್ ರಚಿಸಿ, ಪರಿಹಾರ ಧನವನ್ನು ನ್ಯಾಯಾಲಯದಲ್ಲಿ ಠೇವಣಿ ಇಡಲು ಕ್ರಮ ಕೈಗೊಳ್ಳಲಾಗುತ್ತಿದೆ.<br>ಜಿಲ್ಲಾವಾರು ಮಾಹಿತಿಯನ್ನು ಅನುಬಂಧ-2ರಲ್ಲಿ ಒದಗಿಸಿದೆ. |

(ಇ) ಭೂಸ್ವಾಧೀನಕ್ಕೆ ಅಧಿಸೂಚನೆ ಹೊರಡಿಸಿದ ನಂತರ ರದ್ದು ಕೋರಿ ನ್ಯಾಯಾಲಯಕ್ಕೆ ಹೋಗಿರುವ ಪ್ರಕರಣಗಳೆಷ್ಟು; (ಜಿಲ್ಲಾವಾರು ಫಲಾನುಭವಿಗಳ ವಿವರ ನೀಡುವುದು)

ಈ ಭೂಸ್ವಾಧೀನ ಪ್ರಕ್ರಿಯೆಗೆ ಸಂಬಂಧಿಸಿದಂತೆ ಕರ್ನಾಟಕ ಉಚ್ಛ ನ್ಯಾಯಾಲಯದಲ್ಲಿ ದಾಖಲಾಗಿರುವ ನ್ಯಾಯಾಲಯ ಪ್ರಕರಣಗಳ ಜಿಲ್ಲಾವಾರು ವಿವರ ಕೆಳಕಂಡಂತಿದೆ :-

| ಕ್ರ. ಸಂ. | ಜಿಲ್ಲೆ | ಒಟ್ಟು ಪ್ರಕರಣಗಳ ಸಂಖ್ಯೆ |
|---|---|---|
| 1. | ಬೆಂಗಳೂರು ಗ್ರಾಮಾಂತರ | 10 |
| 2. | ರಾಮನಗರ | 7 |
| 3. | ಕೋಲಾರ | 12 |
| 4. | ಚಿಕ್ಕಬಳ್ಳಾಪುರ | 2 |
| 5. | ತುಮಕೂರು | 2 |
| 6. | ಬೆಳಗಾವಿ | 1 |
| 7. | ಮೈಸೂರು | 9 |
| 8. | ಮಂಗಳೂರು | 5 |
| 9. | ಕಲಬುರ್ಗಿ | 3 |
| ಒಟ್ಟು | | 51 |

(ಈ) ಸ್ವಾಧೀನ ಪಡಿಸಿಕೊಂಡ ನಂತರ ಅನ್ಯ ಕಾರಣಗಳಗಾಗಿ ಸ್ವಾಧೀನ ಪ್ರಕ್ರಿಯೆಗಳಿಂದ ಕೈಬಿಟ್ಟ ಪ್ರಕರಣಗಳೆಷ್ಟು? (ಜಿಲ್ಲಾವಾರು ಪೂರ್ಣ ಮಾಹಿತಿ ನೀಡುವುದು)

ಕಳೆದ 3 ವರ್ಷಗಳಲ್ಲಿ ಸ್ವಾಧೀನಪಡಿಸಿಕೊಂಡಿರುವ ಯಾವುದೇ ಜಮೀನನ್ನು ಸ್ವಾಧೀನ ಪ್ರಕ್ರಿಯೆಯಿಂದ ಹೊರತುಪಡಿಸಿರುವುದಿಲ್ಲ.

ಸಂಖ್ಯೆ: ಸಿಐ 37 ಐಎಪಿ (ಇ) 2021

(ಜಗದೀಶ ಶೆಟ್ಟರ)

ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1187

ಸದಸ್ಯರ ಹೆಸರು : ಶ್ರೀ ನರೇಂದ್ರ ಆರ್. (ಹನೂರು)

ಉತ್ತರಿಸುವವರು : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು

ಉತ್ತರಿಸುವ ದಿನಾಂಕ : 05.02.2021

| ಕ್ರ.ಸಂ. | ಪ್ರಶ್ನೆ | ಉತ್ತರ |
| --- | --- | --- |
| ಅ | ಚಾಮರಾಜನಗರ ಜಿಲ್ಲೆಯಲ್ಲಿ ಹೊಸ ಕೈಗಾರಿಕೆಗಳನ್ನು ಸ್ಥಾಪಿಸುವ ಯೋಜನೆಗಳು ಸರ್ಕಾರದ ಮುಂದಿದೆಯೇ; | ಹೌದು.<br>ಚಾಮರಾಜನಗರ ಜಿಲ್ಲೆಯಲ್ಲಿ ಹೊಸದಾಗಿ ಕೈಗಾರಿಕೆಗಳನ್ನು ಸ್ಥಾಪಿಸಲು ರಾಜ್ಯಮಟ್ಟದ ಏಕಗವಾಕ್ಷಿ ಸಮಿತಿ ಸಭೆಯಲ್ಲಿ ಹಾಗೂ ಉನ್ನತ ಮಟ್ಟದ ಸಮಿತಿ ಸಭೆಯಲ್ಲಿ ಒಟ್ಟು 10 ಯೋಜನೆಗಳಿಗೆ ಅನುಮೋದನೆ ನೀಡಲಾಗಿದೆ. ಅಲ್ಲದೆ, ಜಿಲ್ಲಾಮಟ್ಟದ ಏಕಗವಾಕ್ಷಿ ಸಮಿತಿ ಸಭೆಯಲ್ಲಿ ಈವರೆಗೆ ಒಟ್ಟು 248 ಯೋಜನೆಗಳಿಗೆ ಅನುಮೋದನೆ ನೀಡಲಾಗಿದೆ. |
| ಆ | ಹಾಗಿದ್ದಲ್ಲಿ, ಅಲ್ಲಿನ ಯುವಜನತೆಯ ನಿರುದ್ಯೋಗ ಸಮಸ್ಯೆಯನ್ನು ನಿವಾರಿಸಲು ಹಾಗೂ ಕೈಗಾರಿಕೆಗಳ ಅಭಿವೃದ್ಧಿಗೆ ಸರ್ಕಾರದ ತೆಗೆದುಕೊಂಡಿರುವ ಕ್ರಮಗಳೇನು; (ವಿವರ ನೀಡುವುದು) | ಅನುಮೋದಿತ ಯೋಜನೆಗಳಿಂದ 1986 ಕೋಟಿ ರೂ.ಗಳ ಬಂಡವಾಳ ಹೂಡಿಕೆಯನ್ನು ಹಾಗೂ 902 ಮಂದಿಗೆ ಉದ್ಯೋಗಾವಕಾಶವನ್ನು ನಿರೀಕ್ಷಿಸಲಾಗಿದೆ. |
| ಇ | ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಕೈಗಾರಿಕೆಗಳೆಷ್ಟು; (ವಿವರ ನೀಡುವುದು) | ಚಾಮರಾಜನಗರ ಜಿಲ್ಲೆಯಲ್ಲಿ 31.12.2020ರ ಅಂತ್ಯಕ್ಕೆ ಒಟ್ಟು 10115 ಎಂಎಸ್‌ಎಂಇ ಮತ್ತು ಬೃಹತ್ ಕೈಗಾರಿಕೆಗಳನ್ನು 7587 ಕೋಟಿ ರೂ.ಗಳ ಬಂಡವಾಳ ಹಾಗೂ 45001 ಉದ್ಯೋಗಾವಕಾಶಗಳೊಂದಿಗೆ ನೋಂದಾಯಿಸಲಾಗಿದೆ. |
| ಈ | ಕೊರೋನಾ ಸಂದರ್ಭದಲ್ಲಿ ಕೈಗಾರಿಕೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದ ಕಾರ್ಮಿಕರಿಗೆ ಸರ್ಕಾರ ನೀಡಿರುವ ಸೌಲಭ್ಯಗಳೇನು? (ವಿವರ ನೀಡುವುದು) | ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯಿಂದ ಯಾವುದೇ ಸೌಲಭ್ಯಗಳನ್ನು ನೀಡಿರುವುದಿಲ್ಲ. |

ಸಿಐ 63 ಎಸ್‌ಪಿಐ 2021

(ಜಗದೀಶ್ ಶೆಟ್ಟರ)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು

## ಕರ್ನಾಟಕ ವಿಧಾನ ಸಭೆ

ಮಾನ್ಯ ವಿಧಾನ ಸಭೆಯ ಸದಸ್ಯರು : ಶ್ರೀಮತಿ ಲಕ್ಷ್ಮೀ ಆರ್. ಹೆಬ್ಬಾಳ್ಕರ್ (ಬೆಳಗಾಂ ಗ್ರಾಮಾಂತರ)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1202

ಉತ್ತರಿಸಬೇಕಾದ ದಿನಾಂಕ : 05.02.2021

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಒಟ್ಟು ನಂದಿನಿ ಪಾರ್ಲರ್/ಬೂತ್‌ಗಳೆಷ್ಟು; ನಗರ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿರುವ ಬೂತ್‌ಗಳ ಸಂಖ್ಯೆ ಎಷ್ಟು; | ರಾಜ್ಯದಲ್ಲಿ ಒಟ್ಟು 1833 ನಂದಿನಿ ಪಾರ್ಲರ್/ ಬೂತ್‌ಗಳಿವೆ.<br><br>ನಗರ ಪ್ರದೇಶಗಳಲ್ಲಿ 1519 ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ 314 ಬೂತ್‌ಗಳಿರುತ್ತವೆ. |
| ಆ) | ನಗರ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ನಂದಿನಿ ಪಾರ್ಲರ್ /ನಂದಿನಿ ಬೂತ್‌ಗಳ ಫ್ರಾಂಚೈಸಿಯನ್ನು ಪಡೆಯುವುದು ಹೇಗೆ ಮತ್ತು ಅದಕ್ಕೆ ಇರುವ ನಿಯಮ ಹಾಗೂ ಮಾನದಂಡಗಳೇನು; ಫ್ರಾಂಚೈಸಿಯನ್ನು ಪಡೆಯುವವರಿಗೆ ಸಿಗುವ ಸೌಲಭ್ಯಗಳೇನು; | 1. ಜನಸಂಖ್ಯೆ ಹಾಗೂ ಬೇಡಿಕೆಗೆ ಅನುಗುಣವಾಗಿ ನಂದಿನಿ ಹಾಲು ಮತ್ತು ಹಾಲಿನ ಉತ್ಪನ್ನಗಳನ್ನು ರಿಟೇಲ್ ದರದಲ್ಲಿ ಪೂರೈಸಲು ಕ್ರಮಕೈಗೊಳ್ಳಲಾಗುತ್ತಿದೆ.<br>2. ಸ್ಥಳೀಯ ಪ್ರದೇಶದಲ್ಲಿ ನಂದಿನಿ ಹಾಲು ಮತ್ತು ಹಾಲಿನ ಉತ್ಪನ್ನ ಮಾರಾಟ ಮಾಡಲು ಆಸಕ್ತರನ್ನು ಗುರುತಿಸಲಾಗುವುದು, ಹಾಗೂ ಕೆಲವೊಮ್ಮೆ ನೇರವಾಗಿ ಆಸಕ್ತರು ಅರ್ಜಿಗಳನ್ನು ನೀಡಿದಲ್ಲಿ ಪರಿಶೀಲಿಸಿ ಅಗತ್ಯ ಕ್ರಮವಿಡಲಾಗುವುದು.<br>3. ಅರ್ಜಿದಾರರ ಮಾರಾಟ ಕೌಶಲ್ಯತೆ ಸ್ಥಳೀಯ ಜನಸಾಮಾನ್ಯರೊಂದಿಗೆ ಒಡನಾಟ ಹಾಗೂ ಬಂಡವಾಳವನ್ನು ಭರಿಸುವ ಸಾಮರ್ಥ್ಯಕ್ಕೆ ಅನುಗುಣವಾಗಿ ನೇಮಕ ಮಾಡಲಾಗುವುದು.<br>4. ಆಸಕ್ತರು ಆಯ್ದ ಸ್ಥಳಗಳಲ್ಲಿ ಬಂಡವಾಳ ಹೂಡಿ ಇತರೆ ಉತ್ಪನ್ನಗಳೊಂದಿಗೆ ನಂದಿನಿ ಉತ್ಪನ್ನಗಳನ್ನು ಮಾರಾಟ ಮಾಡಬೇಕಾಗುತ್ತದೆ.<br>5. ಪಾರ್ಲರ್/ ಫ್ರಾಂಚೈಸಿಗಳಿಗೆ ಬ್ರಾಂಡಿಂಗ್‌ನ್ನು ಮಾಡಿಸುವುದು ಹಾಗೂ ರಿಯಾಯತಿ ದರದಲ್ಲಿ ಫ್ರೀಜರ್ ಮತ್ತು ಕೂಲರ್ ವ್ಯವಸ್ಥೆ ಹಾಲು ಒಕ್ಕೂಟಗಳು ಹಾಗೂ ಕೆ.ಎಮ್.ಎಫ್ ಸಂಸ್ಥೆಯಿಂದ ಮಾಡಲಾಗುವುದು. |
| ಇ) | ಎಷ್ಟು ಕಿ.ಮೀ.ಗೆ ಒಂದರಂತೆ ನಂದಿನಿ ಪಾರ್ಲರ್‌ನ್ನು ಸ್ಥಾಪಿಸಲು ಅವಕಾಶವಿರುತ್ತದೆ? (ಗ್ರಾಮೀಣ ಹಾಗೂ ನಗರ ಪ್ರದೇಶಗಳಿಗೆ ಅನ್ವಯಿಸುವ ಮಾನದಂಡಗಳೇನು) | ನಗರ ಪ್ರದೇಶಗಳಲ್ಲಿ ಒಂದು ಅಥವಾ ಎರಡು ಕಿ.ಮೀ.ಗೆ ಒಂದರಂತೆ ಆಯಾ ಸ್ಥಳದ ಬೇಡಿಕೆ ಮತ್ತು ಜನಸಂಖ್ಯೆ ಆಧಾರದ ಮೇಲೆ ಬೂತ್ ಸ್ಥಾಪಿಸಲು ಕ್ರಮಕೈಗೊಳ್ಳಲಾಗುವುದು.<br><br>ಗ್ರಾಮೀಣ ಪ್ರದೇಶಗಳಲ್ಲಿ ಹಾಲು ಮತ್ತು ಹಾಲಿನ ಉತ್ಪನ್ನಗಳ ಮಾರಾಟಕ್ಕೆ ಬೇಡಿಕೆ/ಅವಕಾಶಗಳ ಅನುಸಾರವಾಗಿ ನಂದಿನಿ ಪಾರ್ಲರ್‌ಗಳನ್ನು ಸ್ಥಾಪಿಸಲು ಅವಕಾಶವಿದ್ದು, ಅಂತರವನ್ನು ನಿಗಧಿಪಡಿಸಿರುವುದಿಲ್ಲ. |

ಕಡತ ಸಂಖ್ಯೆ: ಸಿಒ 23 ಸಿಸಿಬಿ 2021

(ಎಸ್. ಟಿ. ಸೋಮಶೇಖರ್)
ಸಹಕಾರ ಸಚಿವರು.

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1148
2. ಸದಸ್ಯರ ಹೆಸರು : ಶ್ರೀ ಲಾಲಾಜಿ ಆರ್. ಮೆಂಡನ್ (ಕಾಪು)
3. ಉತ್ತರಿಸುವ ದಿನಾಂಕ : 05.02.2021
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಉಡುಪಿ ಜಿಲ್ಲೆ ಕಾಪು ತಾಲ್ಲೂಕಿನ ಪಾದೂರಿನಲ್ಲಿ ಕಾರ್ಯನಿರ್ವಹಿಸುತ್ತಿರುವ ಕಚ್ಚಾತೈಲ ಸಂಗ್ರಹಗಾರ (ಐ.ಎಸ್.ಪಿ.ಆರ್.ಎಲ್. ಸಂಸ್ಥೆ) 2ನೇ ಹಂತದ ವಿಸ್ತರಣೆ ಪ್ರಕ್ರಿಯೆ ಯಾವ ಹಂತದಲ್ಲಿದೆ; (ವಿವರ ನೀಡುವುದು) | ಉಡುಪಿ ಜಿಲ್ಲೆ, ಕಾಪು ತಾಲ್ಲೂಕು, ಪಾದೂರು ಮತ್ತು ಕಳತ್ತೂರು ಗ್ರಾಮಗಳಲ್ಲಿನ 210 ಎಕರೆ 43 ಸೆಂಟ್ಸ್ ಜಮೀನನ್ನು ಐ.ಎಸ್.ಪಿ.ಆರ್.ಎಲ್.ರವರ 2ನೇ ಹಂತದ ವಿಸ್ತರಣೆ ಘಟಕಕ್ಕಾಗಿ ಸ್ವಾಧೀನಪಡಿಸಿಕೊಳ್ಳಲು ಕೆ.ಐ.ಎ.ಡಿ. ಕಾಯ್ದೆ ಕಲಂ 3(1), 1(3) & 28(1)ರಡಿ ಪ್ರಾಥಮಿಕ ಅಧಿಸೂಚನೆಯನ್ನು ದಿನಾಂಕ: 14.01.2021 ರಂದು ಹೊರಡಿಸಲಾಗಿದೆ.<br><br>ಸದರಿ ಜಮೀನಿನ ಜಂಟಿ ಅಳತೆ ಕಾರ್ಯ ಮತ್ತು ಕಲಂ 28(3)ರಡಿ ವಿಚಾರಣೆ ಪ್ರಗತಿಯಲ್ಲಿದೆ. |
| (ಆ) | 2ನೇ ಹಂತದ ವಿಸ್ತರಣೆ ಸಂದರ್ಭದಲ್ಲಿ ಭೂಮಿ ಕಳೆದುಕೊಳ್ಳುವ ರೈತರಿಗೆ ಗರಿಷ್ಟ ಪರಿಹಾರ ನೀಡಿಕೆಗೆ ಹಾಗೂ ಪುನರ್ ವಸತಿ ಕಲ್ಪಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ಸಂಪೂರ್ಣ ವಿವರ ನೀಡುವುದು) | ಸದರಿ ಜಮೀನಿಗೆ ಅಂತಿಮ ಅಧಿಸೂಚನೆ ಹೊರಡಿಸಿದ ನಂತರ ಜಿಲ್ಲಾಧಿಕಾರಿ, ಉಡುಪಿ ಜಿಲ್ಲೆ ಇವರ ಅಧ್ಯಕ್ಷತೆಯಲ್ಲಿ ಭೂದರ ನಿರ್ಧರಣಾ ಸಲಹಾ ಸಮಿತಿ ಸಭೆ ಕರೆದು ಪರಿಹಾರ ಧನ ನಿಗದಿಪಡಿಸಲು ಕ್ರಮ ಕೈಗೊಳ್ಳಲಾಗುತ್ತದೆ. |

| | | |
|---|---|---|
| (ಇ) | 2ನೇ ಹಂತದ ವಿಸ್ತರಣೆ ಸಂದರ್ಭದಲ್ಲಿ ಸ್ಥಳೀಯರಿಗೆ ಉದ್ಯೋಗ ನೀಡಲು ಕ್ರಮ ಕೈಗೊಳ್ಳಲಾಗುವುದೇ; | ನಿವೇಶನ ಹಂಚಿಕೆ ಪಡೆದ ಕೈಗಾರಿಕಾ ಘಟಕಗಳು ಸ್ಥಳೀಯರಿಗೆ ಮತ್ತು ಕನ್ನಡಿಗರಿಗೆ ಉದ್ಯೋಗವನ್ನು ಒದಗಿಸುವ ಷರತ್ತುಗಳನ್ನೊಳಪಟ್ಟ ಒಡಂಬಡಿಕೆಯಂತೆ ಉದ್ಯೋಗಾವಕಾಶವನ್ನು ಕಲ್ಪಿಸಲಾಗುತ್ತದೆ. |
| (ಈ) | ಕ್ರಮ ಕೈಗೊಂಡಿದ್ದಲ್ಲಿ, ಯಾವ ಅನುಪಾತದಲ್ಲಿ ಸ್ಥಳೀಯರಿಗೆ ಉದ್ಯೋಗ ನೀಡಲಾಗುವುದು? (ವಿವರ ನೀಡುವುದು) | |

(ಜಗದೀಶ ಶೆಟ್ಟರ)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

ಸಂಖ್ಯೆ: ಸಿಐ 40 ಐಎಪಿ (ಇ) 2021

## ಕರ್ನಾಟಕ ವಿಧಾನ ಸಭೆ

**ಮಾನ್ಯ ವಿಧಾನ ಸಭೆ ಸದಸ್ಯರು** : ಶ್ರೀ ಲಿಂಗೇಶ್ ಕೆ.ಎಸ್

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : **1103**

**ಉತ್ತರಿಸಬೇಕಾದ ದಿನಾಂಕ** : **05.02.2021**

| ಕ್ರಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಹಿಂದಿನ ಸರ್ಕಾರದ ಅವಧಿಯಲ್ಲಿ ಸಹಕಾರ ಬ್ಯಾಂಕುಗಳಲ್ಲಿ ಹಾಗೂ ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ರೈತರ ಬೆಳೆಸಾಲ ಮನ್ನಾ ಮಾಡಲಾಗಿದ್ದು, ಜಿಲ್ಲಾವಾರು ಬೆಳೆ ಸಾಲ ಮನ್ನಾ ಆದ ರೈತರ ಸಂಖ್ಯೆ ಹಾಗೂ ಹಣವೆಷ್ಟು; | **ಸಹಕಾರ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ಸಹಕಾರ ಸಂಘಗಳಲ್ಲಿ 2018-19 ನೇ ಸಾಲಿನ ರೂ.1.00 ಲಕ್ಷಗಳ ಸಾಲ ಮನ್ನಾ ಯೋಜನೆಯಡಿ 17,06,049 ರೈತರು ರೂ.7987.47 ಕೋಟಿಗಳ ಸಾಲ ಮನ್ನಾ ಮಾಡಲು ಅರ್ಹತೆ ಗುರುತಿಸಲಾಗಿದ್ದು, ಜಿಲ್ಲಾವಾರು ವಿವರವನ್ನು **ಅನುಬಂಧ-01** ರಲ್ಲಿ ನೀಡಲಾಗಿದೆ.<br>**ವಾಣಿಜ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ಹಿಂದಿನ ಸರ್ಕಾರದ ಅವಧಿಯಲ್ಲಿ ಶೆಡ್ಯೂಲ್ಡ್ ಕಮರ್ಶಿಯಲ್ ಮತ್ತು ಗ್ರಾಮೀಣ ಬ್ಯಾಂಕುಗಳಲ್ಲಿ ಬೆಳೆ ಸಾಲ ಮನ್ನಾ ಸೌಲಭ್ಯ ಪಡೆದ ರೈತರ ಸಂಖ್ಯೆ 9,22,673 ಹಾಗೂ ಮೊತ್ತ ರೂ.7,247.89 ಕೋಟಿಗಳಾಗಿದೆ. ಜಿಲ್ಲಾವಾರು ಮಾಹಿತಿ **ಅನುಬಂಧ-2** ರಲ್ಲಿ ನೀಡಲಾಗಿದೆ. |
| ಆ) | ಈ ಪೈಕಿ ಸರ್ಕಾರದಿಂದ ಎಷ್ಟು ಜನ ರೈತರಿಗೆ ಎಷ್ಟು ಮೊತ್ತದ ಹಣವನ್ನು ಜಿಲ್ಲಾ ಬ್ಯಾಂಕುಗಳು/ರಾಷ್ಟ್ರೀಕೃತ ಬ್ಯಾಂಕುಗಳಿಗೆ ಇದುವರೆಗೂ ಬಿಡುಗಡೆ ಮಾಡಲಾಗಿದೆ: (ಜಿಲ್ಲಾವಾರು ಸಂಪೂರ್ಣ ಮಾಹಿತಿ ನೀಡುವುದು) | **ಸಹಕಾರ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ಈ ಪೈಕಿ ಸಹಕಾರ ಬ್ಯಾಂಕುಗಳಿಗೆ 1648820 ರೈತರಿಗೆ ಸಂಬಂಧಿಸಿದಂತೆ ರೂ.7692.33 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. ಜಿಲ್ಲಾವಾರು ವಿವರವನ್ನು **ಅನುಬಂಧ-01** ರಲ್ಲಿ ನೀಡಲಾಗಿದೆ.<br>**ವಾಣಿಜ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ಹಿಂದಿನ ಸರ್ಕಾರದ ಅವಧಿಯಲ್ಲಿ ಶೆಡ್ಯೂಲ್ಡ್ ಕಮರ್ಶಿಯಲ್ ಮತ್ತು ಗ್ರಾಮೀಣ ಬ್ಯಾಂಕುಗಳಲ್ಲಿ ಬೆಳೆ ಸಾಲ ಮನ್ನಾ ಸೌಲಭ್ಯ ಪಡೆದ ರೈತರ ಸಂಖ್ಯೆ 9,22,673 ಹಾಗೂ ಮೊತ್ತ ರೂ.7,247.89 ಕೋಟಿಗಳಾಗಿದೆ. ಜಿಲ್ಲಾವಾರು ಮಾಹಿತಿ **ಅನುಬಂಧ-2** ರಲ್ಲಿ ನೀಡಲಾಗಿದೆ |
| ಇ) | ಜಿಲ್ಲಾವಾರು ಎಷ್ಟು ಜನ ರೈತರಿಗೆ ಎಷ್ಟು ಸಾಲ ಮನ್ನಾ ಹಣವನ್ನು ಇನ್ನೂ ಜಿಲ್ಲಾ ಬ್ಯಾಂಕುಗಳು/ರಾಷ್ಟ್ರೀಕೃತ ಬ್ಯಾಂಕುಗಳಿಗೆ ಬಿಡುಗಡೆ ಮಾಡಲು ಬಾಕಿ ಇದೆ; ಈವರೆವಿಗೂ ಹಣ ಬಿಡುಗಡೆ ಮಾಡದಿರಲು ಕಾರಣಗಳೇನು: (ಸಂಪೂರ್ಣ ಮಾಹಿತಿ ನೀಡುವುದು) | **ಸಹಕಾರ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>57,229 ರೈತರ ರೂ.295.14 ಕೊಟಿಗಳ ಸಾಲ ಮನ್ನಾ ಮೊತ್ತವನ್ನು ಸಹಕಾರ ಬ್ಯಾಂಕುಗಳಿಗೆ ಬಿಡುಗಡೆ ಮಾಡಲು ಬಾಕಿ ಇರುತ್ತದೆ. ಜಿಲ್ಲಾವಾರು ವಿವರವನ್ನು **ಅನುಬಂಧ-01** ರಲ್ಲಿ ನೀಡಲಾಗಿದೆ. |

| | | |
|---|---|---|
| | | ರೈತರು ಸಾಲ ಮನ್ನಾ ಘೋಷಣೆಯಾದ ನಂತರ ಹೊಸದಾಗಿ ಪಡಿತರ ಚೀಟಿ ಪಡೆದಿದ್ದು, ಈ ರೈತರ ಕುಟುಂಬದ ಸದಸ್ಯರನ್ನು ತಾಲ್ಲೂಕು ಸಮಿತಿಯಲ್ಲಿ ಗುರುತಿಸಿ ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂ ದಾಖಲೆಗಳ ಇಲಾಖೆಯಿಂದ ದಿ.02-11-2020 ರಂದು ರೈತರ ಹಸಿರು ಪಟ್ಟಿ ನೀಡಿದ್ದು, ಇದರ ಆಧಾರದ ಮೇಲೆ ಅನುದಾನ ಬಿಡುಗಡೆ ಮಾಡಲು ಪ್ರಸ್ತಾವನೆ ಸಲ್ಲಿಸಲಾಗಿದ್ದು, ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿರುತ್ತದೆ.<br><br>**ವಾಣಿಜ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ಉಳಿದ ರೈತರು ತಮ್ಮ ಆಧಾರ್, ರೇಷನ್ ಕಾರ್ಡ್ ಹಾಗೂ ಸರ್ವೆ ಸಂಖ್ಯೆಗಳನ್ನು ಸಲ್ಲಿಸಿದ ನಂತರ ನಿಯಮಾನುಸಾರ ಪರಿಶೀಲಿಸಿ, ಸಾಲ ಮನ್ನಾ ಪಾವತಿಸಲಾಗುವುದು. |
| ಈ) | ಬಾಕಿ ಇರುವ ಸಾಲದ ಮೊತ್ತವನ್ನು ರೈತರಿಗೆ ಬಿಡುಗಡೆ ಮಾಡಲು ಯಾವ ಕ್ರಮವನ್ನು ಸರ್ಕಾರದಿಂದ ಕೈಗೊಳ್ಳಲಾಗಿದೆ? (ಸಂಪೂರ್ಣ ಮಾಹಿತಿ ನೀಡುವುದು) | **ಸಹಕಾರ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br><br>2020-21 ನೇ ಸಾಲಿನಲ್ಲಿ ಸಾಲ ಮನ್ನಾ ಯೋಜನೆ ಲೆಕ್ಕ ಶೀರ್ಷಿಕೆಯಡಿಯಲ್ಲಿ ರೂ.361.00 ಕೋಟಿಗಳ ಆಯವ್ಯಯ ಅವಕಾಶ ಕಲ್ಪಿಸಲಾಗಿದೆ. ಸದ್ಯ ಅರ್ಹವಿರುವ ರೈತರಿಗೆ ರೂ.295.14 ಕೋಟಿಗಳನ್ನು ಬಿಡುಗಡೆ ಮಾಡಲು ಪ್ರಸ್ತಾವನೆ ಸಲ್ಲಿಕೆಯಾಗಿದ್ದು, ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿರುತ್ತದೆ.<br><br>**ವಾಣಿಜ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ಉಳಿದ ರೈತರು ತಮ್ಮ ಆಧಾರ್, ರೇಷನ್ ಕಾರ್ಡ್ ಹಾಗೂ ಸರ್ವೆ ಸಂಖ್ಯೆಗಳನ್ನು ಸಲ್ಲಿಸಿದ ನಂತರ ನಿಯಮಾನುಸಾರ ಪರಿಶೀಲಿಸಿ, ಸಾಲ ಮನ್ನಾ ಪಾವತಿಸಲಾಗುವುದು. |

ಸಂಖ್ಯೆ: ಸಿಒ 28 ಸಿಎಲ್ಎಸ್ 2021

(ಎಸ್.ಟಿ. ಸೋಮಶೇಖರ್)
ಸಹಕಾರ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ವಿಧಾನ ಸಭೆ ಸದಸ್ಯರು | : | ಶ್ರೀ ರಾಜೀವ್ .ಪಿ |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1195 |
| ಉತ್ತರಿಸಬೇಕಾದ ದಿನಾಂಕ | : | 05.02.2021 |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸಹಕಾರ ಇಲಾಖೆಯಿಂದ ಕಳೆದ ಸಾಲುಗಳಲ್ಲಿ ಸಾಲ ಮನ್ನಾ ಯೋಜನೆಯಡಿಯಲ್ಲಿ ಸಾಲ ಮನ್ನಾ ಮಾಡಲು ಬೆಳಗಾವಿ ಜಿಲ್ಲೆಯ ವಿವಿಧ ಸಹಕಾರ ಸಂಸ್ಥೆಗಳಿಗೆ ಸಹಾಯಧನ ಬಿಡುಗಡೆ ಮಾಡಲಾಗಿದೆಯೇ; (ತಾಲ್ಲೂಕುವಾರು ವಿವರದೊಂದಿಗೆ ಮಾಹಿತಿ ಒದಗಿಸುವುದು) | ಬೆಳಗಾವಿ ಜಿಲ್ಲೆಯಲ್ಲಿ 2018-19ನೇ ಸಾಲಿನ ಸಾಲಮನ್ನಾ ಯೋಜನೆಯಡಿ ಇಲ್ಲಿಯವರೆಗೆ 2,65,690 ರೈತರಿಗೆ ರೂ.1050.08 ಕೋಟಿಗಳ ಸಾಲ ಮನ್ನಾ ಮಾಡಲು ಅರ್ಹತೆ ಗುರುತಿಸಲಾಗಿದ್ದು, ಈ ಪೈಕಿ 2,60,330 ರೈತರ ಖಾತೆಗಳಿಗೆ ರೂ.1022.09 ಕೋಟಿಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ. ಉಳಿದ 2033 ಜನ ರೈತರ ಸಾಲ ಮನ್ನಾ ಅರ್ಹತೆ ಗುರುತಿಸಲು ಬಾಕಿ ಇರುತ್ತದೆ. ತಾಲ್ಲೂಕುವಾರು ವಿವರ ಈ ಕೆಳಗಿನಂತಿರುತ್ತದೆ. |

| ಕ್ರ. ಸಂ | ತಾಲ್ಲೂಕಿನ ಹೆಸರು | ಸಾಲ ಮನ್ನಾ ಯೋಜನೆಯಲ್ಲಿ ಇದುವರೆಗೆ ಗುರುತಿಸಿದ ಅರ್ಹ ರೈತರ ವಿವರ | | ಸಾಲ ಮನ್ನಾ ಯೋಜನೆಯಲ್ಲಿ ಬಿಡುಗಡೆ ಮಾಡಿದ ಅನುದಾನ | | ಅರ್ಹತೆ ಗುರುತಿಸಲು ಬಾಕಿ ಇರುವ ರೈತರ ವಿವರ |
|---|---|---|---|---|---|---|
| | | ರೈತರ ಸಂಖ್ಯೆ | ಸಾಲ ಮನ್ನಾ ಮೊತ್ತ | ರೈತರ ಸಂಖ್ಯೆ | ಸಾಲ ಮನ್ನಾ ಮೊತ್ತ | |
| 1 | ಅಥಣಿ | 39129 | 161.96 | 38380 | 157.94 | 245 |
| 2 | ಬೈಲಹೊಂಗಲ | 26912 | 111.92 | 26281 | 108.47 | 284 |
| 3 | ಬೆಳಗಾವಿ | 7297 | 21.62 | 7198 | 21.23 | 78 |
| 4 | ಚಿಕ್ಕೋಡಿ | 46013 | 185.95 | 45772 | 184.78 | 252 |
| 5 | ಗೋಕಾಕ್ | 35467 | 135.17 | 34270 | 128.86 | 188 |
| 6 | ಹುಕ್ಕೇರಿ | 33595 | 127.46 | 32919 | 123.78 | 178 |
| 7 | ಖಾನಾಪುರ | 13904 | 43.63 | 13823 | 43.27 | 68 |
| 8 | ರಾಮದುರ್ಗ | 15904 | 54.03 | 15128 | 50.64 | 180 |
| 9 | ರಾಯಬಾಗ್ | 24894 | 107.62 | 24612 | 105.99 | 287 |
| 10 | ಸವದತ್ತಿ | 22575 | 100.71 | 21947 | 97.13 | 273 |
| | ಒಟ್ಟು | **2,65,690** | **1050.08** | **2,60,330** | **1022.09** | **2033** |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಆ) | ಕುಡಚಿ ಮತಕ್ಷೇತ್ರದ ಹಾರೂಗೇರಿಯಲ್ಲಿ ಸಾಲ ಮನ್ನಾ ಯೋಜನೆಯಡಿಯಲ್ಲಿ PKPS ಕೃಷಿ ಪತ್ತಿನ ಸಹಕಾರಿ ಸಂಘದಿಂದ ಆಯ್ಕೆಯಾದ ಫಲಾನುಭವಿಗಳೆಷ್ಟು; (ಪೂರ್ಣ ವಿವರ ನೀಡುವುದು) | ಬೆಳಗಾವಿ ಜಿಲ್ಲೆಯ ಕುಡಚಿ ಮತಕ್ಷೇತ್ರದ ಹಾರೂಗೇರಿ ವ್ಯಾಪ್ತಿಯಲ್ಲಿ 5 ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಕಾರ್ಯನಿರ್ವಹಿಸುತ್ತಿದ್ದು, ಈ ಸಂಘಗಳಲ್ಲಿ ರೈತರ ಸಾಲಮನ್ನಾ ಯೋಜನೆಯಡಿಯಲ್ಲಿ 1159 ರೈತರು ದಿ.10.07.2018ಕ್ಕೆ ಬೆಳೆ ಸಾಲ ಹೊರಬಾಕಿ ಹೊಂದಿರುತ್ತಾರೆ. ಸಂಘವಾರು ವಿವರವನ್ನು ಅನುಬಂಧದಲ್ಲಿ ನೀಡಲಾಗಿದೆ. |

| | | |
|---|---|---|
| ಇ) | ಹಾರೂಗೇರಿಯ, ಕೃಷಿ ಪತ್ತಿನ ಸಹಕಾರಿ ಸಂಘದಿಂದ ಆಯ್ಕೆಯಾದ ಫಲಾನುಭವಿಗಳಿಗೆ ಇಲ್ಲಿಯವರೆಗೆ ಸಾಲ ಮನ್ನಾ ಮಾಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಹೌದು,<br>ಸಾಲ ಮನ್ನಾ ಯೋಜನೆಯಡಿ ದಿ:10.07.2018ಕ್ಕೆ ಇದ್ದಂತೆ ಹೊರಬಾಕಿ ಹೊಂದಿರುವ 169 ರೈತರಿಗೆ ಸಾಲ ಮನ್ನಾ ಆಗಿರುವುದಿಲ್ಲ. |
| ಈ) | ಹಾಗಿದ್ದಲ್ಲಿ, ಯಾವ ಕಾರಣಕ್ಕಾಗಿ ಆಯ್ಕೆಯಾದ ಫಲಾನುಭವಿಗಳಿಗೆ ಇಲ್ಲಿಯವರೆಗೆ ಸಾಲ ಮಾಡಿರುವುದಿಲ್ಲ. ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮವೇನು; (ಸಂಪೂರ್ಣ ವಿವರ ನೀಡುವುದು) | ಸಾಲ ಮನ್ನಾ ಯೋಜನೆಯಲ್ಲಿ ದಿ.10.07.2018ಕ್ಕೆ ಬೆಳೆ ಸಾಲದ ಹೊರಬಾಕಿ ಹೊಂದಿರುವ ಸಾಲ ಮನ್ನಾ ಸಿಗದ 169 ರೈತರ ಪೈಕಿ 68 ರೈತರು ಆಧಾರ್, ರೇಷನ್ ಕಾರ್ಡ್ ಮತ್ತು ಆರ್.ಟಿ.ಸಿ.ಗಳನ್ನು ನೀಡದೇ ಇರುವುದರಿಂದ ಸಹಕಾರ ಸಂಘಗಳು ಈ ರೈತರ ಅರ್ಹತೆಯನ್ನು ತಿರಸ್ಕರಿಸಿರುತ್ತವೆ.<br>ಒಬ್ಬ ರೈತನ ಆಧಾರ್ ದಾಖಲೆ ಚಾಲ್ತಿಯಲ್ಲಿ ಇಲ್ಲದೇ ಇದ್ದು, 3 ಜನ ರೈತರ ಪಹಣಿಗಳಲ್ಲಿನ ಹೆಸರು ಸಾಲಗಾರರ ಹೆಸರಿನೊಂದಿಗೆ ತಾಳೆಯಾಗದೇ ಇರುವುದರಿಂದ, ಇವುಗಳನ್ನು ಸರಿಪಡಿಸಲು ಸಹಕಾರ ಸಂಘಗಳಿಗೆ ತಿಳಿಸಲಾಗಿದೆ.<br>ಉಳಿದ 97 ರೈತರು ದಿ.10.07.2018ರ ನಂತರ ಹೊಸದಾಗಿ ರೇಷನ್ ಕಾರ್ಡ್‌ಮಾಡಿಸಿದ್ದು, ಈ ರೇಷನ್ ಕಾರ್ಡ್‌ಗಳಲ್ಲಿ ಒಬ್ಬನೇ ಸದಸ್ಯನಿರುವುದರಿಂದ ಮತ್ತು ನಂತರ ಪಡಿತರ ಚೀಟಿಯಲ್ಲಿ ಸಣ್ಣಪುಟ್ಟ ಬದಲಾವಣೆ ಮಾಡಿರುವುದರಿಂದ ಇವರ ಅರ್ಹತೆಯನ್ನು ಗುರುತಿಸುವ ಪ್ರಕ್ರಿಯೆ ಚಾಲನೆಯಲ್ಲಿರುತ್ತದೆ. |
| ಉ) | ಯಾವ ಕಾಲಮಿತಿಯೊಳಗೆ ಆಯ್ಕೆಯಾದ ರೈತರಿಗೆ ಸಾಲ ಮನ್ನಾ ಮಾಡಲಾಗುವುದು? | ಮಾರ್ಚ್ 2021 ರೊಳಗೆ ಸಾಲ ಮನ್ನಾ ಯೋಜನೆಯಲ್ಲಿ ಅರ್ಹತೆ ಗುರುತಿಸಿ ನಿಯಮಾನುಸಾರ ಕ್ರಮವಹಿಸಲಾಗುವುದು. |

**ಸಂಖ್ಯೆ: ಸಿಒ 34 ಸಿಎಲ್‌ಎಸ್ 2021**

ಎಸ್.ಟಿ. ಸೋಮಶೇಖರ್

**(ಎಸ್.ಟಿ. ಸೋಮಶೇಖರ್)**

**ಸಹಕಾರ ಸಚಿವರು**

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1069

ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ಮಂಜುನಾಥ ಹೆಚ್.ಪಿ.(ಹುಣಸೂರು)

ಉತ್ತರಿಸಬೇಕಾದ ದಿನಾಂಕ : 05.02.2021

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ ವತಿಯಿಂದ ಪ್ರತಿ ನ್ಯಾಯ ಬೆಲೆ ಅಂಗಡಿಗಳಲ್ಲಿ E.K.Y.C ಯನ್ನು ಅಳವಡಿಸುವುದನ್ನು ಕಡ್ಡಾಯ ಮಾಡಲಾಗಿದೆಯೇ; (ಮಾಹಿತಿ ನೀಡುವುದು) | ಹೌದು. |
| ಆ | ಹಾಗಿದ್ದಲ್ಲಿ, E.K.Y.C ಯನ್ನು ಅಳವಡಿಸಲು ಸರ್ವರ್ ಸಮಸ್ಯೆ ಇರುವುದರಿಂದ ನ್ಯಾಯಬೆಲೆ ಅಂಗಡಿಗಳಲ್ಲಿ ಪಡಿತರವನ್ನು ಸಕಾಲದಲ್ಲಿ ವಿತರಿಸಲು ಸಾಧ್ಯವಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಸಂಪೂರ್ಣ ವಿವರ ನೀಡುವುದು) | ಹೌದು.<br>ಪ್ರತಿ ತಿಂಗಳ 1 ರಿಂದ 10 ತಾರೀಖಿನವರೆಗೆ ಪಡಿತರ ಚೀಟಿದಾರರಿಂದ ಇ-ಕೆವೈಸಿ ಮಾಹಿತಿಯನ್ನು ಪಡೆದುಕೊಳ್ಳಲಾಗುತ್ತಿದೆ. 11 ರಿಂದ 30 ನೇ ತಾರೀಖಿನವರೆಗೆ ಪಡಿತರ ಫಲಾನುಭವಿಗಳಿಗೆ ಆಹಾರಧಾನ್ಯಗಳನ್ನು ವಿತರಿಸಲಾಗುತ್ತಿದೆ. |
| ಇ | ಬಂದಿದ್ದಲ್ಲಿ, ಈ ಸರ್ವರ್ ಸಮಸ್ಯೆಯನ್ನು ಸರಿಪಡಿಸಲು ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | ಆಹಾರ ಇಲಾಖೆಯು ಸರ್ವರ್‌ಗಳನ್ನು ಎನ್.ಐ.ಸಿ ಸಂಸ್ಥೆಯಲ್ಲಿ ನಿರ್ವಹಿಸಲಾಗುತ್ತಿದ್ದು, ಆಹಾರ ಇಲಾಖೆಯ ಸರ್ವರ್ ಹಾಗೂ ಪಡಿತರ ಚೀಟಿಯ ದತ್ತಾಂಶವನ್ನು ರಾಜ್ಯ ದತ್ತಾಂಶ (KSDC) ಕೇಂದ್ರಕ್ಕೆ ವರ್ಗಾಯಿಸಲಾಗುತ್ತಿದೆ.<br>ಆಹಾರ ಇಲಾಖೆಯು ಹೊಂದಿರುವ ಸರ್ವರ್‌ಗಳ ಸಂಖ್ಯೆ ಹಾಗೂ ಸರ್ವರ್‌ಗಳ ಕ್ಷಮತೆಯನ್ನು ಹೆಚ್ಚಿಸಲು ಕ್ರಮವಹಿಸಲಾಗಿದೆ. |

ಆನಾಸ 44 ಡಿಆರ್‌ಎ 2021 (ಇ-ಆಫೀಸ್)

(ಉಮೇಶ.ವಿ.ಕತ್ತಿ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

**ಕರ್ನಾಟಕ ವಿಧಾನ ಸಭೆ**

ಮಾನ್ಯ ವಿಧಾನ ಸಭೆಯ ಸದಸ್ಯರು : ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1140

ಉತ್ತರಿಸಬೇಕಾದ ದಿನಾಂಕ : 05.02.2021

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆ, ಕುಶಾಲನಗರದ ಬಸವನಹ್ಳಿ ಲ್ಯಾಂಪ್ ಸೊಸೈಟಿಯಲ್ಲಿ ಹಣ ದುರುಪಯೋಗವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ದುರುಪಯೋಗ ಆಗಿರುವ ಹಣ ಎಷ್ಟು; ಸದರಿ ಹಣ ವಸೂಲಾತಿಗೆ ಸರ್ಕಾರ ತೆಗೆದುಕೊಂಡ ಕ್ರಮವೇನು; (ಪೂರ್ಣ ವಿವರ ನೀಡುವುದು) | ಹೌದು.<br><br>2018-19ನೇ ಸಾಲಿನ ಲೆಕ್ಕ ಪರಿಶೋಧನೆಯನ್ವಯ ರೂ.10,20,380-00 ಗಳು ಹಾಗೂ 2019-20ನೇ ಸಾಲಿನ ರೂ.13,66,475-00 ಗಳು ಒಟ್ಟು ರೂ.23,86,855-00 ಗಳು ಹಣ ದುರುಪಯೋಗವಾಗಿರುವುದು ಕಂಡು ಬಂದಿರುತ್ತದೆ.<br><br>ಹಣ ದುರುಪಯೋಗವಾಗಿರುವ ಮೊತ್ತವನ್ನು ಕಾನೂನು ರೀತ್ಯಾ ವಸೂಲಾತಿಗೆ ಕ್ರಮವಿಡುವಂತೆ ಸಹಕಾರ ಸಂಘದ ಆಡಳಿತ ಮಂಡಳಿಯವರಿಗೆ ಸಹಕಾರ ಸಂಘಗಳ ಉಪನಿಬಂಧಕರು, ಕೊಡಗು ಜಿಲ್ಲೆ, ಮಡಿಕೇರಿ ಇವರು ನಿರ್ದೇಶನ ನೀಡಿರುತ್ತಾರೆ. |
| ಆ) | ಬಸವನಹ್ಳಿ ಲ್ಯಾಂಪ್ ಸೊಸೈಟಿಗೆ ಲೆಕ್ಕವನ್ನು ಮರು ಪರಿಶೀಲನೆಗೆ ಒಳಪಡಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಲೆಕ್ಕಪರಿಶೋಧಕರು ಪರಿಶೀಲನ ನಡೆಸಲು ವಿಳಂಬ ನೀತಿ ಅನುಸರಿಸುತ್ತಿರುವುದಕ್ಕೆ ಸರ್ಕಾರದ ವತಿಯಿಂದ ಯಾವ ಕ್ರಮ ಕೈಗೊಳ್ಳಾಗಿದೆ; (ಪೂರ್ಣ ವಿವರ ನೀಡುವುದು) | ಲ್ಯಾಂಪ್ಸ್ ಸಹಕಾರ ಸಂಘದ ಲೆಕ್ಕವನ್ನು ಮರುಲೆಕ್ಕ ಪರಿಶೀಲನೆಗೆ ಒಳಪಡಿಸಿರುವುದಿಲ್ಲ.<br><br>2018-19 ಹಾಗೂ 2019-20ನೇ ಸಾಲಿನ ಸಾಮಾನ್ಯ ಲೆಕ್ಕಪರಿಶೋಧನೆಯಾಗಿದ್ದು, ಲೆಕ್ಕ ಪರಿಶೋಧನೆಯು ದಿನಾಂಕ:08.12.2020ರಂದು ಪೂರ್ಣಗೊಂಡಿದ್ದು, ದಿನಾಂಕ:10.12.2020 ರಂದು ವರದಿಯನ್ನು ಉಪ ನಿರ್ದೇಶಕರು, ಸಹಕಾರ ಸಂಘಗಳ ಲೆಕ್ಕಪರಿಶೋಧನೆ ಕೊಡಗು ಜಿಲ್ಲೆ ಇವರು ಬಿಡುಗಡೆಗೊಳಿಸಿರುತ್ತಾರೆ. |
| ಇ) | ಸರ್ಕಾರದ ಸಾಲ ಮನ್ನಾ ಯೋಜನೆಯಿಂದ ಸಹಕಾರ ಸಂಘಗಳಲ್ಲಿ ಕೆಲವು ರೈತರಿಗೆ ಸಾಲ ಮನ್ನಾ ಯೋಜನೆಯ ಸೌಲಭ್ಯ ಇನ್ನೂ ದೊರೆಯದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಯೋಜನೆಯಡಿ ಬಾಕಿ ಇರುವ ರೈತರ ಸಾಲವನ್ನು ಮನ್ನಾ ಮಾಡಲಾಗುತ್ತದೆಯೇ? ( ಪೂರ್ಣ ವಿವರ ನೀಡುವುದು) | ಹೌದು.<br><br>ಸಹಕಾರ ಸಂಘಗಳಲ್ಲಿ 2018-19ನೇ ಸಾಲಿನ ರೂ.1.00 ಲಕ್ಷಗಳ ಸಾಲ ಮನ್ನಾ ಯೋಜನೆಯಡಿಯಲ್ಲಿ ಸಹಕಾರ ಸಂಘಗಳು ವಿವಿಧ ಕಾರಣಗಳಿಗೆ ರಿಜೆಕ್ಟ್ ಮಾಡಿದ ನಂತರ ತಂತ್ರಾಂಶದಲ್ಲಿ 1768105 ರೈತರ ಮಾಹಿತಿಯನ್ನು ಅಳವಡಿಸಿರುತ್ತಾರೆ. ಇದರಲ್ಲಿ 1706049 ರೈತರು ರೂ.7987.47 ಕೋಟಿಗಳ ಸಾಲ ಮನ್ನಾ ಮಾಡಲು ಅರ್ಹತೆ ಗುರುತಿಸಲಾಗಿದ್ದು, ಈ ಪೈಕಿ 1648820 ರೈತರಿಗೆ ಸಂಬಂಧಿಸಿದಂತೆ ರೂ.7692.33 |

| | | |
|---|---|---|
| | | ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. ಜಿಲ್ಲಾವಾರು ವಿವರವನ್ನು '**ಅನುಬಂಧ**' ದಲ್ಲಿ ನೀಡಲಾಗಿದೆ. 62056 ರೈತರ ಅರ್ಹತೆ ಗುರುತಿಸಿ ಸಾಲ ಮನ್ನಾ ಮಾಡಲು ಬಾಕಿ ಇರುತ್ತದೆ.<br><br>ಅರ್ಹತೆ ಗುರುತಿಸಲು ಬಾಕಿ ಇರುವ 62056 ರೈತರ ಪೈಕಿ, 13020 ರೈತರ ಸಾಲದ ಮತ್ತು ವೈಯಕ್ತಿಕ ಮಾಹಿತಿಯನ್ನು ಸಹಕಾರ ಸಂಘಗಳು ಸಾಲ ಮನ್ನಾ ತಂತ್ರಾಂಶದಲ್ಲಿ ತಪ್ಪಾಗಿ ಅಳವಡಿಸಿದ್ದು, ಈ ಮಾಹಿತಿಯನ್ನು ಸಂಬಂಧಿಸಿದ ಸಹಕಾರ ಸಂಘಗಳು ಸರಿಪಡಿಸಲು ತಂತ್ರಾಂಶದಲ್ಲಿ ಅವಕಾಶ ಕಲ್ಪಿಸಲು ಕ್ರಮವಹಿಸಲಾಗಿದೆ.<br><br>ಉಳಿದ 49036 ರೈತರ ಆಧಾರ್, ರೇಷನ್ ಕಾರ್ಡ್ ಮತ್ತು ಆರ್‌ಟಿಸಿ ದಾಖಲೆಗಳು ಸಂಬಂಧಪಟ್ಟ ಇಲಾಖೆಗಳ ತಂತ್ರಾಂಶದೊಂದಿಗೆ ಮತ್ತು ಈ ರೈತರು ಪಡೆದ ಸಾಲದ ಮಾಹಿತಿ ಸಂಘಗಳ ದಾಖಲೆಗಳೊಂದಿಗೆ ತಾಳೆಯಾಗದೇ ಇದ್ದು, ಇವುಗಳನ್ನು ಪರಿಶೀಲಿಸಲಾಗುತ್ತಿದ್ದು, ನಂತರ ಅರ್ಹ ರೈತರ ಖಾತೆಗಳಿಗೆ ಬಿಡುಗಡೆ ಮಾಡಲಾಗುವುದು. |

**ಕಡತ ಸಂಖ್ಯೆ: ಸಿಒ 09 ಪಿಎಂಸಿ 2021**

ಎಸ್-ಟಿ. ಸೋಮಶೇಖರ್

**(ಎಸ್. ಟಿ. ಸೋಮಶೇಖರ್)**
**ಸಹಕಾರ ಸಚಿವರು.**

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1190

ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ರಾಜೇಗೌಡ ಟಿ.ಡಿ. (ಶೃಂಗೇರಿ)

ಉತ್ತರಿಸಬೇಕಾದ ದಿನಾಂಕ : 05.02.2021

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕೇಂದ್ರ ಸರ್ಕಾರದ ಬಹುನಿರೀಕ್ಷಿತ ಮತ್ತು ಮಹತ್ವಾಕಾಂಕ್ಷಿಯ ಯೋಜನೆ ಒನ್ ನೇಷನ್, ಒನ್ ರೇಷನ್ ಕಾರ್ಡ್ ಯೋಜನೆ ರಾಜ್ಯದಲ್ಲಿ ಜಾರಿಯಾಗಿದೆಯೇ; ಈ ಯೋಜನೆಯ ಉದ್ದೇಶಗಳೇನು; ಅನುಕೂಲಗಳೇನು;(ವಿವರ ನೀಡುವುದು) | ಒನ್ ನೇಷನ್, ಒನ್ ರೇಷನ್ ಕಾರ್ಡ್ ಯೋಜನೆಯನ್ನು ರಾಜ್ಯದಲ್ಲಿ ಜಾರಿಗೊಳಿಸಲಾಗಿದೆ. ಈ ಯೋಜನೆಯ ಅನುಸಾರ ರಾಷ್ಟ್ರದ ಯಾವುದೇ ರಾಜ್ಯದಲ್ಲಿನ ಪಡಿತರ ಚೀಟಿದಾರರು ನಮ್ಮ ರಾಜ್ಯದಲ್ಲಿ ಪಡಿತರ ಪಡೆಯಬಹುದು. ಅಥವಾ ನಮ್ಮ ರಾಜ್ಯದ ಪಡಿತರ ಚೀಟಿದಾರರು ಒನ್ ನೇಷನ್, ಒನ್ ರೇಷನ್ ಕಾರ್ಡ್ ಯೋಜನೆಯನ್ನು ಅಳವಡಿಸಿಕೊಂಡಿರುವ ರಾಷ್ಟ್ರದ ಇತರೆ ರಾಜ್ಯಗಳಲ್ಲಿ ಪಡಿತರ ಪಡೆಯಬಹುದಾಗಿರುತ್ತದೆ. ಹಾಗೂ ರಾಜ್ಯದಲ್ಲಿನ ಪಡಿತರ ಚೀಟಿದಾರರು ರಾಜ್ಯದ ಯಾವುದೇ ನ್ಯಾಯಬೆಲೆ ಅಂಗಡಿಯಲ್ಲಿ ಪಡಿತರ ಪಡೆಯಬಹುದು. ಅದರಂತೆ ಹೊರ ರಾಜ್ಯದ ಪಡಿತರ ಚೀಟಿದಾರರು ಕರ್ನಾಟಕದ ವಿವಿಧ ಭಾಗದ ನ್ಯಾಯಬೆಲೆ ಅಂಗಡಿಗಳಲ್ಲಿ ಪಡಿತರ ಪಡೆಯುವ ಪೋರ್ಟಬಿಲಿಟಿ ಯೋಜನೆಯನ್ನು ಜಾರಿಗೊಳಿಸಲಾಗಿದೆ. |
| ಆ | ಈ ಯೋಜನೆಯ ವ್ಯಾಪ್ತಿಯಲ್ಲಿ ರಾಜ್ಯದ ಎಷ್ಟು ಜನರಿಗೆ ಉಚಿತ ಪಡಿತರ ದೊರಕಲಿದೆ? (ವಿವರ ನೀಡುವುದು) | ಅನ್ನಭಾಗ್ಯ ಯೋಜನೆಯಡಿ ರಾಜ್ಯದಲ್ಲಿರುವ 1,17,00,391 ಆದ್ಯತಾ ಪಡಿತರ ಚೀಟಿಯ 3,90,56,550 ಮತ್ತು 10,92,292 ಅಂತ್ಯೋದಯ ಪಡಿತರ ಚೀಟಿಯ 46,45,263 ಪಡಿತರ ಫಲಾನುಭವಿಗಳಿಗೆ ಉಚಿತವಾಗಿ ಪಡಿತರವನ್ನು ವಿತರಿಸಲಾಗುತ್ತಿದೆ. |

ಆನಾಸ 52 ಡಿಆರ್‌ಎ 2021 (ಇ-ಆಫೀಸ್)

(ಉಮೇಶ ವಿ. ಕತ್ತಿ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1047

ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ಕುಮಾರ್ ಬಂಗಾರಪ್ಪ ಎಸ್ (ಸೊರಬ)

ಉತ್ತರಿಸಬೇಕಾದ ದಿನಾಂಕ : 05.02.2021

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಗ್ರಾಮೀಣ ಮತ್ತು ನಗರ ವ್ಯಾಪ್ತಿಯಲ್ಲಿ ಪಡಿತರ ವ್ಯವಸ್ಥೆಯಲ್ಲಿ ಅವಲಂಬಿಸಿರುವ ಬಡವರಿಗೆ ಸರ್ಕಾರದ ಮಾರ್ಗಸೂಚಿಯಂತೆ ಪಡಿತರ ದೊರೆಯಲು ಆಹಾರ ಸುರಕ್ಷಾ ಸಮಿತಿಯ ಸಭೆಗಳು ನಡೆಯುವುದು ಅತಿ ಮುಖ್ಯ ಎನ್ನುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆಯನ್ವಯ ನ್ಯಾಯಬೆಲೆ ಅಂಗಡಿಗಳ ಹಂತದಲ್ಲಿ ಆಹಾರ ಜಾಗೃತಿ ಸಮಿತಿಗಳನ್ನು ರಚಿಸಲಾಗಿದೆ. |
| ಆ | ಬಂದಿದ್ದಲ್ಲಿ, ಕಡ್ಡಾಯವಾಗಿ ಆಹಾರ ಸುರಕ್ಷಾ ಸಮಿತಿಯ ಸಭೆಗಳನ್ನು ನಡೆಸಲು ಸುರಕ್ಷಾ ಸಮಿತಿಯನ್ನು ಸಂಬಂಧಪಟ್ಟ ಗ್ರಾಮದಲ್ಲಿ ಸಾರ್ವಜನಿಕವಾಗಿ ಪ್ರಕಟಿಸಲು ಹಾಗೂ ಪ್ರತಿ ತಿಂಗಳು ಸರಬರಾಜಾದ ಆಹಾರ ಪಡಿತರವನ್ನು ನೋಟಿಸ್ ಬೋರ್ಡ್‌ನಲ್ಲಿ ಪ್ರಕಟಿಸಲು ಸರ್ಕಾರದ ಯಾವ ರೀತಿ ಕ್ರಮ ಜರುಗಿಸಿದೆ ? (ವಿವರ ನೀಡುವುದು) | ನ್ಯಾಯಬೆಲೆ ಅಂಗಡಿಗಳ ಮುಂದೆ ಜಾಗೃತಿ ಸಮಿತಿಯ ಸದಸ್ಯರುಗಳ ವಿವರಗಳನ್ನು ಪ್ರಕಟಿಸಿ ಪ್ರತಿ ತಿಂಗಳ 7 ನೇ ತಾರಿಖಿನಂದು ಜಾಗೃತಿ ಸಮಿತಿಯ ಸಭೆಯನ್ನು ನಡೆಸಲಾಗುತ್ತಿದೆ. ನ್ಯಾಯಬೆಲೆ ಅಂಗಡಿಗೆ ಸರಬರಾಜಾಗುವ ಆಹಾರಧಾನ್ಯಗಳ ದಾಸ್ತಾನು ಹಾಗೂ ಲಭ್ಯವಿರುವ ದಾಸ್ತಾನಿನ ಮಾಹಿತಿಯನ್ನು ಸೂಚನಾ ಫಲಕದಲ್ಲಿ ಪ್ರಕಟಿಸಲಾಗುತ್ತಿದೆ. |

ಆನಾಸ 38 ಡಿಆರ್‌ಎ 2021 (ಇ-ಆಫೀಸ್)

(ಉಮೇಶ.ವಿ.ಕತ್ತಿ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

<u>ಕರ್ನಾಟಕ ವಿಧಾನ ಸಭೆ</u>

**ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ನಿರಂಜನ್ ಕುಮಾರ್ ಸಿ.ಎಸ್**

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1057**

**ಉತ್ತರಿಸಬೇಕಾದ ದಿನಾಂಕ : 05.02.2021**

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಗುಂಡ್ಲುಪೇಟೆ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿರುವ ಕೃಷಿ ಪತ್ತಿನ ಸಹಕಾರ ಸಂಘಗಳೆಷ್ಟು; ಇದರಲ್ಲಿ ಎಷ್ಟು ಸಂಘಗಳಿಗೆ ಸ್ವಂತ ಕಟ್ಟಡವಿದೆ; ಎಷ್ಟು ಸಂಘಗಳಿಗೆ ಸ್ವಂತ ಕಟ್ಟಡವಿರುವುದಿಲ್ಲ; (ಸಂಪೂರ್ಣ ವಿವರ ನೀಡುವುದು) | ಗುಂಡ್ಲುಪೇಟೆ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಒಟ್ಟು39 ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಕಾರ್ಯನಿರ್ವಹಿಸುತ್ತಿದ್ದು, ಈ ಸಂಘಗಳ ಪೈಕಿ 32 ಸಹಕಾರ ಸಂಘಗಳಿಗೆ ಸ್ವಂತ ಕಟ್ಟಡವಿದ್ದು, 07 ಸಹಕಾರ ಸಂಘಗಳಿಗೆ ಸ್ವಂತ ಕಟ್ಟಡ ಇರುವುದಿಲ್ಲ. ವಿವರ ಅನುಬಂಧದಲ್ಲಿ ನೀಡಲಾಗಿದೆ. |
| (ಆ) | ಈ ಕ್ಷೇತ್ರದ ವ್ಯಾಪ್ತಿಯಲ್ಲಿ ಕೃಷಿ ಪತ್ತಿನ ಸಹಕಾರ ಸಂಘಗಳಿಗೆ ಹೊಸದಾಗಿ ಸ್ವಂತ ಕಟ್ಟಡ ನಿರ್ಮಾಣಕ್ಕೆ ಅನುದಾನ ಮಂಜೂರಾತಿಗಾಗಿ ಸಲ್ಲಿಸಿರುವ ಪ್ರಸ್ತಾವನೆ ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲ್ಲ. |
| (ಇ) | ಬಂದಿದ್ದಲ್ಲಿ, ಯಾವಾಗ ಅನುದಾನ ಮಂಜೂರು ಮಾಡಲಾಗುವುದು? (ಸಂಪೂರ್ಣ ವಿವರ ನೀಡುವುದು) | ಉದ್ಭವಿಸುವುದಿಲ್ಲ. |

**ಸಂಖ್ಯೆ: ಸಿಒ 26 ಸಿಎಲ್ಎಸ್ 2021**

(ಎಸ್.ಟಿ. ಸೋಮಶೇಖರ್)
ಸಹಕಾರ ಸಚಿವರು



# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1200 |
| ಸದಸ್ಯರ ಹೆಸರು | : | ಶ್ರೀಮತಿ ಲಕ್ಷ್ಮೀ ಆರ್. ಹೆಬ್ಬಾಳ್ಕರ್ (ಬೆಳಗಾವಿ ಗ್ರಾಮಾಂತರ) |
| ಉತ್ತರಿಸುವ ದಿನಾಂಕ | : | 05/02/2021 |
| ಉತ್ತರಿಸುವ ಸಚಿವರು | : | ಮಾನ್ಯ ನಗರಾಭಿವೃದ್ಧಿ ಸಚಿವರು |

| ಕ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದ ಮಹಾನಗರ ಪಾಲಿಕೆಗಳಲ್ಲಿರುವ ಒಟ್ಟು ಸದಸ್ಯ ಸ್ಥಾನಗಳ ಸಂಖ್ಯೆ ಎಷ್ಟು;(ಜಿಲ್ಲಾವಾರು ಮಾಹಿತಿ ನೀಡುವುದು) | ರಾಜ್ಯದ ಮಹಾನಗರ ಪಾಲಿಕೆಗಳಲ್ಲಿರುವ ಒಟ್ಟು ಸದಸ್ಯ ಸ್ಥಾನಗಳ ವಿವರ ಈ ಕೆಳಗಿನಂತೆ ಇರುತ್ತದೆ. |

| ಕ್ರ ಸಂ. | ಮಹಾನಗರ ಪಾಲಿಕೆಗಳ ಹೆಸರು | ಒಟ್ಟು ಸದಸ್ಯ ಸ್ಥಾನಗಳ ವಿವರ |
|---|---|---|
| 1. | ಹುಬ್ಬಳ್ಳಿ-ಧಾರವಾಡ | 79 |
| 2. | ಬೆಳಗಾವಿ | 58 |
| 3. | ಕಲಬುರ್ಗಿ | 55 |
| 4. | ಬಳ್ಳಾರಿ | 39 |
| 5. | ವಿಜಯಪುರ | 35 |
| 6. | ಮೈಸೂರು | 65 |
| 7. | ದಾವಣಗೆರೆ | ಚುನಾಯಿತ ಸದಸ್ಯರುಗಳು – 45<br>ನಾಮನಿರ್ದೇಶನ ಸದಸ್ಯರುಗಳು – 5 |
| 8. | ತುಮಕೂರು | ಚುನಾಯಿತ ಸದಸ್ಯರುಗಳು – 35<br>ನಾಮನಿರ್ದೇಶನ ಸದಸ್ಯರುಗಳು – 5 |
| 9. | ಶಿವಮೊಗ್ಗ | ಚುನಾಯಿತ ಸದಸ್ಯರುಗಳು – 35<br>ನಾಮನಿರ್ದೇಶನ ಸದಸ್ಯರುಗಳು – 5 |
| 10. | ಮಂಗಳೂರು | ಚುನಾಯಿತ ಸದಸ್ಯರುಗಳು – 60<br>ನಾಮನಿರ್ದೇಶನ ಸದಸ್ಯರುಗಳು – 4 |

| ಕ.ಸಂ. | ಪ್ರಶ್ನೆ | ಉತ್ತರ |
|---|---|---|
| (ಆ) | ಖಾಲಿಯಿರುವ/ಅವಧಿ ಮುಗಿದ ಮಹಾನಗರ ಪಾಲಿಕೆಗಳಿಗೆ ಚುನಾವಣೆಯನ್ನು ಯಾವಾಗ ನಡೆಸಲಾಗುವುದು; (ಪ್ರಕ್ರಿಯೆಯು ಯಾವ ಹಂತದಲ್ಲಿದೆ; | ಮಾನ್ಯ ಉಚ್ಚ ನ್ಯಾಯಾಲಯ, ಬೆಂಗಳೂರು ಇಲ್ಲಿ ದಾಖಲಾಗಿದ್ದ ರಿಟ್ ಅರ್ಜಿ ಸಂಖ್ಯೆ: 49814/2019 c/w 35/2020 ಪ್ರಕರಣದಲ್ಲಿ ದಿನಾಂಕ 17/12/2020ರಂದು ನೀಡಿರುವ ತೀರ್ಪಿನಲ್ಲಿ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆ ಮತ್ತು ವಿಜಯಪುರ ಮಹಾನಗರ ಪಾಲಿಕೆಗೆ 06 ವಾರದೊಳಗೆ ಕ್ಷೇತ್ರ ಪುನರ್ ವಿಂಗಡಣೆಯನ್ನು ಅಂತಿಮಗೊಳಿಸಲು, ಕ್ಷೇತ್ರ ಪುನರ್ ವಿಂಗಡಣೆ ಅಂತಿಮಗೊಂಡ ದಿನಾಂಕದಿಂದ 02 ತಿಂಗಳೊಳಗೆ ವಾರ್ಡ್‌ವಾರು ಮೀಸಲಾತಿಯನ್ನು ಅಂತಿಮಗೊಳಿಸಲು ಮಾನ್ಯ ಉಚ್ಚ ನ್ಯಾಯಾಲಯವು ನಿರ್ದೇಶನ ನೀಡಿರುತ್ತದೆ.<br><br>ಮಾನ್ಯ ಉಚ್ಚ ನ್ಯಾಯಾಲಯದ ಆದೇಶದನ್ವಯ ವಿಜಯಪುರ ಮಹಾನಗರ ಪಾಲಿಕೆಗೆ ಕ್ಷೇತ್ರ ಪುನರ್ ವಿಂಗಡಣೆ ಕೈಗೊಂಡು ಕರಡು ಅಧಿಸೂಚನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ 17/12/2020ರಂದು ಪ್ರಕಟಿಸಿ ಬಾಧಿತರಾಗಬಹುದಾದವರಿಂದ ಸಲಹೆ/ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿದೆ. |

....2

| | | |
|---|---|---|
| | | ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಗೆ ಸಂಬಂಧಿಸಿದಂತೆ 2011 ರ ಜನಗಣತಿಯನ್ನಾಧರಿಸಿ, ಕ್ಷೇತ್ರ ಪುನರ್ ವಿಂಗಡಣೆ ಕೈಗೊಂಡು ಜಿಲ್ಲಾಧಿಕಾರಿ, ಧಾರವಾಡ ಜಿಲ್ಲೆ ರವರಿಂದ ಪ್ರಸ್ತಾವನೆ ಸ್ವೀಕೃತಗೊಂಡಿದ್ದು, ಪರಿಶೀಲನೆಯಲ್ಲಿರುತ್ತದೆ.<br><br>ಮಾನ್ಯ ಉಚ್ಚ ನ್ಯಾಯಾಲಯ, ಬೆಂಗಳೂರು ಇಲ್ಲಿ ದಾಖಲಾಗಿದ್ದ ರಿಟ್ ಅರ್ಜಿ ಸಂಖ್ಯೆ 14925/2020 ಪ್ರಕರಣದಲ್ಲಿ ದಿನಾಂಕ 17/12/2020ರಂದು ನೀಡಿರುವ ಆದೇಶದನ್ವಯ ಬೆಳಗಾವಿ ಮಹಾನಗರ ಪಾಲಿಕೆಗೆ ವಾರ್ಡ್‌ವಾರು ಮೀಸಲಾತಿಯನ್ನು 02 ತಿಂಗಳೊಳಗೆ ಪೂರ್ಣಗೊಳಿಸಲು ನಿರ್ದೇಶನ ನೀಡಿರುತ್ತದೆ. ಅದರನ್ವಯ ಬೆಳಗಾವಿ ಮಹಾನಗರ ಪಾಲಿಕೆಯ ವಾರ್ಡ್‌ಗಳಿಗೆ ಮೀಸಲಾತಿ ನಿಗದಿಪಡಿಸಲು ಕರಡು ಅಧಿಸೂಚನೆಯನ್ನು ದಿನಾಂಕ 16/01/2021ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಿ ಬಾಧಿತರಾಗಬಹುದಾದವರಿಂದ ಸಲಹೆ/ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿದೆ.<br><br>ಕಲಬುರ್ಗಿ ಮಹಾನಗರ ಪಾಲಿಕೆಗೆ 06 ವಾರದೊಳಗೆ ಕ್ಷೇತ್ರ ಪುನರ್ ವಿಂಗಡಣೆಯನ್ನು ಅಂತಿಮಗೊಳಿಸಲು, ಕ್ಷೇತ್ರ ಪುನರ್ ವಿಂಗಡಣೆ ಅಂತಿಮಗೊಂಡ ದಿನಾಂಕದಿಂದ 02 ತಿಂಗಳೊಳಗೆ ವಾರ್ಡ್‌ವಾರು ಮೀಸಲಾತಿಯನ್ನು ಅಂತಿಮಗೊಳಿಸಲು ಮಾನ್ಯ ಉಚ್ಚ ನ್ಯಾಯಾಲಯವು ನಿರ್ದೇಶನ ನೀಡಿರುತ್ತದೆ.<br><br>ಕಲಬುರ್ಗಿ ಮಹಾನಗರ ಪಾಲಿಕೆಗೆ ಸಂಬಂಧಿಸಿದಂತೆ 2011 ರ ಜನಗಣತಿಯನ್ನಾಧರಿಸಿ, ಕ್ಷೇತ್ರ ಪುನರ್ ವಿಂಗಡಣೆ ಕೈಗೊಂಡು ಜಿಲ್ಲಾಧಿಕಾರಿ, ಕಲಬುರ್ಗಿ ಜಿಲ್ಲೆ ರವರಿಂದ ಪ್ರಸ್ತಾವನೆ ಸ್ವೀಕೃತಗೊಂಡಿದ್ದು, ಪರಿಶೀಲನೆಯಲ್ಲಿರುತ್ತದೆ.<br><br>ಬಳ್ಳಾರಿ ಮಹಾನಗರ ಪಾಲಿಕೆಗೆ ಸಂಬಂಧಿಸಿದಂತೆ ವಾರ್ಡ್‌ವಾರು ಮೀಸಲಾತಿಯನ್ನು ಪ್ರಶ್ನಿಸಿ ದಾಖಲಾಗಿದ್ದ ರಿಟ್ ಅರ್ಜಿ ಸಂಖ್ಯೆ: 106127/2018 ಪ್ರಕರಣವು ದಿನಾಂಕ 11/01/2021ರಂದು ಇತ್ಯರ್ಥಗೊಂಡಿರುತ್ತದೆ.<br><br>ಮಾನ್ಯ ಉಚ್ಚ ನ್ಯಾಯಾಲಯ, ಬೆಂಗಳೂರು ಇಲ್ಲಿ ದಾಖಲಾಗಿದ್ದ ಮೇಲ್ಕಂಡ ಎರಡು ಪ್ರಕರಣಗಳಲ್ಲಿ ನೀಡಿರುವ ಆದೇಶದನ್ವಯ ಅವಧಿ ಮುಕ್ತಾಯಗೊಂಡಿರುವ ಮಹಾನಗರ ಪಾಲಿಕೆಗಳಿಗೆ ಚುನಾವಣೆ ನಡೆಸಲು ನಿಯಮಾನುಸಾರ ಅಗತ್ಯ ಕ್ರಮಕೈಗೊಳ್ಳಲಾಗುವುದು. |
| (ಇ) | ಸದರಿ ಚುನಾವಣೆಗೆ ಸ್ಪರ್ಧಿಸಲು ಕನಿಷ್ಠ ವಿದ್ಯಾರ್ಹತೆಯನ್ನು ನಿಗದಿಪಡಿಸುವ ಆಲೋಚನೆ ಸರ್ಕಾರದ ಮುಂದಿದೆಯೇ? (ಪೂರ್ಣ ಮಾಹಿತಿಯನ್ನು ಒದಗಿಸುವುದು) | ಮಹಾನಗರ ಪಾಲಿಕೆಗಳ ಚುನಾವಣೆಗೆ ಸ್ಪರ್ಧಿಸಲು ಕನಿಷ್ಠ ವಿದ್ಯಾರ್ಹತೆಯನ್ನು ನಿಗದಿಪಡಿಸುವ ಆಲೋಚನೆ ಸರ್ಕಾರದ ಮುಂದೆ ಇರುವುದಿಲ್ಲ. |

ಸಂಖ್ಯೆ: ನಅಇ 26 ಎಲ್‌ಎಕ್ಯೂ 2021

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಮಾನ್ಯ ವಿಧಾನ ಸಭೆಯ ಸದಸ್ಯರು | : ಶ್ರೀ ಶಿವಾನಂದ ಎಸ್. ಪಾಟೀಲ್ (ಬಸವನಬಾಗೇವಾಡಿ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 1091 |
| ಉತ್ತರಿಸಬೇಕಾದ ದಿನಾಂಕ | : 05.02.2021 |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಈಶ್ವರ ಕೋ-ಆಪರೇಟಿವ್ ಕ್ರೆಡಿಟ್ ಸೊಸೈಟಿ ನಿ., ವಿಜಯಪುರ ಇದರಲ್ಲಿ ಎಷ್ಟು ಜನ ಗ್ರಾಹಕರು ಮುದ್ದತ್ತು ಠೇವಣಿ ಹಣ ಇಟ್ಟಿರುತ್ತಾರೆ; | ಈಶ್ವರ ಕ್ರೆಡಿಟ್ ಕೋ-ಆಪ್ ಸೊಸೈಟಿ ಲಿ.. ವಿಜಯಪುರ ಇಲ್ಲಿ ದಿನಾಂಕ:31-03-2020ರ ಅಂತ್ಯಕ್ಕೆ 4212 ಖಾತೆದಾರರು ರೂ.22,70,59,581/- ಮೊತ್ತದ ಮುದ್ದತಿ ಠೇವಣಿ ಹಣ ಇಟ್ಟಿರುತ್ತಾರೆ. |
| ಆ) | ಇವರಲ್ಲಿ ಎಷ್ಟು ಜನ ಗ್ರಾಹಕರ ಮುದ್ದತ್ತು ಠೇವಣಿ ಅವಧಿ ಮುಕ್ತಾಯವಾಗಿರುತ್ತದೆ; | 4212 ಠೇವಣಿದಾರರ ಮುದ್ದತು ಠೇವಣಿ ಅವಧಿ ಮುಕ್ತಾಯಗೊಂಡಿರುತ್ತದೆ. |
| ಇ) | ಮುದ್ದತ್ತು ಠೇವಣಿ ಅವಧಿ ಮುಕ್ತಾಯವಾಗಿರುವ ಗ್ರಾಹಕರಿಗೆ ಸೊಸೈಟಿಯಿಂದ ಠೇವಣಿ ಹಣ ಮರುಪಾವತಿಸದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಈ) | ಮುದ್ದತ್ತು ಮೀರಿದ ಠೇವಣಿ ಹಣ ಮರುಪಾವತಿಸದೇ ಇರುವುದಕ್ಕೆ ಕಾರಣಗಳೇನು; | ಸಂಘವು ಸಂಗ್ರಹಿಸಿದ ಠೇವಣಿ ಹಣವು ದುರುಪಯೋಗವಾಗಿದ್ದು, ಹಣ ವಸೂಲಾತಿಯಾಗದಿರುವ ಕಾರಣ ಮುದ್ದತು ಮೀರಿದ ಠೇವಣಿ ಹಣವನ್ನು ಮರುಪಾವತಿಸಲು ಸಾಧ್ಯವಾಗಿರುವುದಿಲ್ಲ. |
| ಉ) | ಗ್ರಾಹಕರ ಹಿತದೃಷ್ಟಿಯಿಂದ ಸರ್ಕಾರ ಮುದ್ದತ್ತು ಮೀರಿದ ಠೇವಣಿ ಹಣವನ್ನು ಠೇವಣಿದಾರರಿಗೆ ಮರುಪಾವತಿಸಲು ಕೈಕೊಳ್ಳುವ ಕ್ರಮಗಳೇನು? | ಸಂಘದಲ್ಲಿ ಹಣ ದುರುಪಯೋಗವಾಗಿರುವ ಆರೋಪಕ್ಕೆ ಸಂಬಂಧಪಟ್ಟಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಪ್ರಕರಣ 64 ರಡಿಯಲ್ಲಿ ವಿಚಾರಣೆ ನಡೆಸಲಾಗಿದ್ದು, ವಿಚಾರಣೆಯಲ್ಲಿ ಹಣ ದುರುಪಯೋಗವಾಗಿರುವುದು ಸಾಬೀತಾಗಿದೆ. ಸಂಘದ 2017-18 ಸಾಲಿನ ಲೆಕ್ಕ ಪರಿಶೋಧನೆಯಲ್ಲಿಯೂ ಹಣದುರುಪಯೋಗ ಕಂಡುಬಂದಿರುತ್ತದೆ.<br><br>ಸಂಘದ ಆಡಳಿತ ಮಂಡಳಿಯ ಸದಸ್ಯರ ವಿರುದ್ಧ ಪ್ರಕರಣ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 29-ಸಿ ರಡಿ ಕ್ರಮಕೈಗೊಂಡು, ಎಲ್ಲಾ ಆಡಳಿತ ಮಂಡಳಿ ಸದಸ್ಯರನ್ನು ಅನರ್ಹಗೊಳಿಸಲಾಗಿದ್ದು, ಸಂಘಕ್ಕೆ ವಿಶೇಷಾಧಿಕಾರಿ ನೇಮಿಸಲಾಗಿದೆ. ಕರ್ನಾಟಕ ಸಹಕಾರ |
| | | ಸಂಘಗಳ ಕಾಯ್ದೆ ಪ್ರಕರಣ 68 ರಡಿಯಲ್ಲಿ ಸಂಘಕ್ಕೆ ನಿರ್ದೇಶನ ನೀಡಿ ಹಣ ದುರುಪಯೋಗ ಮಾಡಿರುವ |

| | | | |
|---|---|---|---|
| | | | ಅಧ್ಯಕ್ಷರು, ಕಾರ್ಯದರ್ಶಿ, ಆಡಳಿತ ಮಂಡಳಿ ಸದಸ್ಯರ ವಿರುದ್ಧ ಸಿವಿಲ್ ಮತ್ತು ಕ್ರಿಮಿನಲ್ ಮೊಕದ್ದಮೆ ದಾಖಲಿಸಲು ಹಾಗೂ ಹಣ ವಸೂಲಾತಿಗೆ ಕಾನೂನು ಕ್ರಮ ಜರುಗಿಸಲು ನಿರ್ದೇಶನ ನೀಡಲಾಗಿದೆ. ಇವರುಗಳ ವಿರುದ್ಧ ವಿಜಯಪುರ ಗಾಂಧಿಚೌಕ ಪೋಲಿಸ್ ಠಾಣೆಯಲ್ಲಿ ಪ್ರಥಮ ಮಾಹಿತಿ ವರದಿ(FIR) ಸಲ್ಲಿಕೆಯಾಗಿ, ಕ್ರಿಮಿನಲ್ ಮೊಕದ್ದಮೆ ದಾಖಲಾಗಿದ್ದು, ಪ್ರಸ್ತುತ ಈ ಪ್ರಕರಣವು ಪೋಲಿಸ್ ಠಾಣೆ (ಗಾಂಧಿ ಚೌಕ) ದಲ್ಲಿ ತನಿಖೆ ಹಂತದಲ್ಲಿದೆ.<br><br>ಆಡಳಿತ ಮಂಡಳಿ ಸದಸ್ಯರ ಸ್ಥಿರಾಸ್ತಿಯನ್ನು ಪ್ರಕರಣ 103 ರಡಿಯಲ್ಲಿ ಜಪ್ತಿ ಪೂರ್ವ ಆದೇಶ ಹೊರಡಿಸಲಾಗಿದೆ. ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಪ್ರಕರಣ 69 ರಡಿಯಲ್ಲಿಅಧಿಬಾರ ಪ್ರಕರಣ ವಿಚಾರಣೆ ಹಂತದಲ್ಲಿದ್ದು, ದುರುಪಯೋಗವಾದ ಮೊತ್ತ ವಸೂಲಾತಿ ನಂತರ ಕಾನೂನಿನ ರೀತ್ಯಾ ಠೇವಣಿದಾರರಿಗೆ ಮರು ಪಾವತಿಸಲು ಕ್ರಮ ಕೈಗೊಳ್ಳಲಾಗುವುದು. |

ಕಡತ ಸಂಖ್ಯೆ: ಸಿಒ 08 ಸಿಆರ್‌ಸಿ 2021

(ಎಸ್. ಟಿ. ಸೋಮಶೇಖರ್)
ಸಹಕಾರ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1076
ಸದಸ್ಯರ ಹೆಸರು : ಶ್ರೀ ರಾಮದಾಸ್ ಎಸ್. ಎ (ಕೃಷ್ಣರಾಜ)
ಉತ್ತರಿಸಬೇಕಾದ ದಿನಾಂಕ : 05-02-2021
ಉತ್ತರಿಸುವ ಸಚಿವರು : ಮಾನ್ಯ ನಗರಾಭಿವೃದ್ಧಿ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಮಹಾನಗರ ಪಾಲಿಕೆಗಳ ಪೈಕಿ ಯಾವ ಯಾವ ಮಹಾನಗರ ಪಾಲಿಕೆಗಳಲ್ಲಿ ಬೀದಿ ದೀಪಗಳನ್ನು ಎಲ್.ಇ.ಡಿ ದೀಪಗಳನ್ನಾಗಿ ಪರಿವರ್ತಿಸಿ ಅಳವಡಿಸಲು ಸರ್ಕಾರವು ಉದ್ದೇಶಿಸಿದೆಯೇ; (ವಿವರ ನೀಡುವುದು) | ರಾಜ್ಯದಲ್ಲಿರುವ 10 ಮಹಾನಗರ ಪಾಲಿಕೆಗಳಲ್ಲಿ (ಬಿಬಿಎಂಪಿ ಹೊರತುಪಡಿಸಿ) ಹಾಲಿ ಇರುವ ಸಾಂಪ್ರದಾಯಿಕ ಬೀದಿ ದೀಪಗಳನ್ನು ಬದಲಿಸಿ ಕೇಂದ್ರೀಕೃತ ಚಾಲನೆ ಮತ್ತು ನಿರ್ವಹಣೆಯುಳ್ಳ (Centralized Control and Monitoring System) ಇಂಧನ ಕ್ಷಮತೆಯ ಎಲ್.ಇ.ಡಿ. ಬೀದಿ ದೀಪಗಳನ್ನು ಅಳವಡಿಸಿ ಮುಂದಿನ 07 ವರ್ಷಗಳ ಕಾಲ ಚಾಲನೆ ಮತ್ತು ನಿರ್ವಹಣೆಯ ಯೋಜನೆಯನ್ನು ಸಾರ್ವಜನಿಕ ಖಾಸಗಿ ಸಹಭಾಗಿತ್ವ ಮಾದರಿಯಲ್ಲಿ ಕೈಗೊಳ್ಳಲಾಗುತ್ತಿದೆ.<br><br>ವಿವರಗಳನ್ನು **ಅನುಬಂಧ-01** ರಲ್ಲಿ ನೀಡಿದೆ. |
| ಆ | ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಕೈಗೊಂಡಿರುವ ಕ್ರಮಗಳೇನು; ಈ ಕುರಿತಾದ ಯೋಜನೆಯು ಯಾವ ಹಂತದಲ್ಲಿದೆ; (ಸಂಪೂರ್ಣ ಮಾಹಿತಿ ನೀಡುವುದು) | ಯೋಜನೆಯ ಅನುಷ್ಠಾನಕ್ಕಾಗಿ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ:<br><br>1) ರಾಜ್ಯದ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳಲ್ಲಿ (10 ಮಹಾನಗರ ಪಾಲಿಕೆಗಳನ್ನು ಒಳಗೊಂಡಂತೆ) ಯೋಜನೆಯನ್ನು ಅನುಷ್ಠಾನಗೊಳಿಸಲು ಸರ್ಕಾರದ ಆದೇಶ ಸಂಖ್ಯೆ: ನಅಇ 550 ಪಿ.ಆರ್.ಜೆ 2017, ದಿನಾಂಕ:15.03.2018 ರಲ್ಲಿ ಆದೇಶಿಸಲಾಗಿದೆ.<br>2) ಸದರಿ ಆದೇಶದಂತೆ, ಬೀದಿ ದೀಪಗಳ ಜಿ.ಐ.ಎಸ್. ಸಮೀಕ್ಷೆಯನ್ನು ಕೈಗೊಂಡು ಸಮೀಕ್ಷಾ ವರದಿ ಹಾಗೂ ಕಾರ್ಯ ಸಾಧ್ಯತಾ ವರದಿಗಳನ್ನು ತಯಾರಿಸಲು ವ್ಯಾವಹಾರಿಕ ಸಲಹೆಗಾರರನ್ನು ಮಹಾನಗರಪಾಲಿಕೆಗಳಿಂದ ನೇಮಿಸಲಾಗಿರುತ್ತದೆ.<br>3) ಸಮೀಕ್ಷಾ ವರದಿ ಹಾಗೂ ಕಾರ್ಯ ಸಾಧ್ಯತಾ ವರದಿಗಳಿಗೆ ಅನುಮೋದನೆ ನೀಡಲು ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಲಾಗಿದೆ.<br>4) ಆರ್ಥಿಕ ಕಾರ್ಯಸಾಧ್ಯತೆಯ ಆಧಾರದ ಮೇಲೆ ಸದರಿ ಯೋಜನೆಯನ್ನು ತ್ವರಿತವಾಗಿ ಅನುಷ್ಠಾನಗೊಳಿಸಲು ಹಾಗೂ ಆಡಳಿತಾತ್ಮಕ ಅನುಮೋದನೆ ನೀಡಲು ಸರ್ಕಾರದ ಆದೇಶ ಸಂಖ್ಯೆ: ನಅಇ 210 ಸಿ.ಎಸ್.ಎಸ್ 2020, ದಿನಾಂಕ:15.12.2020 ರ ಅನ್ವಯ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, |

| | | |
|---|---|---|
| | | ನಗರಾಭಿವೃದ್ಧಿ ಇಲಾಖೆರವರ ಅಧ್ಯಕ್ಷತೆಯಲ್ಲಿ ಅಧಿಕಾರಯುಕ್ತ ಸಮಿತಿಯನ್ನು ರಚಿಸಲಾಗಿದೆ.<br><br>ಸದರಿ ಯೋಜನೆಯು ರಾಜ್ಯದ ಮಹಾನಗರ ಪಾಲಿಕೆಗಳಲ್ಲಿ ವಿವಿಧ ಹಂತದಲ್ಲಿದ್ದು, ವಿವರಗಳನ್ನು **ಅನುಬಂಧ-01** ರಲ್ಲಿ ನೀಡಲಾಗಿದೆ. |
| ಇ | ಈ ಯೋಜನೆಯಿಂದ ಸರ್ಕಾರಕ್ಕೆ ಆಗುವ ಪ್ರಯೋಜನಗಳೇನು; ಈ ಯೋಜನೆಯನ್ನು ತ್ವರಿತವಾಗಿ ಜಾರಿಗೆ ತರಲು ಸರ್ಕಾರಕ್ಕೆ ಇರುವ ಅಡೆತಡೆಗಳೇನು; | ಈ ಯೋಜನೆಯಿಂದ ಸರ್ಕಾರಕ್ಕೆ ಈ ಕೆಳಕಂಡ ಪ್ರಯೋಜನಗಳಿವೆ:<br>1. ಯಾವುದೇ ಹೆಚ್ಚುವರಿ ಆರ್ಥಿಕ ವೆಚ್ಚವು ಸರ್ಕಾರದಿಂದ ಅಥವಾ ಪಾಲಿಕೆ ವತಿಯಿಂದ ಆಗುವುದಿಲ್ಲ.<br>2. ಬೀದಿ ದೀಪಗಳ ಇಂಧನ ಕ್ಷಮತೆಯಲ್ಲಿ ಸುಧಾರಣೆಯಾಗುವುದರಿಂದ ವಿದ್ಯುತ್ ಬಳಕೆಯ ಉಳಿತಾಯ.<br>3. ಬೀದಿ ದೀಪ ವ್ಯವಸ್ಥೆ ಗಣಕೀಕೃತಗೊಳ್ಳುವುದರಿಂದ ಸಾರ್ವಜನಿಕರಿಗೆ ಉತ್ತಮ ಸೇವೆ, ಸುರಕ್ಷೆ ಮತ್ತು ವಿಶ್ವಾಸನೀಯ ಸೌಕರ್ಯ ಒದಗುತ್ತದೆ.<br>4. ಇಂಧನ ಬಳಕೆ ಕಡಿಮೆಯಾಗುವುದರಿಂದ ಇಂಗಾಲದ ಡೈ ಆಕ್ಸೈಡ್ ಹೊರ ಚೆಲ್ಲುವಿಕೆಯಲ್ಲಿ ಇಳಿಮುಖವಾಗುವುದು.<br><br>ಈ ಯೋಜನೆಯನ್ನು ತ್ವರಿತವಾಗಿ ಜಾರಿಗೆ ತರಲು ಸರ್ಕಾರಕ್ಕೆ ಯಾವುದೇ ಅಡೆ ತಡೆ ಇರುವುದಿಲ್ಲ. |
| ಈ | ಈ ಯೋಜನೆಯನ್ನು ತ್ವರಿತವಾಗಿ ಅನುಷ್ಠಾನಗೊಳಿಸಲು ಸರ್ಕಾರಕ್ಕೆ ಇಚ್ಛಾಶಕ್ತಿ ಇದೆಯೇ; ಇದ್ದಲ್ಲಿ, ಯಾವಾಗ ಈ ಯೋಜನೆಯನ್ನು ಅನುಷ್ಠಾನಗೊಳಿಸಲಾಗುವುದು? (ವಿವರ ನೀಡುವುದು) | ಈ ಯೋಜನೆಯನ್ನು ತ್ವರಿತವಾಗಿ ಅನುಷ್ಠಾನಗೊಳಿಸಲು ಹಾಗೂ ಆಡಳಿತಾತ್ಮಕ ಅನುಮೋದನೆ ನೀಡಲು ಸರ್ಕಾರದ ಆದೇಶ ಸಂಖ್ಯೆ: ನಅಇ 210 ಸಿಎಸ್ಎಸ್ 2020, ದಿನಾಂಕ:15.12.2020 ಅನ್ವಯ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆರವರ ಅಧ್ಯಕ್ಷತೆಯಲ್ಲಿ ಅಧಿಕಾರಯುಕ್ತ ಸಮಿತಿಯನ್ನು ರಚಿಸಲಾಗಿದೆ.<br><br>ಸದರಿ ಯೋಜನೆಯ ಪ್ರಗತಿಯು ರಾಜ್ಯದ ಮಹಾನಗರ ಪಾಲಿಕೆಗಳಲ್ಲಿ **ಅನುಬಂಧ-01** ರಲ್ಲಿ ವಿವರಿಸಿರುವಂತೆ ವಿವಿಧ ಹಂತಗಳಲ್ಲಿದ್ದು, ಮಹಾನಗರಪಾಲಿಕೆ ವತಿಯಿಂದ ಕಾರ್ಯಾದೇಶ ನೀಡಿದ ನಂತರ 08 ತಿಂಗಳ ಅವಧಿಯಲ್ಲಿ ಯೋಜನೆಯ ಅನುಷ್ಠಾನ ಮಾಡಲಾಗುತ್ತದೆ ಹಾಗೂ ಮುಂದಿನ 07 ವರ್ಷಗಳ ಕಾಲ ಚಾಲನೆ ಮತ್ತು ನಿರ್ವಹಣೆಯನ್ನು ಸದರಿ ಯೋಜನೆಯಡಿಯಲ್ಲಿ ಕೈಗೊಳ್ಳಲಾಗುತ್ತದೆ. |

ಸಂಖ್ಯೆ:ನಅಇ 28 ಸಿಎಸ್ಎಸ್ 2021

**(ಬಿ.ಎ.ಬಸವರಾಜ)**
ನಗರಾಭಿವೃದ್ಧಿ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1046 |
| ಸದಸ್ಯರ ಹೆಸರು | : | ಶ್ರೀ ಕೃಷ್ಣಾರೆಡ್ಡಿ ಎಂ. (ಚಿಂತಾಮಣಿ) |
| ಉತ್ತರಿಸಬೇಕಾದ ದಿನಾಂಕ | : | 05-02-2021 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ ಹಾಗೂ ಸಕ್ಕರೆ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಚಿಂತಾಮಣಿ ನಗರಸಭೆ ವ್ಯಾಪ್ತಿಯಲ್ಲಿ ವಿವಿಧ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು 2019ರಲ್ಲಿ ಎಸ್.ಎಫ್.ಸಿ ವಿಶೇಷ ಅನುದಾನದಡಿ ರೂ.10.00 ಕೋಟಿ ಅನುದಾನ ಮಂಜೂರಾಗಿರುವುದು ಸರ್ಕಾರದ ಗಮನದಲ್ಲಿದೆಯೇ; | ಹೌದು<br><br>ಚಿಂತಾಮಣಿ ನಗರಸಭೆ ವ್ಯಾಪ್ತಿಯಲ್ಲಿ ವಿವಿಧ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಸರ್ಕಾರದ ಆದೇಶ ಸಂಖ್ಯೆ: ನಅಇ 240 ಎಸ್‌ಎಫ್‌ಸಿ 2018 ದಿ: 25-01-2019ರನ್ವಯ ರೂ.10.00 ಕೋಟಿ ವಿಶೇಷ ಅನುದಾನವನ್ನು ಮಂಜೂರು ಮಾಡಿ ಆದೇಶಿಸಲಾಗಿರುತ್ತದೆ. |
| ಆ) | ಹಾಗಿದ್ದಲ್ಲಿ, ಟೆಂಡರ್ ಪ್ರಕ್ರಿಯೆ ಪೂರ್ಣಗೊಳಿಸಿದ್ದರೂ ಸಹ ಸದರಿ ಅನುದಾನದಲ್ಲಿ ಕಾಮಗಾರಿಗಳನ್ನು ಕೈಗೊಳ್ಳದಿರುವುದಕ್ಕೆ ಕಾರಣವೇನು; | ಪೌರಾಯುಕ್ತರು, ಚಿಂತಾಮಣಿ ನಗರಸಭೆ ರವರು ಚಿಂತಾಮಣಿ ನಗರಸಭೆಗೆ ಮಂಜೂರಾಗಿದ್ದ ರೂ.10.00 ಕೋಟಿ ವಿಶೇಷ ಅನುದಾನದಡಿ ವಿವಿಧ ಕಾಮಗಾರಿಗಳನ್ನು ಕೈಗೊಳ್ಳಲು ಕ್ರಿಯಾಯೋಜನೆ ಸಿದ್ಧಪಡಿಸಿ, ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ರವರಿಂದ ದಿ: 17-06-2019 ರಂದು ಅನುಮೋದನೆ ನೀಡಲಾಗಿರುತ್ತದೆ.<br><br>ತದನಂತರ, ಟೆಂಡರ್ ಕರೆಯಲು ಅಂದಾಜು ಪಟ್ಟಿ ಸಿದ್ಧಪಡಿಸಿ ಟೆಂಡರ್ ಕರೆಯುವ ಹಂತದಲ್ಲಿರುವಾಗ ಚಿಂತಾಮಣಿ ನಗರಸಭೆಗೆ ಮಂಜೂರು ಮಾಡಲಾಗಿದ್ದ ರೂ.10.00 ಕೋಟಿ ವಿಶೇಷ ಅನುದಾನದಡಿ ಕೈಗೊಳ್ಳುವ ಕಾಮಗಾರಿಗಳು ಇನ್ನೂ ಆರಂಭವಾಗಿಲ್ಲದಿದ್ದರಿಂದ ಆರ್ಥಿಕ ಇಲಾಖೆಯ ನಿರ್ದೇಶನದನ್ವಯ ಸರ್ಕಾರದ ಪತ್ರ ಸಂಖ್ಯೆ: ನಅಇ 222 ಎಸ್‌ಎಫ್‌ಸಿ 2019 ದಿ: 13-09-2019ರನ್ವಯ ವಿಶೇಷ ಅನುದಾನವನ್ನು ತಡೆ ಹಿಡಿಯಲಾಗಿರುತ್ತದೆ. |
| ಇ) | ಚಿಂತಾಮಣಿ ನಗರದ ವ್ಯಾಪ್ತಿಯಲ್ಲಿ ಸಕಾಲಕ್ಕೆ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳದಿರುವುದರಿಂದ ಸಾರ್ವಜನಿಕರಿಗೆ ತೀರಾ ಅನಾನುಕೂಲವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರವು ಚಿಂತಾಮಣಿ ನಗರಸಭೆ ವ್ಯಾಪ್ತಿಯಲ್ಲಿ ವಿವಿಧ ಮೂಲಭೂತ ಸೌಕರ್ಯ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಎಸ್.ಎಫ್.ಸಿ ಮುಕ್ತನಿಧಿ ಅನುದಾನ, ಎಸ್.ಎಫ್.ಸಿ ಕುಡಿಯುವ ನೀರುಅನುದಾನ, ಸ್ವಚ್ಛ ಭಾರತ ಯೋಜನೆ, ನಗರೋತ್ಥಾನ ಯೋಜನೆ, 14ನೇ ಹಣಕಾಸು ಹಾಗೂ 15ನೇ ಹಣಕಾಸು ಆಯೋಗದ ಅನುದಾನಗಳನ್ನು ಒದಗಿಸಿರುತ್ತದೆ. |
| ಈ) | ಬಂದಿದ್ದಲ್ಲಿ, ಎಷ್ಟು ಕಾಲಮಿತಿಯೊಳಗೆ ಈ ಕಾಮಗಾರಿಗಳನ್ನು ಕೈಗೊಳ್ಳಲಾಗುವುದು? (ವಿವರ ನೀಡುವುದು) | ಎಸ್.ಎಫ್.ಸಿ ಮುಕ್ತನಿಧಿ ಅನುದಾನ: (ರೂ ಲಕ್ಷಗಳಲ್ಲಿ) — see table below; ಎಸ್.ಎಫ್.ಸಿ ಕುಡಿಯುವ ನೀರು ಅನುದಾನ: (ರೂ ಲಕ್ಷಗಳಲ್ಲಿ) |

**ಎಸ್.ಎಫ್.ಸಿ ಮುಕ್ತನಿಧಿ ಅನುದಾನ:**

(ರೂ ಲಕ್ಷಗಳಲ್ಲಿ)

| ವರ್ಷ | ಹಂಚಿಕೆ | ಬಿಡುಗಡೆ | ವೆಚ್ಚ |
|---|---|---|---|
| 2018-19 | 424.96 | 340.37 | 339.44 |
| 2019-20 | 364.00 | 233.62 | 242.08 |
| 2020-21 | 134.54 | 63.71 | 41.52 |
| ಒಟ್ಟು | 923.5 | 637.7 | 623.04 |

**ಎಸ್.ಎಫ್.ಸಿ ಕುಡಿಯುವ ನೀರು ಅನುದಾನ:**

(ರೂ ಲಕ್ಷಗಳಲ್ಲಿ)

| ವರ್ಷ | ಹಂಚಿಕೆ | ಬಿಡುಗಡೆ | ವೆಚ್ಚ |
|---|---|---|---|

| | | | |
|---|---|---|---|
| 2018-19 | 55.00 | 55.00 | 54.95 |
| 2019-20 | 35.00 | 35.00 | 33.11 |
| 2020-21 | 7.5 | 7.5 | 7.27 |
| ಒಟ್ಟು | 97.5 | 97.5 | 95.33 |

**ಸ್ವಚ್ಛ ಭಾರತ ಯೋಜನೆ :**

(ರೂ ಲಕ್ಷಗಳಲ್ಲಿ)

| ವರ್ಷ | ಬಿಡುಗಡೆಯಾದ ಅನುದಾನ |
|---|---|
| 2018-19 | 0.00 |
| 2019-20 | 0.00 |
| 2020-21 | 229.51 (ಘನ ತ್ಯಾಜ್ಯ ವಸ್ತು ನಿರ್ವಹಣೆ ಕಾಮಗಾರಿಗಳು ಮತ್ತು ಐ.ಇಸಿ ಚಟುವಟಿಕೆಗಳಿಗೆ) |

**ನಗರೋತ್ಥಾನ ಯೋಜನೆ :**

(ರೂ ಲಕ್ಷಗಳಲ್ಲಿ)

| ವರ್ಷ | ಹಂಚಿಕೆ | ಬಿಡುಗಡೆ | ವೆಚ್ಚ |
|---|---|---|---|
| 2018-19 | 2500.00 | 181.45 | 181.45 |
| 2019-20 | | 630.87 | 630.87 |
| 2020-21 | | 269.90 | 264.74 |
| ಒಟ್ಟು | 2500.00 | 1082.22 | 1077.06 |

**14ನೇ ಹಣಕಾಸು ಆಯೋಗದ ಅನುದಾನ :**

(ರೂ ಲಕ್ಷಗಳಲ್ಲಿ)

| ವಿವರ | ಬಿಡುಗಡೆ |
|---|---|
| 2018-19 ಸಾಮಾನ್ಯ ಮೂಲ ಅನುದಾನ | 471.34 |
| 2019-20 ಸಾಮಾನ್ಯ ಮೂಲ ಅನುದಾನ | 631.36 |
| 2019ನೇ ಸಾಲಿನಲ್ಲಿ ಬಿಡುಗಡೆಯಾದ 2017-18ನೇ ಸಾಲಿನ ಸಾಮಾನ್ಯ ಕಾರ್ಯ ನಿರ್ವಹಣಾ ಅನುದಾನ | 128.03 |

**15ನೇ ಹಣಕಾಸು ಆಯೋಗದ ಅನುದಾನ :** 2020-21ನೇ ಸಾಲಿನಲ್ಲಿ ಮೂಲ ಸೌಕರ್ಯ ಅಭಿವೃದ್ಧಿಗಾಗಿ ರೂ.644.00 ಲಕ್ಷಗಳನ್ನು ಹಂಚಿಕೆ ಮಾಡಿ ಮೊದಲನೆ ಕಂತಿನ ನಿರ್ಬಂಧಿತ ಅನುದಾನ ಮತ್ತು ಮುಕ್ತ ಅನುದಾನ ಒಟ್ಟು ರೂ.322.00 ಲಕ್ಷಗಳನ್ನು ಬಿಡುಗಡೆಗೊಳಿಸಲಾಗಿರುತ್ತದೆ.

ಕಡತ ಸಂಖ್ಯೆ:ನಅಇ 55 ಎಸ್.ಎಫ್.ಸಿ 2021

**(ಎನ್. ನಾಗರಾಜ್, ಎಂ.ಟಿ.ಬಿ.)**
ಪೌರಾಡಳಿತ ಹಾಗೂ ಸಕ್ಕರೆ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1071 |
| ಸದಸ್ಯರ ಹೆಸರು | : | ಶ್ರೀ ಎಸ್.ಎನ್ ನಾರಾಯಣಸ್ವಾಮಿ ಕೆ.ಎಂ (ಬಂಗಾರಪೇಟೆ) |
| ಉತ್ತರಿಸಬೇಕಾದ ದಿನಾಂಕ | : | 05-02-2021 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ ಹಾಗೂ ಸಕ್ಕರೆ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | 2018-19ನೇ ಸಾಲಿನಲ್ಲಿ ಬಂಗಾರಪೇಟೆ ವಿಧಾನಸಭಾ ಕ್ಷೇತ್ರಕ್ಕೆ ಎಸ್.ಎಫ್.ಸಿ ವಿಶೇಷ ಅನುದಾನದಲ್ಲಿ ಮಂಜೂರು ಮಾಡಲಾಗಿದ್ದ ರೂ.3.00 ಕೋಟಿಗಳ ಮೊತ್ತವನ್ನು ತಡೆ ಹಿಡಿಯಲಾಗಿದ್ದು, ಈ ಮೊತ್ತವನ್ನು ಬಿಡುಗಡೆ ಮಾಡಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸುವ ಆಸಕ್ತಿ ಸರ್ಕಾರ ಹೊಂದಿದೆಯೇ; | ಬಂಗಾರಪೇಟೆ ಪುರಸಭೆಗೆ ರೂ.3.00 ಕೋಟಿ ಎಸ್.ಎಫ್.ಸಿ ವಿಶೇಷ ಅನುದಾನವನ್ನು ಸರ್ಕಾರದ ಆದೇಶ ಸಂಖ್ಯೆ: ನಅಇ 03 ಎಸ್ಎಫ್‌ಸಿ 2019 ದಿನಾಂಕ: 09-01-2019ರನ್ವಯ ಮಂಜೂರು ಮಾಡಿ ಆದೇಶಿಸಲಾಗಿರುತ್ತದೆ.<br><br>ತದನಂತರ, ಆರ್ಥಿಕ ಇಲಾಖೆಯ ನಿರ್ದೇಶನದನ್ವಯ ಮಂಜೂರು ಮಾಡಲಾಗಿದ್ದ ರೂ.3.00 ಕೋಟಿ ವಿಶೇಷ ಅನುದಾನದಡಿ ಕೈಗೊಳ್ಳುವ ಕಾಮಗಾರಿಗಳು ಇನ್ನೂ ಆರಂಭವಾಗಿಲ್ಲದಿದ್ದರಿಂದ ಅನುದಾನವನ್ನು ಸರ್ಕಾರದ ಪತ್ರ ಸಂಖ್ಯೆ: ನಅಇ 222 ಎಸ್ಎಫ್‌ಸಿ 2019 ದಿನಾಂಕ:13-09-2019ರನ್ವಯ ತಡೆ ಹಿಡಿಯಲಾಗಿರುತ್ತದೆ. |
| (ಆ) | ಬಂಗಾರಪೇಟೆ ಮೀಸಲು ವಿಧಾನಸಭಾ ಕ್ಷೇತ್ರದಲ್ಲಿ ಮೂಲಭೂತ ಸೌಲಭ್ಯಗಳ ಕೊರತೆಯಿಂದ ನಾಗರೀಕರು ತೊಂದರೆಗೊಳಗಾಗಿರುವುದನ್ನು ಸರ್ಕಾರ ಗಮನಿಸಿದೆಯೇ; | ಬಂಗಾರಪೇಟೆ ಪುರಸಭೆ ವ್ಯಾಪ್ತಿಯಲ್ಲಿ ವಿವಿಧ ಮೂಲಭೂತ ಸೌಕರ್ಯ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಎಸ್.ಎಫ್.ಸಿ ಮುಕ್ತನಿಧಿ ಅನುದಾನ, ಎಸ್.ಎಫ್.ಸಿ ಕುಡಿಯುವ ನೀರು ಅನುದಾನ, ಸ್ವಚ್ಛ ಭಾರತ ಯೋಜನೆ, ನಗರೋತ್ಥಾನ ಯೋಜನೆ, 14ನೇ ಹಣಕಾಸು ಹಾಗೂ 15ನೇ ಹಣಕಾಸು ಆಯೋಗದ ಅನುದಾನಗಳನ್ನು ಒದಗಿಸಲಾಗಿರುತ್ತದೆ. ವಿವರ ಕೆಳಕಂಡಂತಿರುತ್ತದೆ: |
| (ಇ) | ಮಂಜೂರು ಮಾಡಲಾದ ಅನುದಾನಗಳಲ್ಲಿ ತಡೆಹಿಡಿದಿರುವುದರಿಂದ ಅಭಿವೃದ್ಧಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿಲ್ಲವೇ; | |
| (ಈ) | ಬಂದಿದ್ದಲ್ಲಿ, ಯಾವಾಗ ಬಿಡುಗಡೆ ಮಾಡಲಾಗುವುದು? (ಮಾಹಿತಿಯನ್ನು ಒದಗಿಸುವುದು) | |

**ಎಸ್.ಎಫ್.ಸಿ ಮುಕ್ತನಿಧಿ ಅನುದಾನ**

(ರೂ.ಲಕ್ಷಗಳಲ್ಲಿ)

| ವರ್ಷ | ಹಂಚಿಕೆ | ಬಿಡುಗಡೆ | ವೆಚ್ಚ |
|---|---|---|---|
| 2018-19 | 171.67 | 139.25 | 113.02 |
| 2019-20 | 147.00 | 147.00 | 103.53 |
| 2020-21 | 54.42 | 33.65 | 18.32 |
| ಒಟ್ಟು | **373.09** | **319.90** | **234.87** |

**ಎಸ್.ಎಫ್.ಸಿ ಕುಡಿಯುವ ನೀರು ಅನುದಾನ**

(ರೂ. ಲಕ್ಷಗಳಲ್ಲಿ)

| ವರ್ಷ | ಹಂಚಿಕೆ | ಬಿಡುಗಡೆ | ವೆಚ್ಚ |
|---|---|---|---|
| 2018-19 | 40.00 | 40.00 | 38.46 |
| 2019-20 | 26.00 | 26.00 | 22.89 |
| 2020-21 | 5.00 | 5.00 | 0.00 |
| ಒಟ್ಟು | **71.00** | **71.00** | **61.35** |

| | | ಸ್ವಚ್ಛ ಭಾರತ ಯೋಜನೆ :<br>(ರೂ ಲಕ್ಷಗಳಲ್ಲಿ) |
|---|---|---|

**ಸ್ವಚ್ಛ ಭಾರತ ಯೋಜನೆ :**

(ರೂ ಲಕ್ಷಗಳಲ್ಲಿ)

| ವರ್ಷ | ಹಂಚಿಕೆ | ಬಿಡುಗಡೆ | ವೆಚ್ಚ |
|---|---|---|---|
| 2018-19 | 0.00 | | |
| 2019-20 | 0.00 | | |
| 2020-21 | 100.00 (ಘನ ತ್ಯಾಜ್ಯ ವಸ್ತು ನಿರ್ವಹಣೆ ಕಾಮಗಾರಿಗಳು ಮತ್ತು ಐ.ಇಸಿ ಚಟುವಟಿಕೆಗಳಿಗೆ) | | |

**ನಗರೋತ್ಥಾನ ಯೋಜನೆ** :

(ರೂ ಲಕ್ಷಗಳಲ್ಲಿ)

| ವರ್ಷ | ಹಂಚಿಕೆ | ಬಿಡುಗಡೆ | ವೆಚ್ಚ |
|---|---|---|---|
| 2018-19 | 750.00 | 0.00 | 0.00 |
| 2019-20 | | 197.55 | 197.55 |
| 2020-21 | | 279.58 | 204.08 |
| ಒಟ್ಟು | 750.00 | 477.1 | 401.6 |

**14ನೇ ಹಣಕಾಸು ಆಯೋಗದ ಅನುದಾನ :**

(ರೂ ಲಕ್ಷಗಳಲ್ಲಿ)

| ವಿವರ | ಬಿಡುಗಡೆ |
|---|---|
| 2018-19 ಮೂಲ ಅನುದಾನ | 190.44 |
| 2019-20 ಮೂಲ ಅನುದಾನ | 254.15 |
| 2019-20ನೇ ಸಾಲಿನ ಕಾರ್ಯ ನಿರ್ವಹಣಾ ಅನುದಾನ | 51.72 |

**15ನೇ ಹಣಕಾಸು ಆಯೋಗದ ಅನುದಾನ :**

2020-21ನೇ ಸಾಲಿನಲ್ಲಿ ಮೂಲ ಸೌಕರ್ಯ ಅಭಿವೃದ್ಧಿಗಾಗಿ ರೂ.262.00 ಲಕ್ಷಗಳನ್ನು ಹಂಚಿಕೆ ಮಾಡಿ ಮೊದಲನೆ ಕಂತಿನ ನಿರ್ಬಂಧಿತ ಅನುದಾನ ಮತ್ತು ಮುಕ್ತ ಅನುದಾನ ರೂ.131.00 ಲಕ್ಷಗಳನ್ನು ಬಿಡುಗಡೆಗೊಳಿಸಲಾಗಿರುತ್ತದೆ.

ಈಗಾಗಲೇ ತಡೆ ಹಿಡಿಯಲಾದ ಅನುದಾನದಲ್ಲಿ ಕಾಲಕಾಲಕ್ಕೆ ಹಂತ ಹಂತವಾಗಿ ಅನುದಾನವನ್ನು ಮುಂದುವರೆಸಲು ಕ್ರಮ ಕೈಗೊಳ್ಳಲಾಗಿದ್ದು, ರಾಜ್ಯದ ಆರ್ಥಿಕ ಸಂಪನ್ಮೂಲವನ್ನು ಪರಿಗಣಿಸಿ, ತಡೆ ಹಿಡಿಯಲಾದ ಮೊತ್ತವನ್ನು ಹಂತ ಹಂತವಾಗಿ ಬಿಡುಗಡೆಗೊಳಿಸಲು ಕ್ರಮವಹಿಸಲಾಗುತ್ತಿದೆ.

ಕಡತ ಸಂಖ್ಯೆ:ನಅಇ 57 ಎಸ್.ಎಫ್.ಸಿ 2021

**(ಎನ್. ನಾಗರಾಜ್, ಎಂ.ಟಿ.ಬಿ.)**
ಪೌರಾಡಳಿತ ಹಾಗೂ ಸಕ್ಕರೆ ಸಚಿವರು



# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1079 |
| ಸದಸ್ಯರ ಹೆಸರು | : | ಶ್ರೀ ದಿನಕರ್ ಕೇಶವ್ ಶೆಟ್ಟಿ (ಕುಮಟ) |
| ಉತ್ತರಿಸುವ ದಿನಾಂಕ | : | 05/02/2021 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ ಮತ್ತು ಸಕ್ಕರೆ ಸಚಿವರು |

| ಕ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ಪಟ್ಟಣ ಪಂಚಾಯತ್ ಪುರಸಭೆಯನ್ನು ಮೇಲ್ದರ್ಜೆಗೇರಿಸುವ ಪ್ರಸ್ತಾವನೆ ಸರ್ಕಾರದ ಮುಂದೆ ಇದೆಯೇ; | ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ಪಟ್ಟಣ ಪಂಚಾಯಿತಿಯನ್ನು ಪುರಸಭೆಯನ್ನಾಗಿ ಮೇಲ್ದರ್ಜೆಗೇರಿಸುವ ಕುರಿತು ಪ್ರಸ್ತಾವನೆ ಇರುವುದಿಲ್ಲ. |
| (ಆ) | ಈ ಕುರಿತು ಸರ್ಕಾರದ ಮಟ್ಟದಲ್ಲಿ ಆಗಿರುವ ಕ್ರಮಗಳೇನು? | ಉದ್ಭವಿಸುವುದಿಲ್ಲ. |

**ಸಂಖ್ಯೆ: ನಅಇ 21 ಎಲ್‌ಎಕ್ಯೂ 2021**

(ಎನ್. ನಾಗರಾಜು ಎಂ.ಟಿ.ಬಿ.)
ಪೌರಾಡಳಿತ ಮತ್ತು ಸಕ್ಕರೆ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1102 |
| ಸದಸ್ಯರ ಹೆಸರು | : | ಶ್ರೀ ಲಿಂಗೇಶ್ ಕೆ.ಎಸ್ (ಬೇಲೂರು) |
| ಉತ್ತರಿಸಬೇಕಾದ ದಿನಾಂಕ | : | 05-02-2021 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ ಹಾಗೂ ಸಕ್ಕರೆ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಹಾಸನ ಜಿಲ್ಲೆ ಹೊಳೆನರಸೀಪುರ ಪುರಸಭೆಯಲ್ಲಿ ವಿವಿಧ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲು ಮತ್ತು ಇತರೆ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು State Finance Commission ಯೋಜನೆಯಡಿ ಮತ್ತು ಮಾನ್ಯ ಮುಖ್ಯಮಂತ್ರಿಯವರ ವಿವೇಚನಾ ನಿಧಿಯಡಿಯಲ್ಲಿ ರೂ.10.00 ಕೋಟಿ ಮತ್ತು ರೂ.8.00 ಕೋಟಿಗಳ ಅನುದಾನ ಮಂಜೂರಾತಿಯಾಗಿ ಆದೇಶ ನೀಡಿರುವುದು ನಿಜವೇ; | ಹಾಸನ ಜಿಲ್ಲೆ ಹೊಳೆನರಸೀಪುರ ಪುರಸಭೆ ವ್ಯಾಪ್ತಿಯಲ್ಲಿ ವಿವಿಧ ಮೂಲಭೂತ ಸೌಕರ್ಯ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಸರ್ಕಾರದ ಪತ್ರ ಸಂಖ್ಯೆ: ನಅಇ 145 ಎಸ್‌ಎಫ್‌ಸಿ 2018 ದಿ: 15-11-2018ರಲ್ಲಿ ರೂ.10.00 ಕೋಟಿಗಳನ್ನು ಹಾಗೂ ಸರ್ಕಾರದ ಆದೇಶ ಸಂಖ್ಯೆ: ನಅಇ 03 ಎಸ್‌ಎಫ್‌ಸಿ 2019 ದಿ: 09-01-2019ರಲ್ಲಿ ರೂ.8.00 ಕೋಟಿಗಳ ಎಸ್.ಎಫ್.ಸಿ ವಿಶೇಷ ಅನುದಾನವನ್ನು ಮಂಜೂರು ಮಾಡಲಾಗಿರುತ್ತದೆ. |
| (ಆ) | ಹಾಗಿದ್ದಲ್ಲಿ, ಹೊಳೆನರಸೀಪುರ ಪುರಸಭಾ ವ್ಯಾಪ್ತಿಯಲ್ಲಿ ಸದರಿ ಅನುದಾನದಿಂದ ಯಾವ ಯಾವ ಕಾಮಗಾರಿಗಳನ್ನು ಪುರಸಭೆ ವತಿಯಿಂದ ಹಾಗೂ ಲೋಕೋಪಯೋಗಿ ಇಲಾಖೆಯ ವತಿಯಿಂದ ತೆಗೆದುಕೊಳ್ಳಲಾಗಿದೆ; (ಸಂಪೂರ್ಣ ಮಾಹಿತಿ ನೀಡುವುದು) | ಎಸ್.ಎಫ್.ಸಿ ವಿಶೇಷ ಅನುದಾನ ರೂ 10.00 ಕೋಟಿ ಅನುದಾನದಲ್ಲಿ ವಾಣಿಜ್ಯ ಸಂಕೀರ್ಣ ನಿರ್ಮಿಸುವ ಕಾಮಗಾರಿಯನ್ನು ಲೋಕೋಪಯೋಗಿ ಇಲಾಖೆಯ ವತಿಯಿಂದ ಅನುಷ್ಠಾನಗೊಳಿಸಲಾಗುತ್ತಿದೆ.<br><br>ಎಸ್.ಎಫ್.ಸಿ ವಿಶೇಷ ಅನುದಾನ ರೂ.8.00 ಕೋಟಿ ಅನುದಾನದಲ್ಲಿ 9 ಕಾಮಗಾರಿಗಳನ್ನು ಕೈಗೊಳ್ಳಲು ಉದ್ದೇಶಿಸಲಾಗಿ ಈ ಪೈಕಿ 4 ಕಾಮಗಾರಿಗಳನ್ನು ಪುರಸಭಾ ವತಿಯಿಂದ ಹಾಗೂ 5 ಕಾಮಗಾರಿಗಳನ್ನು ಲೋಕೋಪಯೋಗಿ ಇಲಾಖೆಯಿಂದ ಅನುಷ್ಠಾನಗೊಳಿಸಲಾಗುತ್ತಿದೆ.<br><br>**ಪುರಸಭೆ ವತಿಯಿಂದ ಅನುಷ್ಠಾನಗೊಳಿಸಲಾಗುತ್ತಿರುವ ಕಾಮಗಾರಿಗಳ ವಿವರ:**<br>1) ಹೊಳೆನರಸೀಪುರ ಪುರಸಭಾ ವ್ಯಾಪ್ತಿಯ ಬಸ್ ಸ್ಟ್ಯಾಂಡ್ ಮತ್ತು ರೈಲ್ವೆ ನಿಲ್ದಾಣಗಳ ಮಧ್ಯೆ ನೂತನವಾಗಿ ನಿರ್ಮಾಣ ಆಗುತ್ತಿರುವ ತರಕಾರಿ ಮಾರುಕಟ್ಟೆಗೆ ನೆಲ ಅಂತಸ್ತಿನವರೆಗೆ ಕಾಮಗಾರಿ ಮುಕ್ತಾಯಗೊಂಡಿದ್ದು ಕಾಮಗಾರಿಯ (ಉಳಿಕೆ ಬಿಲ್ ಹೊಂದಾಣಿಕೆ ಬಾಬ್ತು ರೂ 2.70 ಕೋಟಿಗಳು).<br>2) ಹೊಳೆನರಸೀಪುರ ಪುರಸಭಾ ವ್ಯಾಪ್ತಿಯ ಮುಖ್ಯ ರಸ್ತೆಗಳಲ್ಲಿ ಹಾಗೂ ವೃತ್ತಗಳಲ್ಲಿ ಪಟ್ಟಣದ ಸುರಕ್ಷತೆಗಾಗಿ ಸಿ.ಸಿ ಕ್ಯಾಮರಾಗಳನ್ನು ಅಳವಡಿಸುವ ಕಾಮಗಾರಿ (ಅಂದಾಜು ಮೊತ್ತ ರೂ.0.50 ಕೋಟಿ).<br>3) ಹೊಳೆನರಸೀಪುರ ಪುರಸಭೆಯ ಸ್ವಚ್ಛತಾ ಹಾಗೂ ಒಳಚರಂಡಿ ವಿಭಾಗಕ್ಕೆ ಹೂಳು ಎತ್ತುವ ಯಂತ್ರ |

| | | |
|---|---|---|
| | | (Desilting machine) ಖರೀದಿಸುವುದು ಅಂದಾಜು ಮೊತ್ತ ರೂ.0.08 ಕೋಟಿ.<br>4) ಹೊಳೆನರಸೀಪುರ ಪುರಸಭೆಯ ಸ್ವಚ್ಛತಾ ವಿಭಾಗಕ್ಕೆ ಪಟ್ಟಣದ ವ್ಯಾಪ್ತಿಯಲ್ಲಿ ಕ್ರಿಮಿನಾಶಕ ಸಿಂಪಡಿಸಲು Vehicle mounted spraying machine ಖರೀದಿಸುವುದು (ಅಂದಾಜು ಮೊತ್ತ ರೂ.0.07 ಕೋಟಿ).<br><br>**ಲೋಕೋಪಯೋಗಿ ಇಲಾಖೆಯ ವತಿಯಿಂದ ಅನುಷ್ಠಾನಗೊಳಿಸಲಾಗುತ್ತಿರುವ ಕಾಮಗಾರಿಗಳ ವಿವರ** :<br>1) ಹೊಳೆನರಸೀಪುರ ಪುರಸಭಾ ಕಚೇರಿಯ ಮುಖ್ಯಾಧಿಕಾರಿಗಳ ಕೊಠಡಿ ಮತ್ತು ಅಧ್ಯಕ್ಷರು, ಉಪಾಧ್ಯಾಕ್ಷರ ಕೊಠಡಿಗಳನ್ನು ಉನ್ನತೀಕರಿಸುವುದು ಹಾಗೂ ಕಛೇರಿಯ ಎಲ್ಲಾ ಶಾಖೆಗಳಿಗೆ ಪ್ರತ್ಯೇಕ ಕೊಠಡಿಗಳನ್ನು ನಿರ್ಮಿಸುವುದು ಹಾಗೂ ಉನ್ನತೀಕರಿಸುವುದು, ಸಾರ್ವಜನಿಕರು ಮತ್ತು ವಯೋವೃದ್ಧರು ಕಚೇರಿ ಕೆಲಸ ಕಾರ್ಯಗಳಿಗಾಗಿ ಹತ್ತಿ ಇಳಿಯಲು ಲಿಫ್ಟ್ ಅಳವಡಿಸುವುದು ಮತ್ತು ಕಛೇರಿಯ 3ನೇ ಅಂತಸ್ತಿನಲ್ಲಿ ಕಚೇರಿ ಉಪಯೋಗಕ್ಕಾಗಿ ಶೆಡ್ ನಿರ್ಮಾಣ ಕಾಮಗಾರಿ (ಅಂದಾಜು ಮೊತ್ತ ರೂ.0.50 ಕೋಟಿ).<br>2) ಹೌಸಿಂಗ್ ಬೋರ್ಡ್ ವತಿಯಿಂದ ಪುರಸಭೆಗೆ ಹಸ್ತಾಂತರಗೊಂಡ ವಾಣಿಜ್ಯ ಮಳಿಗೆಯ ಉನ್ನತೀಕರಣ ಹಾಗೂ ಮೊದಲನೇ ಅಂತಸ್ತು ನಿರ್ಮಾಣ ಕಾಮಗಾರಿ (ಅಂದಾಜು ಮೊತ್ತ ರೂ.3.00 ಕೋಟಿ).<br>3) ಹೊಳೆನರಸೀಪುರ ಪುರಸಭಾ ವ್ಯಾಪ್ತಿಯ ಅರಕಲಗೂಡು ಮುಖ್ಯ ರಸ್ತೆಯಲ್ಲಿರುವ ಎ.ಪಿ.ಎಂ.ಸಿ ಯಾರ್ಡ್ ಮುಂಭಾಗದ ಖಾಲಿ ನಿವೇಶನದಲ್ಲಿ ಹೊಸದಾಗಿ ವಾಣಿಜ್ಯ ಸಂಕೀರ್ಣ ನಿರ್ಮಾಣ ಕಾಮಗಾರಿ (ಅಂದಾಜು ಮೊತ್ತ ರೂ.0.50 ಕೋಟಿ).<br>4) ಹೊಳೆನರಸೀಪುರ ಪುರಸಭಾ ವ್ಯಾಪ್ತಿಯ ಬಸ್‌ಸ್ಟ್ಯಾಂಡ್ ಮುಂಭಾಗದ ವಾಣಿಜ್ಯ ಸಂಕೀರ್ಣದ ಮೊದಲನೇ ಅಂತಸ್ತು ನಿರ್ಮಾಣ ಕಾಮಗಾರಿ (ಅಂದಾಜು ಮೊತ್ತ ರೂ 0.30 ಕೋಟಿ).<br><br>5) ಹೊಳೆನರಸೀಪುರ ಪುರಸಭೆಗೆ ಸೇರಿದ ಪುರಸಭಾ ಕಛೇರಿಯ ಮುಂಭಾಗದಲ್ಲಿರುವ ವಾಣಿಜ್ಯ ಮಳಿಗೆ, ಟವರ್ ಬ್ಲಾಕ್ ಮೊದಲನೇ ತಿರುವು ಮತ್ತು ಎರಡನೇ ತಿರುವಿನ ವಾಣಿಜ್ಯ ಮಳಿಗೆಗಳು ಹಾಗೂ ಪುರಸಭಾ ಕಛೇರಿಯ ಮುಂಭಾಗದ ವಾಣಿಜ್ಯ ಮಳಿಗೆಯನ್ನು ದುರಸ್ತಿಪಡಿಸುವುದು ಹಾಗೂ ಬಣ್ಣ ಬಳಿಯುವುದು (ಅಂದಾಜು ಮೊತ್ತ ರೂ.0.35 ಕೋಟಿ). |
| (ಇ) | ಎಸ್.ಎಫ್.ಸಿ ಅನುದಾನದಡಿಯಲ್ಲಿ ಹೊಳೆನರಸೀಪುರ ಪುರಸಭೆಯ ವ್ಯಾಪ್ತಿಯಲ್ಲಿರುವ ಈ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಟೆಂಡರ್ ಪ್ರಕ್ರಿಯೆಗಳನ್ನು ಮುಗಿಸಿ ಗುತ್ತಿಗೆದಾರರಿಗೆ | ಸರ್ಕಾರದ ಪತ್ರ ಸಂಖ್ಯೆ: ನಅಇ 145 ಎಸ್‌ಎಫ್‌ಸಿ 2018 ದಿ: 05-01-2019ರಲ್ಲಿ ಹೊಳೆನರಸೀಪುರ ಪುರಸಭಾ ವ್ಯಾಪ್ತಿಯಲ್ಲಿ ತರಕಾರಿ ಮಾರುಕಟ್ಟೆ ಮತ್ತು ವಾಣಿಜ್ಯ ಸಂಕೀರ್ಣಕ್ಕಾಗಿ ಮತ್ತು ಹಾಲಿ ಇರುವ ವಾಣಿಜ್ಯ ಮಳಿಗೆ ಉನ್ನತೀಕರಣ ಮತ್ತು ಮೊದಲನೇ ಅಂತಸ್ತಿನ ನಿರ್ಮಾಣ |

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1107 |
| ಸದಸ್ಯರ ಹೆಸರು | : | ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ) |
| ಉತ್ತರಿಸಬೇಕಾದ ದಿನಾಂಕ | : | 05-02-2021 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ ಹಾಗೂ ಸಕ್ಕರೆ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಪಟ್ಟಣ ಪಂಚಾಯಿತ್‌ಗಳ ಸಮಗ್ರ ಅಭಿವೃದ್ಧಿಗಾಗಿ ಸರ್ಕಾರ ರೂಪಿಸಿ ಅನುಷ್ಠಾನಗೊಳಿಸಲಾಗುತ್ತಿರುವ ಯೋಜನೆಗಳು ಯಾವುವು; | ಪಟ್ಟಣ ಪಂಚಾಯಿತಿಗಳ ಸಮಗ್ರ ಅಭಿವೃದ್ಧಿಗೆ ಸರ್ಕಾರದಿಂದ ರೂಪಿಸಿ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳು ಈ ಕೆಳಕಂಡಂತಿದೆ;<br>1. ಸ್ವಚ್ಛ ಭಾರತ್ ಮಿಷನ್ ಯೋಜನೆ<br>2. 14ನೇ ಹಣಕಾಸು ಆಯೋಗದ ಅನುದಾನ (2015-16 ರಿಂದ 2019-20)<br>3. 15ನೇ ಹಣಕಾಸು ಆಯೋಗದ ಅನುದಾನ (2020-21)<br>4. ನಗರೋತ್ಥಾನ ಹಂತ -3<br>5. ಎಸ್.ಎಫ್.ಸಿ. ಅನುದಾನ<br>• ಎಸ್.ಎಫ್.ಸಿ. ಮುಕ್ತನಿಧಿ,<br>• ಎಸ್.ಎಫ್.ಸಿ. ಕುಡಿಯುವ ನೀರು,<br>• ಎಸ್.ಎಫ್.ಸಿ. ವಿಶೇಷ ಅನುದಾನ. |
| (ಆ) | ಗ್ರಾಮ ಪಂಚಾಯಿತ್‌ಗಳನ್ನು ಪಟ್ಟಣ ಪಂಚಾಯಿತ್‌ಗಳಾಗಿ ಮೇಲ್ದರ್ಜೆಗೇರಿಸುವುದರಿಂದ ಸರ್ಕಾರದಿಂದ ಲಭ್ಯವಾಗುವ ಅನುದಾನಗಳು, ಯೋಜನಾ ಸೌಲಭ್ಯಗಳು ಹಾಗೂ ಸದರಿ ಪ್ರದೇಶಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಡುವ ದಿಶೆಯಲ್ಲಿ ಸರ್ಕಾರದ ಕಾಲ ನಿಗದಿತ ಕ್ರಮಗಳೇನು; | ಹೊಸದಾಗಿ ಮೇಲ್ದರ್ಜೆಗೇರಿದ ಪಟ್ಟಣ ಪಂಚಾಯಿತಿಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಡಲು ಸರ್ಕಾರದಿಂದ ಲಭ್ಯವಾಗುವ ಅನುದಾನಗಳು ಮತ್ತು ಯೋಜನಾ ಸೌಲಭ್ಯಗಳು ಈ ಕೆಳಕಂಡಂತಿವೆ:<br><br>**ಸ್ವಚ್ಛ ಭಾರತ ಮಿಷನ್ ಯೋಜನೆಯಡಿಯಲ್ಲಿ,**<br>• ವೈಯಕ್ತಿಕ ಶೌಚಾಲಯಗಳ ನಿರ್ಮಾಣಕ್ಕೆ ಸಂಬಂಧಿಸಿದಂತೆ ಸ್ವಚ್ಛ ಭಾರತ್ ಮಿಷನ್(ನಗರ) ಪೋರ್ಟಲ್‌ನಲ್ಲಿ ಅನುಮೋದನೆಗೊಂಡ ವೈಯಕ್ತಿಕ ಶೌಚಾಲಯಗಳ ಅರ್ಜಿಗಳ ಆಧಾರದ ಮೇಲೆ ಅನುದಾನವನ್ನು ಬಿಡುಗಡೆ ಮಾಡಲಾಗುತ್ತದೆ.<br>• ಸಾರ್ವಜನಿಕ/ಸಮುದಾಯ ಶೌಚಾಲಯಗಳ ನಿರ್ಮಾಣಕ್ಕೆ ಸಂಬಂಧಿಸಿದಂತೆ ನಿಗದಿತ ನಮೂನೆಯಲ್ಲಿ ದಾಖಲಾತಿಗಳನ್ನು ಸಲ್ಲಿಸಿದ ಆಧಾರದ ಮೇಲೆ ಅನುದಾನವನ್ನು ಬಿಡುಗಡೆ ಮಾಡಲಾಗುತ್ತದೆ.<br><br>• ಘನತ್ಯಾಜ್ಯ ವಸ್ತು ನಿರ್ವಹಣೆಗೆ ಸಂಬಂಧಿಸಿದಂತೆ ನಗರಸ್ಥಳೀಯ ಸಂಸ್ಥೆಗಳಲ್ಲಿನ ತ್ಯಾಜ್ಯ ನಿರ್ವಹಣೆ |

| | | |
| --- | --- | --- |
| | | ಪ್ರಸ್ತುತ ಸ್ಥಿತಿಗತಿ ಹಾಗೂ ಮುಂದಿನ 5 ವರ್ಷಗಳಿಗೆ ತ್ಯಾಜ್ಯ ನಿರ್ವಹಣೆಗೆ ಅಗತ್ಯವಿರುವ ಸಾಮರ್ಥ್ಯವನ್ನು ವಿಶ್ಲೇಷಿಸಿ ಯೋಜನಾ ವರದಿಗಳನ್ನು ಸಿದ್ಧಪಡಿಸಿ ಸರ್ಕಾರದ ಅನುಮೋದನೆ ನೀಡಲಾಗಿದ್ದು, ಸದರಿ ಯೋಜನಾ ವರದಿಗಳ ಬಂಡವಾಳ ಮೊತ್ತದ ಕೇಂದ್ರ ಹಾಗೂ ರಾಜ್ಯದ ಪಾಲಿನ ಅನುದಾನವನ್ನು ಬಿಡುಗಡೆ ಮಾಡಲಾಗುತ್ತದೆ.<br><br>14ನೇ ಹಣಕಾಸು ಆಯೋಗ / 15ನೇ ಹಣಕಾಸು ಆಯೋಗದ ಅನುದಾನವನ್ನು ಮೇಲ್ದರ್ಜೆಗೇರಿಸಿದ ಪಟ್ಟಣ ಪಂಚಾಯಿತಿಗಳನ್ನು ಪರಿಗಣಿಸಿ ಅನುದಾನ ಹಂಚಿಕೆ ಮಾಡಿ ಬಿಡುಗಡೆಗೊಳಿಸಲಾಗುವುದು. ಸದರಿ ಅನುದಾನಗಳಡಿ ಅಗತ್ಯ ಮೂಲಭೂತ ಸೌಕರ್ಯ ಕಾಮಗಾರಿಗಳಾದ ಕುಡಿಯುವ ನೀರು ಸರಬರಾಜು, ನೈರ್ಮಲೀಕರಣ ಮತ್ತು ಒಳಚರಂಡಿ ವ್ಯವಸ್ಥೆ, ಘನತ್ಯಾಜ್ಯ ವಸ್ತು ನಿರ್ವಹಣೆ, ಮಳೆ ನೀರು ಚರಂಡಿ, ರಸ್ತೆ ಮತ್ತು ಪಾದಚಾರಿ ಮಾರ್ಗಗಳ ನಿರ್ವಹಣೆ, ಬೀದಿ ದೀಪಗಳ ನಿರ್ವಹಣೆ ಮತ್ತು ಸಮುದಾಯ ಆಸ್ತಿಗಳ ನಿರ್ವಹಣೆ ಕಾಮಗಾರಿಗಳನ್ನು ಮಾರ್ಗಸೂಚಿಯಲ್ಲಿ ತಿಳಿಸಲಾಗಿದೆ. ಅದರಂತೆ ನಗರ / ಪಟ್ಟಣಗಳ ಅವಶ್ಯಕತೆಗನುಗುಣವಾಗಿ ಕಾಮಗಾರಿಗಳನ್ನು ಕೈಗೊಂಡು ಅನುಷ್ಠಾನಗೊಳಿಸಲಾಗುತ್ತಿದೆ.<br><br>ನಗರೋತ್ಥಾನ (ಮುನಿಸಿಪಾಲಿಟಿ)-3ನೇ ಹಂತದ ಯೋಜನೆಯನ್ನು ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಸರ್ಕಾರವು 2016-17 ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿದ್ದು, ಈ ಯೋಜನೆಯಡಿ ಹೊಸದಾಗಿ ಸೃಜಿಸಲಾದ 38 ಪಟ್ಟಣ ಪಂಚಾಯಿತಿಗಳಿಗೆ ರೂ.5.00 ಕೋಟಿಗಳನ್ನು ಮತ್ತು ಹಾಲಿ ಇದ್ದಂತಹ 51 ಪಟ್ಟಣ ಪಂಚಾಯಿತಿಗಳಿಗೆ ರೂ.2.00 ಕೋಟಿಗಳನ್ನು ಹಂಚಿಕೆ ಮಾಡಿ ಸರ್ಕಾರದ ಆದೇಶ ಸಂಖ್ಯೆ: ನಅಇ 88 ಸಮಸ 2105, ಬೆಂಗಳೂರು, ದಿನಾಂಕ: 29-11-2016ರಲ್ಲಿ ಆದೇಶಿಸಲಾಗಿರುತ್ತದೆ.<br><br>ಸದರಿ ಯೋಜನೆಯಡಿ ಕುಡಿಯುವ ನೀರಿನ ಕಾಮಗಾರಿಗಳು, ರಸ್ತೆ ಅಭಿವೃದ್ಧಿ ಕಾಮಗಾರಿಗಳು, ಮಳೆ ನೀರು ಚರಂಡಿ ಕಾಮಗಾರಿಗಳು, ಒಳ ಚರಂಡಿ ಕಾಮಗಾರಿಗಳು ಹಾಗೂ ಇತರೆ ಅಭಿವೃದ್ಧಿಗಳಾದ ಕಛೇರಿ ಕಟ್ಟಡ ನಿರ್ಮಾಣ, ಶೌಚಾಲಯ ನಿರ್ಮಾಣ, ಬಸ್ ನಿಲ್ದಾಣ ಮತ್ತು ಮಾರುಕಟ್ಟೆ ಸಂಕೀರ್ಣ ನಿರ್ಮಾಣ ಕಾಮಗಾರಿಗಳನ್ನು ಕೈಗೊಳ್ಳಬಹುದಾಗಿದ್ದು, ಸದರಿ ಯೋಜನೆಯಡಿ ಶೇಕಡ 70 ರಷ್ಟು ಆರ್ಥಿಕ ಮತ್ತು ಭೌತಿಕ ಪ್ರಗತಿಯನ್ನು ಸಾಧಿಸಲಾಗಿರುತ್ತದೆ.<br><br>ಎಸ್.ಎಫ್.ಸಿ ಮುಕ್ತನಿಧಿಯ ಮಾರ್ಗಸೂಚಿಯನ್ವಯ ಕುಡಿಯುವ ನೀರು, ತರಕಾರಿ |

ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ವಿಧಾನ ಸಭೆ ಸದಸ್ಯರು | : | ಶ್ರೀ ಶ್ರೀನಿವಾಸ್ (ವಾಸು) ಎಸ್.ಆರ್ |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1036 |
| ಉತ್ತರಿಸಬೇಕಾದ ದಿನಾಂಕ | : | 05.02.2021 |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯ ಸರ್ಕಾರ ಸಹಕಾರಿ ಸಂಘಗಳಿಂದ ರೈತರಿಗೆ ರಾಷ್ಟ್ರೀಯ ಬ್ಯಾಂಕುಗಳ ಮೂಲಕ ಎಷ್ಟೆಷ್ಟು ಸಾಲ ಮನ್ನಾ ಮಾಡಲಾಗಿದೆ: | **ಸಹಕಾರ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ರಾಜ್ಯ ಸರ್ಕಾರ 2018 ನೇ ಸಾಲಿನ ಸಾಲ ಮನ್ನಾ ಯೋಜನೆಯಲ್ಲಿ ಸಹಕಾರ ಸಂಘಗಳಿಂದ ರೈತರು ಬೆಳೆ ಸಾಲ ಪಡೆದು ದಿ:10.07.2018 ಕ್ಕೆ ಹೊರಬಾಕಿ ಹೊಂದಿರುವ ಬೆಳೆ ಸಾಲದಲ್ಲಿ ಕುಟುಂಬಕ್ಕೆ ರೂ.1.00 ಲಕ್ಷಗಳವರೆಗಿನ ಸಾಲ ಮನ್ನಾ ಮಾಡಲಾಗಿದೆ.<br>**ವಾಣಿಜ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>2018-19ನೇ ಸಾಲಿನ ಆಯವ್ಯಯದಲ್ಲಿ ರಾಜ್ಯದ ರೈತರಿಗೆ ಬೆಳೆ ಸಾಲ ಮನ್ನಾ ಮಾಡಲು ರೂಪಿಸಿದ ಯೋಜನೆಯನ್ವಯ ಶೆಡ್ಯೂಲ್ಡ್ ಕಮರ್ಶಿಯಲ್ ಮತ್ತು ಗ್ರಾಮೀಣ ಬ್ಯಾಂಕುಗಳಲ್ಲಿ ಬೆಳೆ ಸಾಲ ಮನ್ನಾ ಸೌಲಭ್ಯ ಪಡೆದ ರೈತರ ಸಂಖ್ಯೆ 9,22,673 ಹಾಗೂ ಮೊತ್ತ ರೂ.7,247.89 ಕೋಟಿಗಳಾಗಿದೆ. ಜಿಲ್ಲಾವಾರು ಮಾಹಿತಿ **ಅನುಬಂಧ-1** ರಲ್ಲಿ ನೀಡಲಾಗಿದೆ. |
| ಆ) | ಸದರಿ ಯೋಜನೆಯಿಂದ ಈವರೆಗೂ ಪ್ರಯೋಜನ ಪಡೆದಿರುವ ಫಲಾನುಭವಿ ರೈತರೆಷ್ಟು: | **ಸಹಕಾರ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ಸಹಕಾರ ಸಂಘಗಳ ಸಾಲ ಮನ್ನಾ ಯೋಜನೆಯಲ್ಲಿ 17,06,049 ರೈತರು ರೂ.7987.47 ಕೋಟಿಗಳ ಸಾಲ ಮನ್ನಾ ಮಾಡಲು ಅರ್ಹತೆ ಗುರುತಿಸಲಾಗಿದೆ. ಜಿಲ್ಲಾವಾರು ವಿವರವನ್ನು **ಅನುಬಂಧ-02** ರಲ್ಲಿ ನೀಡಲಾಗಿದೆ.<br>**ವಾಣಿಜ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>2018-19ನೇ ಸಾಲಿನ ಆಯವ್ಯಯದಲ್ಲಿ ರಾಜ್ಯದ ರೈತರಿಗೆ ಬೆಳೆ ಸಾಲ ಮನ್ನಾ ಮಾಡಲು ರೂಪಿಸಿದ ಯೋಜನೆಯನ್ವಯ ಶೆಡ್ಯೂಲ್ಡ್ ಕಮರ್ಶಿಯಲ್ ಮತ್ತು ಗ್ರಾಮೀಣ ಬ್ಯಾಂಕುಗಳಲ್ಲಿ ಬೆಳೆ ಸಾಲ ಮನ್ನಾ ಸೌಲಭ್ಯ ಪಡೆದ ರೈತರ ಸಂಖ್ಯೆ 9,22,673 ಹಾಗೂ ಮೊತ್ತ ರೂ.7,247.89 ಕೋಟಿಗಳಾಗಿದೆ. ಜಿಲ್ಲಾವಾರು ಮಾಹಿತಿ **ಅನುಬಂಧ-1** ರಲ್ಲಿ ನೀಡಲಾಗಿದೆ. |

| | | |
|---|---|---|
| ಇ) | ಫಲಾನುಭವಿ ರೈತರಿಗೆ ಯಾವ ಯಾವ ಬ್ಯಾಂಕುಗಳಿಂದ ಸಾಲ ಮನ್ನಾ ಮಾಡಿ ಹಣವನ್ನು ಜಮೆ ಮಾಡಲಾಗಿದೆ (ವಿವರ ನೀಡುವುದು)? | **ಸಹಕಾರ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ಸಹಕಾರ ಸಂಘಗಳ ಸಾಲ ಮನ್ನಾ ಯೋಜನೆಯಲ್ಲಿ ಗುರುತಿಸಿದ ಅರ್ಹ ರೈತರ ಪೈಕಿ ಸಹಕಾರ ಬ್ಯಾಂಕುಗಳಲ್ಲಿನ 16,48,820 ರೈತ ಖಾತೆಗಳಿಗೆ ರೂ.7692.33 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. ಜಿಲ್ಲಾವಾರು ವಿವರವನ್ನು **ಅನುಬಂಧ-01** ರಲ್ಲಿ ನೀಡಲಾಗಿದೆ.<br>**ವಾಣಿಜ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ಫಲಾನುಭವಿ ರೈತರಿಗೆ 37 ಬ್ಯಾಂಕ್‌ಗಳಿಂದ ಸಾಲ ಮನ್ನಾ ಮಾಡಿ ಹಣವನ್ನು ಜಮೆ ಮಾಡಲಾಗಿದೆ. ವಿವರವನ್ನು **ಅನುಬಂಧ-3**ರಲ್ಲಿ ನೀಡಲಾಗಿದೆ. |

**ಸಂಖ್ಯೆ: ಸಿಒ 25 ಸಿಎಲ್ಎಸ್ 2021**

(ಎಸ್.ಟಿ. ಸೋಮಶೇಖರ್)
ಸಹಕಾರ ಸಚಿವರು

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1055

ಸದಸ್ಯರ ಹೆಸರು : ಶ್ರೀ ಯತೀಂದ್ರ ಸಿದ್ದರಾಮಯ್ಯ ಡಾ॥ (ವರುಣ)

ಉತ್ತರಿಸುವವರು : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು

ಉತ್ತರಿಸುವ ದಿನಾಂಕ : 05.02.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ನೂತನ ಕೈಗಾರಿಕಾ ನೀತಿಯನ್ನು ಯಾವಾಗ ಜಾರಿಗೆ ತರಲಾಗಿದೆ; ಸದರಿ ನೀತಿಯಲ್ಲಿ ಯಾವ ಅಂಶಗಳನ್ನು ಅಳವಡಿಸಿಕೊಳ್ಳಲಾಗಿದೆ; | ರಾಜ್ಯದಲ್ಲಿ ನೂತನ ಕೈಗಾರಿಕಾ ನೀತಿ 2020-25ನ್ನು ದಿನಾಂಕ 13.08.2020 ರಿಂದ ಅನ್ವಯವಾಗುವಂತೆ ಜಾರಿಗೆ ತರಲಾಗಿದೆ.<br>**ಸದರಿ ನೀತಿಯಡಿ ಕೈಗಾರಿಕಾಭಿವೃದ್ಧಿಗೆ ಪ್ರೋತ್ಸಾಹಿಸಲು ಈ ಕೆಳಕಂಡ ಪ್ರೋತ್ಸಾಹ / ರಿಯಾಯಿತಿ ನೀಡಲು ಅವಕಾಶ ಕಲ್ಪಿಸಿದೆ.**<br>• ಮುದ್ರಾಂಕ ಶುಲ್ಕ ವಿನಾಯಿತಿ ಮತ್ತು ನೋಂದಣಿ ಶುಲ್ಕ ರಿಯಾಯಿತಿ.<br>• ಇಟಿಪಿ ಘಟಕ ಸಹಾಯಧನ.<br>• ಬೃಹತ್ ಕೈಗಾರಿಕೆಗಳಿಗೆ ಅಂಕರ್ ಘಟಕ ಸಹಾಯಧನ.<br>• ಭೂ ಪರಿವರ್ತನಾ ಶುಲ್ಕ ಮರುಪಾವತಿ.<br>• ವಹಿವಾಟಿನ ಆಧಾರಿತ ಬಂಡವಾಳ ಹೂಡಿಕೆ ಸಹಾಯಧನ.<br>• ಸೂಕ್ಷ್ಮ ಮತ್ತು ಸಣ್ಣ ಕೈಗಾರಿಕೆಗಳಿಗೆ ವಿದ್ಯುತ್ ಶುಲ್ಕದ ಮೇಲೆ ತೆರಿಗೆ ವಿನಾಯಿತಿ.<br>• ಎಂಎಸ್‌ಎಂಇ ಕೈಗಾರಿಕೆಗಳಿಗೆ ಹೊಸ ಅನ್ವೇಷಣೆ ಮತು ತಾಂತ್ರಿಕತೆ ಅಳವಡಿಕೆಗೆ ಆರ್ಥಿಕ ಸಹಾಯಧನ.<br>• ರಫ್ತು ಕೈಗಾರಿಕೆಗಳಿಗೆ ವಿವಿಧ ರೀತಿಯ ಪ್ರೋತ್ಸಾಹ ಮತು ರಿಯಾಯಿತಿ.<br>• ಖಾಸಗಿ ಕೈಗಾರಿಕಾ ಪಾರ್ಕ್ ಸ್ಥಾಪನೆಗೆ ಆರ್ಥಿಕ ಸಹಾಯ<br>• ಖಾಸಗಿ ಕೈಗಾರಿಕಾ ಪಾರ್ಕ್‌ನಲ್ಲಿ ಸ್ಥಾಪಿಸುವ MSME ಕೈಗಾರಿಕೆಗಳಿಗೆ ಹೆಚ್ಚುವರಿ ಪ್ರೋತ್ಸಾಹಗಳು,<br>• ಕೌಶಲ್ಯಾಭಿವೃದ್ಧಿಗೆ ಪ್ರೋತ್ಸಾಹಗಳು |

| | | |
|---|---|---|
| | | • ಸಂಶೋಧನೆ ಮತ್ತು ಅಭಿವೃದ್ಧಿಗೆ ಆರ್ಥಿಕ ಸಹಾಯ.<br>• ಆರೋಗ್ಯ ಉದ್ದಿಮೆಗಳಿಗೆ ಬೆಂಬಲ.<br>• ಔಷಧ ಪಾರ್ಕ್ ಸ್ಥಾಪನೆಗೆ ಬೆಂಬಲ.<br>• ವೈದ್ಯಕೀಯ ಉಪಕರಣಗಳ ಪಾರ್ಕ್ ಸ್ಥಾಪನೆಗೆ ಬೆಂಬಲ.<br>ರಾಜ್ಯದಲ್ಲಿ ಸುಲಲಿತ ವ್ಯಾಪಾರ ವಹಿವಾಟು ಹೆಚ್ಚಿಸಲು ವಾತಾವರಣ ನಿರ್ಮಾಣ ಮಾಡುವುದು. |
| ಆ | ಹೊಸ ನೀತಿಯನ್ವಯ ರಾಜ್ಯದಲ್ಲಿ ಅಸ್ತಿತ್ವಕ್ಕೆ ಬಂದಿರುವ ಕೈಗಾರಿಕೆಗಳು ಯಾವುವು ಹಾಗೂ ಎಷ್ಟು ಕಂಪನಿಗಳು ಸ್ಥಾಪಿಸಲು ಆಸಕ್ತಿ ಹೊಂದಿವೆ; (ಪೂರ್ಣ ವಿವರ ನೀಡುವುದು) | ನೂತನ ಕೈಗಾರಿಕಾ ನೀತಿ 2020-25 ಜಾರಿಗೆ ಬಂದ ನಂತರ ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ನೀಡಿಕೆ ಸಮಿತಿ ಸಭೆ ಹಾಗೂ ರಾಜ್ಯ ಮಟ್ಟದ ಏಕಗವಾಕ್ಷಿ ಅನುಮೋದನಾ ಸಮಿತಿ ಸಭೆಗಳಲ್ಲಿ ಒಟ್ಟು 225 ಯೋಜನೆಗಳಿಗೆ ಅನುಮೋದನೆ ನೀಡಲಾಗಿದೆ.<br>ಈ ಯೋಜನೆಗಳಿಂದ ಒಟ್ಟು ರೂ.47627 ಕೋಟಿ ಬಂಡವಾಳ ಹೂಡಿಕೆಯಾಗಲಿದ್ದು, 98,998 ಉದ್ಯೋಗವಕಾಶ ಸೃಜನೆಯಾಗಲಿದೆ. |
| ಇ | ಸದರಿ ಹೊಸ ಕೈಗಾರಿಕೆಗಳು ಹೂಡುವ ಬಂಡವಾಳ ಹಾಗೂ ಸೃಷ್ಟಿಯಾಗಬಹುದಾದ ಉದ್ಯೋಗವೆಷ್ಟು? (ಪೂರ್ಣ ವಿವರ ನೀಡುವುದು) | |

ಸಿಐ 56 ಎಸ್‌ಪಿಐ 2021

(ಜಗದೀಶ್ ಶೆಟ್ಟರ)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು

## ಕರ್ನಾಟಕ ವಿಧಾನ ಸಭೆ

ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ಲಿಂಗೇಶ್ ಕೆ.ಎಸ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1105

ಉತ್ತರಿಸಬೇಕಾದ ದಿನಾಂಕ : 05.02.2021

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸಹಕಾರ ಬ್ಯಾಂಕುಗಳ ಮೂಲಕ ಬೀದಿಬದಿ ವ್ಯಾಪಾರಿಗಳಿಗೆ ಶೂನ್ಯ ಬಡ್ಡಿದರದಲ್ಲಿ "ಬಡವರ ಬಂಧು" ಯೋಜನೆಯನ್ನು ರೂಪಿಸಲಾಗಿದ್ದು, ಈ ಯೋಜನೆಯಲ್ಲಿ ಜಿಲ್ಲಾವಾರು ಎಷ್ಟು ಬೀದಿಬದಿ ವ್ಯಾಪಾರಿಗಳನ್ನು ಯೋಜನೆಯಡಿಯಲ್ಲಿ ಫಲಾನುಭವಿಗಳಾಗಿ ಆಯ್ಕೆ ಮಾಡಲಾಗಿದೆ; ಹಾಗೂ 2020–21 ನೇ ಸಾಲಿನಲ್ಲಿ ಎಷ್ಟು ಹಣವನ್ನು ಬ್ಯಾಂಕುಗಳಿಂದ ಈ ಯೋಜನೆಯಡಿ ನೀಡಲಾಗಿದೆ; (ಜಿಲ್ಲಾವಾರು ಸಂಪೂರ್ಣ ಮಾಹಿತಿ ನೀಡುವುದು) | ಸಹಕಾರ ಬ್ಯಾಂಕುಗಳ ಮೂಲಕ ಬೀದಿಬದಿ ವ್ಯಾಪಾರಿಗಳಿಗೆ ಶೂನ್ಯ ಬಡ್ಡಿದರದಲ್ಲಿ ಸಾಲ ಒದಗಿಸಲು "ಬಡವರ ಬಂಧು" ಯೋಜನೆಯನ್ನು ರೂಪಿಸಲಾಗಿದ್ದು, ಈ ಯೋಜನೆಯಡಿ ಜಿಲ್ಲಾವಾರು ಬೀದಿಬದಿ ವ್ಯಾಪಾರಿಗಳನ್ನು ಫಲಾನುಭವಿಗಳಾಗಿ ಆಯ್ಕೆ ಮಾಡಿರುವ ವಿವರ ಹಾಗೂ ಈ ಯೋಜನೆಯಡಿ 2020–21ನೇ ಸಾಲಿನಲ್ಲಿ ಬ್ಯಾಂಕುಗಳಿಂದ ನೀಡಲಾಗಿರುವ ಸಾಲದ ವಿವರವನ್ನು ಅನುಬಂಧದಲ್ಲಿ ನೀಡಲಾಗಿದೆ. |
| ಆ) | 2020–21 ನೇ ಸಾಲಿನಲ್ಲಿ "ಬಡವರ ಬಂಧು" ಯೋಜನೆಯನ್ನು ಅನುಷ್ಠಾನಗೊಳಿಸಲು ಸರ್ಕಾರದಿಂದ ಎಷ್ಟು ಹಣವನ್ನು ಆಯವ್ಯಯದಲ್ಲಿ ಮೀಸಲಿಡಲಾಗಿತ್ತು; ಇದರಲ್ಲಿ ಎಷ್ಟು ಹಣವನ್ನು ಸಹಕಾರಿ ಬ್ಯಾಂಕುಗಳಿಗೆ ಬಿಡುಗಡೆ ಮಾಡಲಾಗಿದೆ; ಬಿಡುಗಡೆ ಮಾಡಲು ಬಾಕಿ ಎಷ್ಟಿರುತ್ತದೆ; (ಜಿಲ್ಲಾವಾರು ಸಂಪೂರ್ಣ ಮಾಹಿತಿ ನೀಡುವುದು) | 2020–21ನೇ ಸಾಲಿನಲ್ಲಿ ಈ ಯೋಜನೆ ಅನುಷ್ಠಾನಗೊಳಿಸಲು ಸರ್ಕಾರದಿಂದ ರೂ.110.00 ಲಕ್ಷಗಳ ಆಯವ್ಯಯ ಅವಕಾಶ ಕಲ್ಪಿಸಲಾಗಿದೆ. ಸದರಿ ಮೊತ್ತದಲ್ಲಿ ಮೊದಲನೆಯ ಕಂತಿನ ರೂ.27.00 ಲಕ್ಷಗಳನ್ನು ಸರ್ಕಾರದಿಂದ ಬಿಡುಗಡೆ ಮಾಡಲಾಗಿದ್ದು, ಬ್ಯಾಂಕುಗಳಿಂದ ಬಿಲ್ಲುಗಳು ಸ್ವೀಕೃತವಾದ ನಂತರ ಸಂಬಂಧಪಟ್ಟ ಬ್ಯಾಂಕುಗಳಿಗೆ ಬಡ್ಡಿ ಸಹಾಯಧನ ಬಿಡುಗಡೆ ಮಾಡಲು ಕ್ರಮವಿಡಲಾಗುವುದು. |
| ಇ) | ಈ ಯೋಜನೆಯಡಿಯಲ್ಲಿ ನೀಡಿರುವ ಒಟ್ಟು ಸಾಲದ ಮೊತ್ತವೆಷ್ಟು; ಫಲಾನುಭವಿಗಳ ಸಂಖ್ಯೆ ಎಷ್ಟು; ಇದುವರೆಗೂ ಸದರಿ ಸಾಲದ ವಸೂಲಿಯಲ್ಲಿ ಇರುವ ತೊಂದರೆಗಳೇನು; ಬೀದಿಬದಿ ವ್ಯಾಪಾರಿಗಳು ಕೋರೋನಾ ಸೋಂಕು ಹರಡುವಿಕೆಯ ಲಾಕ್‌ಡೌನ್‌ನಿಂದಾಗಿ ತೀವ್ರ ಆರ್ಥಿಕ ಸಂಕಷ್ಟದಲ್ಲಿರುವುದರಿಂದ ಸದರಿ ಯೋಜನೆಯಡಿಯಲ್ಲಿ ನೀಡಿರುವ ಸಾಲವನ್ನು ಮನ್ನಾ ಮಾಡಲು ಸರ್ಕಾರ ಚಿಂತಿಸಿದೆಯೇ? (ಸಂಪೂರ್ಣ ಮಾಹಿತಿ ನೀಡುವುದು) | ಈ ಯೋಜನೆಯಡಿ ಈವರೆಗೆ 29,521 ಬೀದಿಬದಿ ವ್ಯಾಪಾರಿಗಳಿಗೆ ರೂ.22.21 ಕೋಟಿಗಳ ಸಾಲ ನೀಡಲಾಗಿದೆ.<br>ಸದರಿ ಸಾಲವು ಭದ್ರತೆಯಿಲ್ಲದ ಸಾಲವಾಗಿರುವುದರಿಂದ ಸಾಲಗಾರರು ಸುಸ್ತಿಯಾದಲ್ಲಿ ಸಾಲ ವಸೂಲಿ ಮಾಡಲು ತೊಂದರೆಯಾಗುತ್ತಿದೆ.<br>ಈ ಯೋಜನೆಯಡಿ ನೀಡಿರುವ ಸಾಲವನ್ನು ಮನ್ನಾ ಮಾಡುವ ಪ್ರಸ್ತಾವನೆಯು ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿದೆ. |

ಸಂಖ್ಯೆ: ಸಿಒ 30 ಸಿಎಲ್ಎಸ್ 2021

(ಎಸ್.ಟಿ. ಸೋಮಶೇಖರ್)
ಸಹಕಾರ ಸಚಿವರು

ಮಾನ್ಯ ವಿಧಾನಸಭೆಯ ಸದಸ್ಯರಾದ ಶ್ರೀ ಲಿಂಗೇಶ್ ಕೆ.ಎಸ್.(ಬೇಲೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 1105 (ಅ) ಗೆ ಅನುಬಂಧ-4

(ರೂ.ಲಕ್ಷಗಳಲ್ಲಿ)

| ಅ. ನಂ | ಜಿಲ್ಲೆಯ ಹೆಸರು | ಆಯ್ಕೆ ಮಾಡಿರುವ ಫಲಾನುಭವಿಗಳ ಸಂಖ್ಯೆ | ಬಡವರ ಬಂಧು ಯೋಜನೆಯಡಿ 2020-21 ನೇ ಸಾಲಿನಲ್ಲಿ ವಿತರಿಸಿದ ಸಾಲದ ವಿವರ | |
|---|---|---|---|---|
| | | | ಸಂಖ್ಯೆ | ಮೊತ್ತ |
| 1 | 2 | 4 | 5 | 6 |
| 1 | ಬೆಳಗಾವಿ | 2000 | 1295 | 97.85 |
| 2 | ವಿಜಯಪುರ | 500 | 151 | 12.57 |
| 3 | ಬಾಗಲಕೋಟೆ | 1000 | 459 | 27.72 |
| 4 | ಧಾರವಾಡ | 500 | 13 | 1.30 |
| 5 | ಗದಗ | 500 | 41 | 3.25 |
| 6 | ಹಾವೇರಿ | 500 | 103 | 8.35 |
| 7 | ಉತ್ತರ ಕನ್ನಡ | 500 | 64 | 6.30 |
| 8 | ಬಳ್ಳಾರಿ | 700 | 484 | 2.8 |
| 9 | ಬೀದರ | 850 | 193 | 15.94 |
| 10 | ರಾಯಚೂರು | 163 | 163 | 14.41 |
| 11 | ಕೊಪ್ಪಳ | 128 | 108 | 10.20 |
| 12 | ಮೈಸೂರು | 1000 | 171 | 10.28 |
| 13 | ಚಾಮರಾಜನಗರ | 500 | 34 | 2.15 |
| 14 | ಮಂಡ್ಯ | 330 | 325 | 31.54 |
| 15 | ಹಾಸನ | 125 | 125 | 12.5 |
| 16 | ಚಿಕ್ಕಮಗಳೂರು | 49 | 49 | 4.9 |
| 17 | ಕೊಡಗು | 6 | 6 | 0.6 |
| 18 | ದಕ್ಷಿಣ ಕನ್ನಡ | 588 | 588 | 57.89 |
| 19 | ಉಡುಪಿ | 8 | 8 | 0.80 |
| 20 | ಬೆಂಗಳೂರು ನಗರ | 2625 | 0 | 0 |
| 21 | ಬೆಂಗಳೂರು ಗ್ರಾಮಾಂತರ | 375 | 12 | 0.85 |
| 22 | ರಾಮನಗರ | 19 | 10 | 0.23 |
| 23 | ಕೋಲಾರ | 205 | 18 | 1.8 |
| 24 | ಚಿಕ್ಕಬಳ್ಳಾಪುರ | 101 | 22 | 2.2 |
| 25 | ದಾವಣಗೆರೆ | 5 | 1 | 10 |
| 26 | ತುಮಕೂರು | 4201 | 4201 | 422.22 |
| 27 | ಚಿತ್ರದುರ್ಗ | 50 | 21 | 0.63 |
| 28 | ಶಿವಮೊಗ್ಗ | 113 | 113 | 10.57 |
| ಒಟ್ಟು | | 17641 | 8778 | 769.85 |

ಸಹಕಾರ ಸಂಘಗಳ ಅಪರ ನಿಬಂಧಕರು
(ಪತ್ತು)

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1181
2. ಸದಸ್ಯರ ಹೆಸರು : ಶ್ರೀ ಹ್ಯಾರಿಸ್ ಎನ್.ಎ (ಶಾಂತಿನಗರ)
3. ಉತ್ತರಿಸಬೇಕಾದ ದಿನಾಂಕ : 05-02-2021
4. ಉತ್ತರಿಸುವ ಸಚಿವರು : ನಗರಾಭಿವೃದ್ಧಿ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕರ್ನಾಟಕ ನಗರ ಮೂಲ ಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ನಿಯಮಿತ ನಿಗಮದ ವ್ಯಾಪ್ತಿಯಲ್ಲಿ ವಿವಿಧ ನಗರ ಪ್ರದೇಶಗಳಲ್ಲಿ ಕಳೆದ ಎರಡು ವರ್ಷಗಳಲ್ಲಿ ಒದಗಿಸಿಕೊಟ್ಟ ಮೂಲ ಸೌಕರ್ಯಗಳು ಹಾಗೂ ನಿಗಮದ ಯೋಜನಾನುಷ್ಠಾನದ ಗುರಿ-ಸಾಧನೆಗಳೇನು; (ವಿವರ ಒದಗಿಸುವುದು) | ಕರ್ನಾಟಕ ನಗರ ಮೂಲ ಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ನಿಯಮಿತ ನಿಗಮದ ವ್ಯಾಪ್ತಿಯಲ್ಲಿ ವಿವಿಧ ನಗರ ಪ್ರದೇಶಗಳಲ್ಲಿ ಕಳೆದ ಎರಡು ವರ್ಷಗಳಲ್ಲಿ ಒದಗಿಸಿಕೊಟ್ಟ ಮೂಲ ಸೌಕರ್ಯಗಳು ಹಾಗೂ ನಿಗಮದ ಯೋಜನೆಗಳ ವಿವರಗಳು ಈ ಕೆಳಕಂಡಂತಿರುತ್ತದೆ:<br><br>**<u>ಸ್ಮಾರ್ಟ್ ಸಿಟಿ ಯೋಜನೆ</u>**<br><br>ಕೇಂದ್ರ ಸರ್ಕಾರ ಪ್ರಾಯೋಜಿತ ಸ್ಮಾರ್ಟ್ ಸಿಟಿ ಅಭಿಯಾನದಡಿ ಕರ್ನಾಟಕ ನಗರ ಮೂಲ ಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ನಿಗಮ ನಿಯಮಿತ ಸಂಸ್ಥೆಯು ರಾಜ್ಯ ಮಟ್ಟದ ನೋಡಲ್ ಸಂಸ್ಥೆಯಾಗಿರುತ್ತದೆ. ಸ್ಮಾರ್ಟ್ ಸಿಟಿ ಅಭಿಯಾನದಡಿ ರಾಜ್ಯದಿಂದ 1)ಬೆಳಗಾವಿ 2)ದಾವಣಗೆರೆ 3)ಹುಬ್ಬಳ್ಳಿ-ಧಾರವಾಡ 4) ಮಂಗಳೂರು 5) ಶಿವಮೊಗ್ಗ 6)ತುಮಕೂರು ಮತ್ತು 7) ಬೆಂಗಳೂರು ಈ 7 ನಗರಗಳು ಆಯ್ಕೆಯಾಗಿರುತ್ತವೆ.<br><br>ಆಯ್ಕೆಯಾದ ನಗರಗಳಲ್ಲಿ ರಸ್ತೆ ಕಾಮಗಾರಿಗಳು, ಉದ್ಯಾನವನಗಳ ಅಭಿವೃದ್ಧಿ, ಬೀದಿ-ದೀಪ ಅಳವಡಿಕೆ, ಮಾರುಕಟ್ಟೆಗಳ ಅಭಿವೃದ್ಧಿ ಮತ್ತು ಮಾಹಿತಿ ತಂತ್ರಜ್ಞಾನ ಆಧಾರಿತ ನಾಗರಿಕ ಸೇವೆಗಳು ಹೀಗೆ ಹಲವು ರೀತಿಯ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ.<br><br>ಸ್ಮಾರ್ಟ್ ಸಿಟಿ ಅಭಿಯಾನದಡಿ ಮೇಲ್ಕಂಡ 7 ನಗರಗಳಲ್ಲಿ ಇಲ್ಲಿಯವರೆಗೆ ರೂ.1989 ಕೋಟಿಯ 336 ಯೋಜನೆಗಳು ಪೂರ್ಣಗೊಂಡಿದ್ದು, ರೂ.9447 ಕೋಟಿಯ 380 ಯೋಜನೆಗಳು ಪ್ರಗತಿಯಲ್ಲಿರುತ್ತವೆ ಹಾಗೂ ರೂ.1967 ಕೋಟಿಯ 47 ಯೋಜನೆಗಳಿಗೆ ಟೆಂಡರ್ ಕರೆಯಲಾಗಿದೆ.<br><br>**<u>9 ಪಟ್ಟಣಗಳ ಯೋಜನೆ</u>**<br>ಕರ್ನಾಟಕ ಸರ್ಕಾರವು ಪರಿಷ್ಕೃತ ಸರ್ಕಾರಿ ಆದೇಶ ಸಂಖ್ಯೆ: ನಅಇ 14 ಪಿಆರ್‌ಜೆ 2012, ದಿನಾಂಕ:15.12.2017 ರಲ್ಲಿ 9 ಪಟ್ಟಣಗಳಿಗೆ ರೂ.205.87 ಕೋಟಿ ಅಂದಾಜು ವೆಚ್ಚದಲ್ಲಿ ನೀರು ಸರಬರಾಜು ಯೋಜನೆ ಅನುಷ್ಠಾನಕ್ಕೆ ಮಂಜೂರಾತಿ ನೀಡಿದೆ.<br><br>9 ಪಟ್ಟಣಗಳ ಯೋಜನೆಯಡಿಯಲ್ಲಿ ಹಾಲಿ ಇರುವ ಕುಡಿಯುವ ನೀರಿನ ಯೋಜನೆಯ ಉನ್ನತೀಕರಣ ಕಾಮಗಾರಿಯನ್ನು ಮುಲ್ಕಿ, ಕಂಪ್ಲಿ, ತೆಕ್ಕಲಕೋಟೆ, ಕೊಟ್ಟೂರು, ಮಹಾಲಿಂಗಪುರ, ತೇರದಾಳ, ಮುದಗಲ್, ಮುಂಡರಗಿ ಮತ್ತು ಕೆ.ಆರ್ ಪೇಟೆ (ಸಗಟು ನೀರು ಸರಬರಾಜು) ಪಟ್ಟಣಗಳಿಗೆ ಕೈಗೊಳ್ಳಲಾಗಿದೆ. ಎರಡು ವರ್ಷಗಳಲ್ಲಿ ಯೋಜನೆಯ ಅನುಷ್ಠಾನದ ಗುರಿ ಮತ್ತು ಸಾಧನೆಗಳನ್ನು **ಅನುಬಂಧ-1 ರಲ್ಲಿ** ನೀಡಲಾಗಿದೆ. |

| | | |
|---|---|---|
| | | **ವಿಶ್ವಬ್ಯಾಂಕ್ ನೆರವಿನ - ಕರ್ನಾಟಕ ನಗರ ನೀರು ಮತ್ತು ನೈರ್ಮಲ್ಯ ವಲಯ ಸುಧಾರಣಾ ಯೋಜನೆ - (ಕೆಯುಡಬ್ಲ್ಯೂಎಸ್ಐಪಿ)**<br><br>ವಿಶ್ವಬ್ಯಾಂಕ್ ನೆರವಿನ - ಕರ್ನಾಟಕ ನಗರ ನೀರು ಸರಬರಾಜು ಆಧುನೀಕರಣ ಯೋಜನೆ-(ಕೆಯುಡಬ್ಲ್ಯೂಎಸ್ಎಂಪಿ)ಯಲ್ಲಿ ಬೆಳಗಾವಿ, ಕಲಬುರಗಿ ಮತ್ತು ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಗಳ ವ್ಯಾಪ್ತಿ ಪ್ರದೇಶಗಳಿಗೆ ವಿನ್ಯಾಸ-ನಿರ್ಮಾಣ-ಕಾರ್ಯಾಚರಣೆ ಮತ್ತು ನಿರ್ವಹಣೆ-ವರ್ಗಾವಣೆ (DBOT) ಮಾದರಿಯಲ್ಲಿ ಪರಿಣಾಮಕಾರಿ ವೆಚ್ಚದೊಳಗೆ ನಿರಂತರ (24x7) ಒತ್ತಡ ಸಹಿತ ನೀರು ಸರಬರಾಜು ವ್ಯವಸ್ಥೆಯ ಸುಸ್ಥಿರ ಉನ್ನತೀಕರಣ ಯೋಜನೆಯನ್ನು ಅನುಷ್ಠಾನಗೊಳಿಸಲು ಮೆ\|\|ಎಲ್&ಟಿ ಲಿಮಿಟೆಡ್, ಚೆನ್ನೈ ರವರಿಗೆ ಜೂನ್-2020 ರಲ್ಲಿ ಕಾರ್ಯಾದೇಶ ನೀಡಲಾಗಿರುತ್ತದೆ.<br><br>ಕಾಮಗಾರಿಯ ಅನುಷ್ಠಾನ ಅವಧಿ ಐದು ವರ್ಷವಾಗಿದ್ದು, ನಂತರದ 7 ವರ್ಷಗಳ ಅವಧಿಯ ಕಾರ್ಯಾಚರಣೆ ಹಾಗೂ ನಿರ್ವಹಣೆ ಜವಾಬ್ದಾರಿಯನ್ನೂ Design-Build-Operate-Transfer (DBOT) ಗುತ್ತಿಗೆದಾರರು ನಿರ್ವಹಿಸಬೇಕಿರುತ್ತದೆ.<br><br>**ಕ್ರ. ಸಂ** / **ಜಿಲ್ಲೆ/ ನಗರ** / **ಗುತ್ತಿಗೆ ಮೊತ್ತ ರೂ.ಕೋಟಿಗಳಲ್ಲಿ**<br>1 / ಬೆಳಗಾವಿ / 804.13<br>2 / ಕಲಬುರಗಿ / 837.43<br>3 / ಹುಬ್ಬಳ್ಳಿ-ಧಾರವಾಡ / 1206.97<br>/ **ಒಟ್ಟು** / **2848.53**<br><br>ಯೋಜನೆಯು ಪ್ರಾರಂಭಿಕ ಹಂತದಲ್ಲಿದ್ದು, ಕಾಮಗಾರಿಯ ವಿನ್ಯಾಸ ಅವಧಿಯ ಚಟುವಟಿಕೆಗಳು ಪ್ರಾರಂಭವಾಗಿರುತ್ತದೆ. ಗ್ರಾಹಕರ ಸಮೀಕ್ಷೆ, ಸಮಗ್ರ ಮೌಲ್ಯಮಾಪನ ವರದಿ ಸ್ವಾಕೃತಿ ಮತ್ತು ಮೂಲ ಸೌಕರ್ಯ ಸಮೀಕ್ಷೆ ಕಾರ್ಯಗಳು ಪ್ರಗತಿಯಲ್ಲಿರುತ್ತದೆ.<br><br>**ಏಷ್ಯನ್ ಅಭಿವೃದ್ಧಿ ಬ್ಯಾಂಕ್ ಮತ್ತು ಅಮೃತ್ ನೆರವಿನ ಕರ್ನಾಟಕ ಸಮಗ್ರ ನಗರ ನೀರು ನಿರ್ವಹಣಾ ಕಾರ್ಯಕ್ರಮದಡಿ (ಕ್ವಿಮಿಪ್)**<br>ಕೆಯುಐಡಿಎಫ್‌ಸಿ ವತಿಯಿಂದ ಏಷ್ಯನ್ ಅಭಿವೃದ್ಧಿ ಬ್ಯಾಂಕ್ ಮತ್ತು ಅಮೃತ್ ನೆರವಿನ ಕರ್ನಾಟಕ ಸಮಗ್ರ ನಗರ ನೀರು ನಿರ್ವಹಣಾ ಕಾರ್ಯಕ್ರಮವನ್ನು (ಕ್ವಿಮಿಪ್) ರಾಜ್ಯದ ಆಯ್ದ ಎಂಟು (8) ನಗರ ಸ್ಥಳೀಯ ಸಂಸ್ಥೆಗಳಲ್ಲಿ ಅನುಷ್ಠಾನಗೊಳಿಸುತ್ತಿದೆ.<br><br>ಕ್ವಿಮಿಪ್ ಕಾರ್ಯಕ್ರಮವನ್ನು 2 ಟ್ರಾಂಚ್‌ಗಳಾಗಿ ವಿಂಗಡಿಸಲಾಗಿರುತ್ತದೆ. ಟ್ರಾಂಚ್-1 (ದಾವಣಗೆರೆ) ನಾಲ್ಕು (4) ನಗರ ಸ್ಥಳೀಯ ಸಂಸ್ಥೆಗಳಾದ ದಾವಣಗೆರೆ, ಹರಿಹರ, ರಾಣೆಬೆನ್ನೂರು ಮತ್ತು ಬ್ಯಾಡಗಿ ಒಳಗೊಂಡಿರುತ್ತದೆ ಟ್ರಾಂಚ್-2 (ಮಂಗಳೂರು) ನಾಲ್ಕು (4) ನಗರ ಸ್ಥಳೀಯ ಸಂಸ್ಥೆಗಳಾದ ಮಂಗಳೂರು, ಪುತ್ತೂರು, ಉಡುಪಿ ಮತ್ತು ಕುಂದಾಪುರಗಳನ್ನು ಒಳಗೊಂಡಿರುತ್ತದೆ.<br><br>ಎಲ್ಲಾ ಎಂಟು (8) ನಗರ ಸ್ಥಳೀಯ ಸಂಸ್ಥೆಗಳಲ್ಲಿ 24/7 ಕುಡಿಯುವ ನೀರು ಸರಬರಾಜು ಕಾಮಗಾರಿಯನ್ನು ಹಾಗೂ ನಾಲ್ಕು (4) ನಗರ ಸ್ಥಳೀಯ ಸಂಸ್ಥೆಗಳಲ್ಲಿ ಒಳಚರಂಡಿ ಕಾಮಗಾರಿಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. |

ಕರ್ನಾಟಕ ಸರ್ಕಾರ

ಸಂಖ್ಯೆ: ಸಿಐ 35 ಸಿಓಎಫ್ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 04.02.2021

12 stod 05/2/21

ಇವರಿಂದ:

ಸರ್ಕಾರದ ಅಪರ ಮುಖ್ಯಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ವಿಕಾಸಸೌಧ, ಬೆಂಗಳೂರು.

ಇವರಿಗೆ:

ಕಾರ್ಯದರ್ಶಿ(ಪ್ರ)
ಕರ್ನಾಟಕ ವಿಧಾನ ಸಭೆ
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಗಣೇಶ್ ಜೆ.ಎನ್. ಇವರ ಚುಕ್ಕೆ ಗುರುತಿನ ಪ್ರ.ಸಂ:1066ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ: ತಮ್ಮ ಕಛೇರಿ ಪತ್ರ ಸಂಖ್ಯೆ: ವಿಸಪ್ರಶಾ/15ನೇವಿಸ/9ಅ/ಚುಗು-ಚುರ ಪ್ರಶ್ನೆ/06/2021, ಪ್ರಸಂ. 1066/2021, ದಿನಾಂಕ:30.01.2021.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಪತ್ರಗಳ ಕಡೆಗೆ ತಮ್ಮ ಗಮನವನ್ನು ಸೆಳೆಯಲಾಗಿದೆ. ಕಾರ್ಯದರ್ಶಿ ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಗಣೇಶ್ ಜೆ.ಎನ್. ಇವರ ಚುಕ್ಕೆ ಗುರುತಿನ ಪ್ರ.ಸಂ:1066ಕ್ಕೆ ಸಂಬಂಧಿಸಿದಂತೆ ಉತ್ತರದ 350 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿದೆ. ಸದರಿ ಉತ್ತರದ ಸಾಫ್ಟ್ ಪ್ರತಿಗಳನ್ನು ಪಿಡಿಎಫ್ ಮಾದರಿಯಲ್ಲಿ ಇ-ಮೇಲ್ ವಿಳಾಸ **dsqb-kla-kar@nic.inಕ್ಕೆ** ಮುಂದಿನ ಅಗತ್ಯ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತಳಾಗಿದ್ದೇನೆ.

ತಮ್ಮ ನಂಬುಗೆಯ

04/02/2021

(ಜೆ.ಶೀಲಾಬಾಯಿ)
ಸರ್ಕಾರದ ಅಧೀನ ಕಾರ್ಯದರ್ಶಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ
ದೂರವಾಣಿ : 080-22034611

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1066
2. ಸದಸ್ಯರ ಹೆಸರು : ಶ್ರೀ ಗಣೇಶ್ ಜೆ.ಎನ್ (ಕಂಪ್ಲಿ)
3. ಉತ್ತರಿಸಬೇಕಾದ ದಿನಾಂಕ : 05.02.2021
4. ಉತ್ತರಿಸುವ ಸಚಿವರು : ಪೌರಾಡಳಿತ ಮತ್ತು ಸಕ್ಕರೆ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬಳ್ಳಾರಿ ಜಿಲ್ಲೆ, ಕಂಪ್ಲಿ ತಾಲ್ಲೂಕಿನಲ್ಲಿ ಸಕ್ಕರೆ ಕಾರ್ಖಾನೆ ಸ್ಥಗಿತವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಪೂರ್ಣ ವಿವರ ನೀಡುವುದು) | ಬಂದಿದೆ..<br>ಪ್ರಸ್ತುತ ಈ ಕಾರ್ಖಾನೆಯು ಸಮಾಪನೆಯಲ್ಲಿದ್ದು, ಸಹಕಾರ ಸಂಘಗಳ ಜಂಟಿ ನಿಬಂಧಕರು, ಕಲಬುರಗಿ ಪ್ರಾಂತ್ಯ, ರಾಯಚೂರು ಇವರು ಸಮಾಪನಾಧಿಕಾರಿಗಳಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. |
| ಆ) | ಈ ಸಕ್ಕರೆ ಕಾರ್ಖಾನೆಯನ್ನು ಯಾವಾಗ ಪ್ರಾರಂಭಿಸಲಾಯಿತು; | ಕಂಪ್ಲಿ ಸಹಕಾರಿ ಸಕ್ಕರೆ ಕಾರ್ಖಾನೆಯು ಸಹಕಾರ ಸಂಘಗಳ ಕಾಯ್ದೆಯಡಿಯಲ್ಲಿ 1955ರಲ್ಲಿ ನೋಂದಣಿಯಾಗಿದ್ದು, 1958 ರಿಂದ ಕಬ್ಬು ನುರಿಸುವ ಕಾರ್ಯವನ್ನು ಪ್ರಾರಂಭಿಸಿರುತ್ತದೆ. ಈ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯ ಪ್ರಾರಂಭದಲ್ಲಿ 800 ಟಿಸಿಡಿಗಳಿದ್ದು, ನಂತರ 1200 ಟಿಸಿಡಿಗಳಿಗೆ ಹೆಚ್ಚಿಸಲಾಗಿತ್ತು ಹಾಗೂ ಈ ಕಾರ್ಖಾನೆಯು 176.51 ಎಕರೆ ಜಮೀನು ಹೊಂದಿರುತ್ತದೆ |
| ಇ) | ಸದರಿ ಕಾರ್ಖಾನೆಯು ಪ್ರಸ್ತುತ ಸ್ಥಗಿತಗೊಂಡಿರಲು ಕಾರಣವೇನು (ಪೂರ್ಣ ವಿವರ ನೀಡುವುದು)? | ಕಾರ್ಖಾನೆಯ ಆರ್ಥಿಕ ಪರಿಸ್ಥಿತಿ ಹದಗೆಟ್ಟ ಹಿನ್ನೆಲೆಯಲ್ಲಿ ಸರ್ಕಾರವು ಈ ಕಾರ್ಖಾನೆಯನ್ನು ದಿನಾಂಕ21.07.1995ರಲ್ಲಿ ಸಮಾಪನೆಗೊಳಿಸಿ, ಸಮಾಪನಾಧಿಕಾರಿಗಳನ್ನು ನೇಮಿಸಿರುತ್ತದೆ. ನಂತರ ಸರ್ಕಾರವು ಈ ಕಾರ್ಖಾನೆಯನ್ನು ದಿನಾಂಕ: 02.03.1996 ರಂದು ಮೆ\|\| ಸುಂದರಿ ಶುಗರ್ಸ್ ಲಿ., ಹೈದರಾಬಾದ್ ಇವರಿಗೆ ರೂ.8.01 ಕೋಟಿಗಳಿಗೆ ಮಾರಾಟ ಮಾಡಿರುತ್ತದೆ.<br>ಸದರಿ ಮಾರಾಟ ಕರಾರು ಪತ್ರದ ಪ್ರಕಾರ ಖರೀದಿದಾರರು ಹಾಲಿ ಸ್ಥಳದಲ್ಲಿಯೇ ಕಾರ್ಖಾನೆಯನ್ನು ನಡೆಸಬೇಕು ಎಂಬ ನಿಬಂಧನೆ ಇರುತ್ತದೆ. ಆದರೆ, ಮೆ\|\| ಸುಂದರಿ ಶುಗರ್ಸ್‌ರವರು ಕಬ್ಬು ಅರೆಯುವ ಕಾರ್ಯವನ್ನು ನಿರ್ವಹಿಸಿರುವುದಿಲ್ಲ. ಇದಲ್ಲದೆ, ಕಾರ್ಖಾನೆಯ ಯಂತ್ರೋಪಕರಣಗಳನ್ನು ಬೇರೆಡೆಗೆ ಸಾಗಾಣಿಕೆ ಮಾಡಿ ಮಾರಾಟ ಮಾಡಿಕೊಂಡಿರುತ್ತಾರೆ ಎಂಬ ದೂರುಗಳು ಸಹ ಕಾರ್ಖಾನೆಯ ವಿರುದ್ಧ ಕೇಳಿ ಬಂದಿದ್ದವು.<br>ಈ ಹಿನ್ನೆಲೆಯಲ್ಲಿ ಸುಂದರಿ ಶುಗರ್ಸ್‌ರವರಿಗೆ ಆಗಿರುವ ಕಾರ್ಖಾನೆಯ ಜಮೀನು ಮಾರಾಟ ಒಪ್ಪಂದವನ್ನು ರದ್ದುಪಡಿಸಿ, ಸಾವಿರಾರು ರೈತರ ಹಿತದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಸಮಾಪನೆಯಲ್ಲಿರುವ ಈ ಕಾರ್ಖಾನೆಯನ್ನು ಪುನ:ಶ್ಚೇತನಗೊಳಿಸಲು ಆಗ್ರಹಿಸಿ ದಿನಾಂಕ 09.07.2015 ರಂದು ಕಂಪ್ಲಿ ಪಟ್ಟಣದಿಂದ ಕಾರ್ಖಾನೆವರೆಗೆ ವಿವಿಧ ಮಠಾಧೀಶರು ಬೃಹತ್ ಪಾದಯಾತ್ರೆಯನ್ನು ನಡೆಸಿ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿದ್ದರು. ಈ ಸಂಬಂಧ ಕೂಲಂಕಷವಾಗಿ ಪರಿಶೀಲಿಸಲಾಗಿ, ಈ ಕಾರ್ಖಾನೆಯ 176.51 ಎಕರೆ/ ಸೆಂಟ್ಸ್ ಜಮೀನುಗಳನ್ನು ಮೆ\|\| ಸುಂದರಿ ಶುಗರ್ಸ್ ಲಿ., ಈ ಕಾರ್ಖಾನೆಗೆ ಮಾರಾಟ ಮಾಡಿದ್ದು, ಮಾರಾಟದ ಸಂದರ್ಭದಲ್ಲಿ ವಿಧಿಸಲಾಗಿದ್ದ ಷರತ್ತುಗಳನ್ನು ಮತ್ತು ಕಾರ್ಖಾನೆ ಹಾಗೂ ಖರೀದಿದಾರರ ನಡುವೆ ಏರ್ಪಟ್ಟಿರುವ ಕಾರ್ಖಾನೆಯ ಹಸ್ತಾಂತರದ ಷರತ್ತುಗಳನ್ನೊಳಗೊಂಡ ಒಡಂಬಡಿಕೆಯ ಷರತ್ತುಗಳನ್ನು ಸಹ ಉಲ್ಲಂಘಿಸಿರುವುದರಿಂದ ಕರ್ನಾಟಕ ಭೂಸುಧಾರಣಾ ಕಾಯ್ದೆ,1961ರ ಪ್ರಕರಣ 109(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕಂದಾಯ ಇಲಾಖೆಯು ಕಾರ್ಖಾನೆಯ 176.51 ಎಕರೆ ಜಮೀನನ್ನು ದಂಡವನ್ನಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತದೆ ಮತ್ತು ಈ ಜಮೀನಿನ ಎಲ್ಲಾ ಋಣಭಾರಗಳಿಂದ ಮುಕ್ತವಾಗಿ ರಾಜ್ಯ ಸರ್ಕಾರದಲ್ಲಿ ನಿಹಿತವಾಗತಕ್ಕದ್ದೆಂದು ಸರ್ಕಾರದ ಆದೇಶ ಸಂಖ್ಯೆ. ಆರ್‌ಡಿ/18/ಎಲ್‌ಆರ್‌ಎಂ/2017 ದಿನಾಂಕ 11.10.2017 ರಲ್ಲಿ ಆದೇಶ ಹೊರಡಿಸಲಾಗಿತ್ತು.<br>ಸದರಿ ಆದೇಶದ ವಿರುದ್ಧ ಮೆ\|\| ಸುಂದರಿ ಶುಗರ್ಸ್‌ರವರು ಮಾನ್ಯ ಉಚ್ಚ ನ್ಯಾಯಾಲಯ, ಧಾರವಾಡ ಪೀಠ ಇಲ್ಲಿ ರಿಟ್ ಅರ್ಜಿ ಸಂಖ್ಯೆ. 112167/2017 ನ್ನು ದಾಖಲಿಸಿದ್ದರು. ಈ ಸಂಬಂಧ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ 21.10.2019 ರಂದು ಆದೇಶ ನೀಡಿದ್ದು, ಮೆ\|\| ಸುಂದರಿ ಶುಗರ್ಸ್‌ರವರು ರಾಜ್ಯ ಸರ್ಕಾರಕ್ಕೆ ನೀಡುವ ಮನವಿಯನ್ನು ಪರಿಗಣಿಸಿ, 6 ವಾರಗಳೊಳಗಾಗಿ ರಾಜ್ಯ ಸರ್ಕಾರದ ಆದೇಶ ಹೊರಡಿಸಲು ಸೂಚಿಸಿರುತ್ತದೆ. ಸದರಿ ಆದೇಶದಂತೆ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ ಇವರ ಸಮಕ್ಷಮದಲ್ಲಿ ವಿಚಾರಣೆ ನಡೆಸಿ ದಿನಾಂಕ 19.03.2020 ರಂದು ಈ ಕೆಳಕಂಡಂತೆ ಆದೇಶ ಹೊರಡಿಸಿರುತ್ತಾರೆ |

